ತ್ತದೆ. ಬಹುಜನೋಪಾದೇಯವಾಗಬೇಕಾದ ಯಾವ ಕಾರ್ಯವನ್ನು ಪ್ರಾರಂಭಿಸಬೇಕಾದರೂ ಅದಕ್ಕೆ ಮೂಲಸ್ತಂಭವಾಗಿರಲು ಸಕಲ ಸಂಮಾನ್ಯರಾದವರನ್ನಾರನ್ನಾದರೂ ಮೊದಲು ಕಂಡುಹಿಡಿದು, ಅವರನ್ನು ಮುಂದೆ ನಿಲ್ಲಿಸಬೇಕು. ಪ್ರಸಿದ್ಧವಾದ ಹೆಸರೊಂದು ಮಾತ್ರವೇ ಜಗತ್ತಿನಲ್ಲಿ ಎಷ್ಟೋ ಕೆಲಸಗಳನ್ನು ಮಾಡಬಲ್ಲುದು. ಸಾಮಾನ್ಯ ಜನರು ತಮ್ಮ ದೃಷ್ಟಿಗೆ ಗೋಚರವಾಗದಿರುವ ಒಂದು ಭಾವ ಅಥವಾ ತತ್ತ್ವವನ್ನು ಗ್ರಹಿಸುವುದಕ್ಕಿಂತ, ತಮ್ಮ ದೃಷ್ಟಿಗೆ ವಿಷಯನಾದ ಒಬ್ಬ ಮಹಾಪುರುಷನನ್ನು ಸುಲಭವಾಗಿ ನೋಡಿ ಆನಂದಿಸಿ, ಆತನಿಂದ ತಾವು ಕಲಿಯಬೇಕಾದ ಅಭಿಪ್ರಾಯವನ್ನು ಬೇಗ ಗ್ರಹಿಸಬಲ್ಲರು. ಪ್ರತಿಯೊಬ್ಬ ಮಹಾಪುರುಷನೂ ಯಾವುದಾದರೊಂದು ಮಹಾತತ್ತ್ವದ ಅಥವಾ ಮಹೋದ್ದೇಶದ ಮೂರ್ತರೂಪನಾಗಿರುತ್ತಾನೆ. ಆದಕಾರಣ ಇಂತಹ ಮಹಾಪುರುಷರೇ ಸಾಮಾನ್ಯ ಜನರ ವೃತ್ತಿಗೆ ಮಾರ್ಗದರ್ಶಕರಾಗಿರುತ್ತಾರೆ. ಪ್ರಪಂಚದ ಚರಿತ್ರೆಯೆಲ್ಲವೂ ಆದರ ಮಹಾಪುರುಷರ ಚರಿತ್ರೆಯೇ—ಎಂಬ ಸೂಕ್ಷ್ಮವನ್ನು ಇಂಗ್ಲಿಷಿನಲ್ಲಿ ಕಾರ್ಲೈಲ್ ಎಂಬ ತತ್ತ್ವದರ್ಶಿಯು ದೃಷ್ಟಾಂತ ಸಹಿತವಾಗಿ ವಿವರಿಸಿದ್ದಾನೆ. ನಮ್ಮ "ಭಗವದ್ಗೀತೆ"ಯಲ್ಲಿ—

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥

ಎಂದು ಹೇಳಿದೆಯಲ್ಲವೆ? ಇದಕ್ಕೆ ನಿದರ್ಶನಗಳನ್ನು ಈಗ ನಮ್ಮ ದೇಶದಲ್ಲಿಯ ನೂತನ ಸಂಘ ಸಂಸ್ಥೆಗಳಲ್ಲಿ ಕಾಣಬಹುದು. ಈ ಸಂಸ್ಥೆಗಳು ಬಹುಶಃ ಶ್ರೀರಾಮಕೃಷ್ಣಪರಮಹಂಸ, ರಾಮಮೋಹನರಾಯ, ರ್‍ಯಾನಡೆ, ನವರೋಜಿ, ತಿಲಕ್, ವಿವೇಕಾನಂದ, ಗೋಖಲೆ—ಮೊದಲಾದ ಪ್ರಸಿದ್ಧ ಪುರುಷರ ಹೆಸರುಗಳನ್ನಾಶ್ರಯಿಸಿಕೊಂಡು ಹುಟ್ಟಿವೆ. ಹೀಗೆ ದೊಡ್ಡವರೆಂದು ಬಹು ಜನರಿಂದ ಅಂಗೀಕೃತರಾದವರ ಅಂಕಿತದೊಡನೆ ಹುಟ್ಟುವ ಸಂಘ ಸಮಾರಂಭಗಳಿಗೆ ಮುಖ್ಯವಾಗಿ ಎರಡು ಬಗೆಯ ಪ್ರಯೋಜನಗಳುಂಟು :–(೧) ಅವುಗಳನ್ನು ನಡೆಯಿಸುವ ಜನರಿಗೆ ಸ್ವಪ್ರತಿಷ್ಠಾ ದೋಷವು ಆರೋಪಿತವಾಗುವ ಸಂಭವವು ಕಡಿಮೆ. (೨) ಅವುಗಳ ಸ್ವರೂಪ ಆಶಯ

ಗಳನ್ನು ಜನರು ಸುಲಭವಾಗಿ ತಿಳಿದುಕೊಂಡು ಬೇಗನೆ ಅವುಗಳಿಗೆ ಸಹಾಯವಾಗಿ ಬರುವರು. ಈ ರಹಸ್ಯವನ್ನು ವಿದ್ಯಾರಣ್ಯರು ಕಂಡು ಕೊಂಡಿದ್ದ ಕಾರಣದಿಂದಲೇ ಅವರು ಸರ್ವ ಸಮಾರಂಭಗಳಿಗೂ ವಿದ್ಯಾ ತೀರ್ಥರನ್ನು ಮೂಲ ಮೂರ್ತಿಯಾಗಿ ಭಾವಿಸಿಕೊಂಡು, ಅವರು ಇಹ ಲೋಕ ವ್ಯಾಪಾರವನ್ನು ಬಿಟ್ಟ ಬಳಿಕ ಕೂಡ ಅವರ ಹೆಸರಿನ ಮಹಿಮೆ ಯನ್ನು ಕಾಪಾಡಿ, ಅದರ ಆಸರೆಯಲ್ಲಿ ತಮ್ಮ ದೇಶ ಧರ್ಮೋದ್ಧಾರ ಕಾರ್ಯಗಳನ್ನು ನಡೆಯಿಸುತ್ತಿದ್ದರೆಂದು ತೋರುತ್ತದೆ.

## ಶೃಂಗೇರಿಯ ಜೀರ್ಣೋದ್ಧಾರ

ಶೃಂಗೇರಿಯ ಬಳಿ ತುಂಗಾನದಿಯು ಪಶ್ಚಿಮವಾಹಿನಿಯಾಗಿರುವ ಕಡೆ ಈಗ ವಿದ್ಯಾರಣ್ಯಪುರವೆಂದು ಹೆಸರು ಪಡೆದಿರುವ ಪ್ರದೇಶವು ಪೂರ್ವದಲ್ಲಿ ವಸಿಷ್ಠಾಶ್ರಮವಾಗಿತ್ತೆಂದೂ, ವಿದ್ಯಾತೀರ್ಥರು ತಪೋನಿರತ ರಾಗಿದ್ದುದು ಅಲ್ಲಿಯೇ ಎಂದೂ ಜನರು ಹೇಳುತ್ತಾರೆ. ವಿದ್ಯಾತೀರ್ಥರು "ಲಂಬಿಕಾಯೋಗ"ವೆಂಬ ಯೋಗಸಾಧನೆಯಲ್ಲಿ ತುಂಬಾ ಪ್ರೀತಿಯು ಳ್ಳವರಾಗಿದ್ದರಂತೆ. ಅವರು ಕಡೆಗೆ ಇತರ ಮರ್ತ್ಯರಂತೆ ದೇಹತ್ಯಾಗ ಮಾಡದೆ, ಲಂಬಿಕಾಯೋಗ ಮಾರ್ಗದಿಂದ ಕಾಯಿಕ ಮಾನಸಿಕ ವ್ಯಾಪಾರ ಗಳನ್ನು ತೊರೆದು ಪರಿಪೂರ್ಣ ಸಮಾಧಿ ಸ್ಥಿತಿಯನ್ನು ಹೊಂದಿ, ಅದ್ಯಾಪಿ ಆ ಯೋಗನಿದ್ರೆಯಲ್ಲಿಯೇ ಇರುವರೆಂದು ಪೂರ್ವಿಕರು ಹೇಳುವರು. ಇವರ ಸಮಾಧಿ ಸ್ಥಾನದ ಮೇಲೆ, ವಿದ್ಯಾರಣ್ಯರು ವಿದ್ಯಾಶಂಕರನಾಮಕ ವಾದ ಶಿವಲಿಂಗವನ್ನು ಪ್ರತಿಷ್ಠೆಮಾಡಿಸಿ, ತಮಗಿದ್ದ ಗುರು ಪೂಜನೋ ತ್ಸಾಹವನ್ನು ತೋರಿಸಿ ಇತರರಲ್ಲಿ ಅಂತಹ ಭಕ್ತಿಯನ್ನುಂಟುಮಾಡಿಸುವುದ ಕ್ಕಾಗಿಯೂ ಗುರುಗಳ ಖ್ಯಾತಿಯನ್ನು ಶಾಶ್ವತಗೊಳಿಸುವುದಕ್ಕಾಗಿಯೂ ಅದ್ಭುತ ಚಿತ್ರ ಚಿತ್ರಿತವೂ ಸರ್ವಾಂಗ ಸುಂದರವೂ ಆದ ದೇವಾಲಯವನ್ನು ಕಟ್ಟಿಸಿದರು. ಅದಕ್ಕೆ ಅನೇಕ ಚತುರರಾದ ಶಿಲ್ಪಿಗಳ ಅನೇಕ ವರ್ಷಗಳ ಶ್ರಮವೂ ಅನೇಕ ಲಕ್ಷ ರೂಪಾಯಿಗಳ ವೆಚ್ಚವೂ ಮುಟ್ಟಿರಬೇಕು.

ವಿದ್ಯಾತೀರ್ಥರ ಖ್ಯಾತಿಯನ್ನೂ, ಆ ಮೂಲಕ ಸ್ಮಾರ್ತ ಧರ್ಮದ ಪ್ರಾಶಸ್ತ್ಯವನ್ನೂ ಹರಡಿ ಸ್ಥಿರಪಡಿಸುವುದಕ್ಕಾಗಿ ಶೃಂಗೇರಿಯಲ್ಲಿ ಮಾತ್ರ

ವಲ್ಲದೆ ಇತರ ಕಡೆಗಳಲ್ಲಿಯೂ ಅವರು ವಿದ್ಯಾತೀರ್ಥ ದೇವಾಲಯ ಗಳನ್ನು ಕಟ್ಟಿಸುವ ಏರ್ಪಾಟು ಮಾಡಿದ್ದಂತೆ ಕಾಣುತ್ತದೆ. ಕೋಲಾರ ಪ್ರಾಂತದ ಮುಳಬಾಗಲು ಬಳಿಯ ಶಂಕರತೀರ್ಥವೆಂಬ ಕಡೆ ಇರುವ ಗುಡಿಯು ಇಂತಹ ಆಲಯಗಳಲ್ಲೊಂದಿರಬಹುದು.

ಶೃಂಗೇರಿಯ ಮಠದ ಕಾಗದ ಪತ್ರಗಳಿಗೆ ಸ್ವಗುರು ಸ್ಮರಣಾತ್ಮಕವೂ ಬಹ್ವರ್ಥಗರ್ಭಿತವೂ ಆದ "ವಿದ್ಯಾಶಂಕರ" ಎಂಬ ಮುದ್ರಿಕೆಯನ್ನು ಹಾಕಲು ಮೊದಲು ಮಾಡಿಸಿದವರು ವಿದ್ಯಾರಣ್ಯರೇ ಎಂದು ಬಹು ಜನರ ನಂಬಿಕೆಯಿದೆ. ಈ "ವಿದ್ಯಾಶಂಕರ" ನಾಮಾಂಕಿತವು ಕೋಲಾರ ಪ್ರಾಂತದ ಮುಳಬಾಗಲು ಬಳಿಯ ಆವನಿಯ ಮಠದಲ್ಲಿಯೂ ಉಪಯುಕ್ತವಾಗಿರುವುದರಿಂದ ಆ ಅಂಕಿತವನ್ನು ಸರ್ವತ್ರ ಪ್ರಚಾರಗೊಳಿ ಸುವುದು ವಿದ್ಯಾರಣ್ಯರ ತಾತ್ಪರ್ಯವಿದ್ದಿರಬೇಕೆಂದು ನಾವು ಊಹಿಸ ಬಹುದು.

ವಿಜನವಾಗಿ ಏಕಾಂತವಾಸಾರ್ಹವಾಗಿದ್ದ ಶೃಂಗೇರಿಯು ಸತ್ರ ದೇವ ಮಂದಿರಗಳಿಂದ ತುಂಬಿ, ಜಗದ್ವ್ಯಾಪಾರ ಪ್ರವಾಹದೊಳಕ್ಕೆ ಬಂದುದು ವಿದ್ಯಾತೀರ್ಥರ ಪ್ರಭುತ್ವದಲ್ಲಿ. ಅದಕ್ಕೆ ಮುಖ್ಯ ಸಾಧನವಾಗಿದ್ದವರು ವಿದ್ಯಾರಣ್ಯರು. ಈ ಸಂದರ್ಭದಲ್ಲಿ ವಿದ್ಯಾರಣ್ಯರ ಜನಬೋಧನೋತ್ಸಾಹ ವನ್ನು ಪ್ರದರ್ಶಿಸುವ ಇನ್ನು ಕೆಲವಂಶಗಳನ್ನಿಲ್ಲಿ ಸೂಚಿಸಬಹುದು.

(೧) ಅವರು "ಶಂಕರವಿಜಯ" ಗ್ರಂಥವನ್ನು ಬರೆಯಿಸಿದರು. ಜನರಂಜಕವೂ ಸಂಕ್ಷಿಪ್ತವೂ ಆದ ಶ್ರೀ ಶಂಕರಾಚಾರ್ಯರ ಜೀವನ ವೃತ್ತಾಂತವಾವುದೂ ಆಗ ಇರಲಿಲ್ಲವೆಂದು ಮಾಧವೀಯ "ಶಂಕರ ವಿಜಯ"ದ ಮಾತುಗಳಿಂದಲೇ ತೋರಿಬರುತ್ತದೆ. ವೇದಮತ ಪ್ರಚಾ ರಣೆಗೆ ಆಚಾರ್ಯರ ಕಥೆಯು ಅತ್ಯಂತಾವಶ್ಯಕವೆಂದು ತಿಳಿದು ವಿದ್ಯಾ ರಣ್ಯರು ಆ ಗ್ರಂಥವನ್ನು ಬರೆಯಿಸಿರಬೇಕು.

(೨) ಶ್ರೀ ಶಂಕರ ಭಗವತ್ಪಾದಾಚಾರ್ಯರ ಮೂರ್ತಿಯನ್ನೂ ವಿದ್ಯಾರಣ್ಯರೇ ಮೊದಲು ನಿರ್ಮಾಣಮಾಡಿಸಿದವರು.

(೩) ಶೃಂಗೇರಿಯಲ್ಲಿ ವಿದ್ಯಾರಣ್ಯರ ಕಾಲದವರೆಗೂ ಶ್ರೀ ಶಾರದಾ ದೇವಿಯ ಲೋಹ ಪ್ರತಿಮೆಯಿರಲಿಲ್ಲ. ಅದುವರೆಗೂ ಅಲ್ಲಿ ಪೂಜೆಯನ್ನು

ಪಡೆಯುತ್ತಿದ್ದುದು ದಾರುಮಯ ಮೂರ್ತಿ. ಜನಸಾಮಾನ್ಯದ ಅಭಿಷೇಕ ಆರಾಧನೆಗಳನ್ನು ಪಡೆಯಲು ದೇವಿಯ ಲೋಹಮಯ ವಿಗ್ರಹವು ಅತ್ಯಾವಶ್ಯಕವೆಂದು ವಿದ್ಯಾರಣ್ಯರು ಬಗೆದು, ಸುವರ್ಣಾಂಶವನ್ನೇ ಹೆಚ್ಚಾಗಿ ಒಳಗೊಂಡಿರುವ ಪಂಚಲೋಹ ಪ್ರತಿಮೆಯನ್ನು ಮಾಡಿಸಿಟ್ಟರು.

(೪) ಶೃಂಗೇರಿಯ ಮಠಕ್ಕೆ ಅನನ್ಯವಾದ ಬಿರುದುಗಳನ್ನೂ ರಾಜಸನ್ಮಾನಗಳನ್ನೂ ಬಹುಬೆಲೆ ಬಾಳುವ ಭೂ ಕನಕ ವಸ್ತುಗಳನ್ನೂ ಸಂಪಾದಿಸಿಕೊಟ್ಟವರೂ ವಿದ್ಯಾರಣ್ಯರೇ. ಅವರು ಸಾಮಾನ್ಯ ಜನತೆಯ ಮನೋರಂಜನೆಯನ್ನು ಬಹುವಾಗಿ ಲಕ್ಷ್ಯದಲ್ಲಿಟ್ಟಿದ್ದರೆಂಬುದಕ್ಕೆ ಇದೂ ದೃಷ್ಟಾಂತವಾಗಿದೆ. ಹೀಗೆ ಜನ ಸಂಘಕ್ಕೆ ದೂರವಾಗಿ, ಅರಣ್ಯ ಮಧ್ಯದ ಆಶ್ರಮವಾಗಿ, ಯತಿಯೋಗಿಗಳಿಗೆ ಮಾತ್ರ ಗಮ್ಯವಾಗಿದ್ದ ಶೃಂಗೇರಿಯು ಸಕಲ ಸ್ಮಾರ್ತ ಲೋಕವನ್ನೂ ಆಕರ್ಷಿಸಬಲ್ಲ ಪ್ರಸಿದ್ಧ ಕ್ಷೇತ್ರವಾಗಿ, ಪ್ರಪಂಚದ ಆಚಾರ ವ್ಯವಹಾರ ವಿಚಾರಗಳಿಗೆ ನಿರ್ಣಯಸ್ಥಾನವಾದುದು ವಿದ್ಯಾತೀರ್ಥರ ಕಾಲದಲ್ಲಿ.

ವಿದ್ಯಾತೀರ್ಥರ ಕೀರ್ತಿಯು ಈಗಲೂ ಪ್ರಕಾಶಮಾನವಾಗಿದೆ. ಆಳಿದ ಜಗದ್ಗುರುಗಳಾದ ಶೃಂಗೇರಿಯ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಅವರ ಮಾಹಾತ್ಮ್ಯವನ್ನು ಅನೇಕ ಸ್ತೋತ್ರಗಳಲ್ಲಿ ಬಣ್ಣಿಸಿರುವರು. ಅವುಗಳಲ್ಲಿ ಒಂದೆರಡು ಶ್ಲೋಕಗಳನ್ನು ಇಲ್ಲಿ ಪಠಿಸಿ ಬೇರೊಂದು ಕಥೆಗೆ ತಿರುಗೋಣ :—

ಲಂಬಿಕಾಯೋಗ ನಿರತಮಂಬಿಕಾಪತಿ ರೂಪಿಣಂ।
ವಿದ್ಯಾಪ್ರದಂ ನತೌಘಾಯ ವಿದ್ಯಾತೀರ್ಥಮುಪಾಸ್ಮಹೇ ॥

ವಿದ್ಯಾರಣ್ಯ ಪ್ರಮುಖೈರ್ವಿದ್ಯಾಪಾರಂಗತೈ ಸ್ಸೇವ್ಯಂ।
ಅದ್ಯಾಪಿ ಯೋಗನಿರತಂ ವಿದ್ಯಾತೀರ್ಥಂ ನಮಾಮಿ ಯೋಗೀಶಂ॥

ಯತ್ಪ್ರೀತಿ ಪ್ರತಿಪಿತ್ಸುಭಿರ್ಹರಿಹರಾಭಿಖ್ಯಾದ್ಯ ಭೂಪಾಲಕೈ।
ರ್ವಿಪ್ರೇಭ್ಯಃ ಶ್ರುತಿವಿದ್ಭ್ಯ ಏವ ಬಹವೋ ಗ್ರಾಮಾ ವಿಸೃಷ್ಟಾಃ ಪುರಾ ॥
ತದ್ರಾಜವ್ರಜ ವನ್ದ್ಯಮಾನಮನಿಶಂ ರಾಜಾಧಿರಾಜತ್ವದಂ।
ವಿದ್ಯಾತೀರ್ಥ ಪದಾರವಿಂದ ಯುಗಳಂ ವಂದೇ ಜಗತ್ಪಾವನಂ ॥

# ಪರಿಶಿಷ್ಟ (೧)

ಶ್ರೀ ವಿದ್ಯಾತೀರ್ಥರವರ ಮಹಿಮೆಯನ್ನೂ ಶ್ರೀ ವಿದ್ಯಾರಣ್ಯರು ಶೃಂಗೇರಿಗೆ ಮಾಡಿದ ಉಪಕಾರವನ್ನೂ ಕುರಿತು ನಾವು ಹೇಳಿರುವ ಸಂಗತಿಗಳನ್ನು ದೃಢಪಡಿಸುವ ಕೆಲವು ವಾಕ್ಯಗಳನ್ನು ಶೃಂಗೇರೀ ಮಠದ ಸರ್ವಾಧಿಕಾರಿಗಳಾದ ಸದಾಚಾರ ಪ್ರವರ್ತನ ಬ್ರಹ್ಮಶ್ರೀ ಶ್ರೀಕಂಠಶಾಸ್ತ್ರಿಗಳವರ "ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರ ದಿವ್ಯ ಚರಿತ್ರೆ"ಯಿಂದ ಉದ್ಧರಿಸಿ ಇಲ್ಲಿ ಕೊಟ್ಟಿದೆ:—

ಸುಮಾರು ೬೦೦ ವರ್ಷಗಳ ಹಿಂದೆ ಶೃಂಗಗಿರಿ ಮಠದಲ್ಲಿ ಪಟ್ಟಭದ್ರರಾಗಿ ವಿದ್ಯಾತೀರ್ಥರೆಂದು ಪ್ರಸಿದ್ಧರಾಗಿದ್ದ ಯತಿವರ್ಯರು ಯೋಗದಲ್ಲಿ ಪರಮೋತ್ಕರ್ಷವನ್ನು ಪಡೆದವರಾಗಿದ್ದರು. ಅವರಿಗೆ ಲಂಬಿಕಾಯೋಗಸಿದ್ಧಿಯಿದ್ದಿತು. ಲೋಕ ಪ್ರಸಿದ್ಧರಾದ ಭಾರತೀಕೃಷ್ಣತೀರ್ಥರೂ ವಿದ್ಯಾರಣ್ಯರೂ ಅವರ ಸಾಕ್ಷಾಚ್ಛಿಷ್ಯರು. ಆ ಮಹನೀಯರು ಲಂಬಿಕಾಯೋಗವನ್ನು ತಾಳಿ ನಿಷ್ಠೆಯಲ್ಲಿ ಕುಳ್ಳಿರುವುದಕ್ಕೆ ಮೊದಲು ತುಂಗಾನದಿಯ ದಕ್ಷಿಣ ತೀರದಲ್ಲಿ ಸಿಂಹಗಿರಿ ಎಂಬ ಪ್ರದೇಶದಲ್ಲಿ ಒಂದು ಶಿಲಾಪ್ರತಿಕೃತಿಯನ್ನು ಮಾಡಿಸಿ ಅದನ್ನು ಜನಗಳಿಗೆ ತೋರಿಸಿರುವರು. ಆ ಬಿಂಬದ ಮುಂಭಾಗದಲ್ಲಿ ಭಾರತೀಕೃಷ್ಣತೀರ್ಥ ವಿದ್ಯಾರಣ್ಯರೊಡಗೂಡಿ ವಿದ್ಯಾತೀರ್ಥರು ಸಿದ್ಧಾಸನದಲ್ಲಿ ಉತ್ತರಾಭಿಮುಖರಾಗಿರುವಂತೆಯೂ, ಪೂರ್ವಭಾಗದಲ್ಲಿ ಚತುರ್ಮುಖಬ್ರಹ್ಮಮೂರ್ತಿಯೂ, ದಕ್ಷಿಣ ದಿಕ್ಕಿನಲ್ಲಿ ವಿಷ್ಣುಮೂರ್ತಿಯೂ, ಪಶ್ಚಿಮ ಭಾಗದಲ್ಲಿ ಪಂಚಮುಖನಾದ ಈಶ್ವರನ ಮೂರ್ತಿಯೂ, ಮೇಲ್ಭಾಗದಲ್ಲಿ ಲಕ್ಷ್ಮೀನರಸಿಂಹಮೂರ್ತಿಯೂ, ಅದರ ಮೇಲೆ ಲಿಂಗಾಕಾರವೂ ಇರುವುವು. ಹನ್ನೆರಡು ವರ್ಷಗಳನಂತರ ತಮ್ಮ ಶರೀರವು ಲಂಬಿಕಾಯೋಗ ಸಿದ್ಧಿಯಿಂದ ತಾವು ತೋರಿಸಿರುವ ಪ್ರತಿಕೃತಿಯಂತೆ ಪರಿಣಮಿಸುವುದೆಂತಲೂ, ಅದುವರಿಗೆ ಯಾರೊಬ್ಬರೂ ತ್ವರೆಪಟ್ಟು ಯಾವ ರೀತಿಯಿಂದಲೂ ವಿಘ್ನವನ್ನು ಮಾಡಲಾಗದೆಂತಲೂ ಸಮೀಪವರ್ತಿಗಳಿಗೆ ತಿಳಿಸಿ, ತುಂಗಾನದಿಯ ಉತ್ತರ ತೀರದಲ್ಲಿ ಒಂದು ಭೂಗೃಹವನ್ನು ಕಲ್ಪಿಸಿ ಅದರಲ್ಲಿ ಲಂಬಿಕಾಯೋಗತತ್ಪರರಾಗಿ ಕುಳಿತುಕೊಂಡಂತೆಯೂ, ಮೂರುವರ್ಷಗಳು ಕಳೆದನಂತರ ಅದುವರೆಗೆ

ಗುರುಗಳ ಶರೀರವು ಯಾವ ವಿಧವಾಗಿ ಪರಿಣಮಿಸಿರಬಹುದೋ ಎಂದು ಅದನ್ನು ನೋಡುವುದರಲ್ಲಿ ತವಕಪಟ್ಟ ಕೆಲವು ಜನರು ಗುರುಗಳ ಆಜ್ಞೆಗೆ ವಿರುದ್ಧವಾಗಿ ಭೂಗೃಹವನ್ನು ಪ್ರವೇಶಿಸಿ ನೋಡಿದಂತೆಯೂ, ಆ ಕಾಲದಲ್ಲಿ ಗುರುಗಳ ಹಿಂದಿನ ಶರೀರವು ನಷ್ಟವಾಗಿ ಗುರುಗಳಿಂದ ತೋರಿಸಲ್ಪಟ್ಟಿದ್ದ ಪ್ರತಿಕೃತಿಯ ಮೇಲುಭಾಗದಲ್ಲಿದ್ದ ಲಿಂಗಾಕಾರವು ಮಾತ್ರ ಆ ಜನಗಳಿಗೆ ಗೋಚರವಾದಂತೆಯೂ, ಆ ಜನರು ಮತ್ತೆ ಆ ಭೂಗೃಹವನ್ನು ಬಂಧಿಸಿ ಹೊರಟು ಬಂದಂತೆಯೂ, ಅದೇದಿನ ರಾತ್ರಿ ಆಗ ಮಠದಲ್ಲಿದ್ದ ಗುರುಗಳ ಸ್ವಪ್ನದಲ್ಲಿ ವಿದ್ಯಾತೀರ್ಥಶ್ರೀಪಾದರವರು—"ನಮ್ಮ ಸಂಕಲ್ಪಕ್ಕೆ ವಿರುದ್ಧವಾಗಿ ನೀವುಗಳು ನಡೆದಿರುವಿರಿ. ಇದರಿಂದ ನಮ್ಮ ಸಂಕಲ್ಪವು ಈಗ ನೆರವೇರುವುದಕ್ಕೆ ಈಶ್ವರೇಚ್ಛೆ ಇಲ್ಲವೆಂಬ ಅಂಶವು ಸ್ಪಷ್ಟಪಟ್ಟಿತು. ಈಶ್ವರೇಚ್ಛೆಯನ್ನು ಅನ್ಯಥಾ ಮಾಡುವುದರಲ್ಲಿ ಯಾರಿಗೂ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಇನ್ನು ಮುಂದೆ ನಿರೀಕ್ಷಣೆಯು ಅವಶ್ಯಕವಾಗಿಲ್ಲ. ಭೂಗೃಹವನ್ನು ಮುಚ್ಚಿಸಿ ಅದರ ಮೇಲೆ ಈಶ್ವರಲಿಂಗಪ್ರತಿಷ್ಠೆ ಮಾಡುವುದು" ಎಂದು ಆಜ್ಞಾಪಿಸಿದಂತೆಯೂ, ಈ ಸಂಗತಿಯನ್ನು ತಿಳಿದು ಭಾರತೀಕೃಷ್ಣತೀರ್ಥರು, ಆತುರದಿಂದ ಜನರು ನಡೆಸಿದ ಕೃತ್ಯವನ್ನು ಕುರಿತು ಬಹಳವಾಗಿ ವ್ಯಸನಗೊಂಡು, ಗುರುಗಳ ಆಜ್ಞೆಯಂತೆ ಈಶ್ವರಲಿಂಗಪ್ರತಿಷ್ಠೆಯನ್ನು ಮಾಡಬೇಕೆಂದು ನಿಶ್ಚಯಿಸಿ, ಆ ಕಾಲದಲ್ಲಿ ಚಕ್ರವರ್ತಿಗಳಾಗಿಯೂ ತಮ್ಮ ಭಕ್ತರಾಗಿಯೂ ಇದ್ದ ವಿಜಯನಗರದ (ಆನೆಗೊಂದಿ) ಹರಿಹರ ಮಹಾರಾಜರಿಗೆ ತಿಳಿಸಿ ಅವರ ಮೂಲಕ ಅತ್ಯದ್ಭುತರೀತಿಯಿಂದ ದೇವಾಲಯವನ್ನು ನಿರ್ಮಿಸಿ, ಈಶ್ವರಲಿಂಗ ಪ್ರತಿಷ್ಠೆಯನ್ನು ಮಾಡಿಸಿದಂತೆಯೂ ಹೇಳುವ ವದಂತಿಯು ಶೃಂಗಪುರ ನಿವಾಸಿಗಳಾದ ಆಬಾಲವೃದ್ಧ ಜನರಲ್ಲಿ ಈಗಲೂ ಪ್ರಚಾರದಲ್ಲಿರುವುದು. ಈ ವಿದ್ಯಾಶಂಕರಾಲಯವು ಶಾಲಿವಾಹನ ಶಕ ೧೨೫೮–೫೯ನೆಯ ಧಾತುವರ್ಷದಲ್ಲಿ* ವಿಜಯನಗರದ ಅರಸುಗಳಿಂದ ಕಟ್ಟಿಸಲ್ಪಟ್ಟಂತೆಯೂ, ವಿದ್ಯಾತೀರ್ಥಶ್ರೀಪಾದ

* ಇದು ಸಂದೇಹಗ್ರಸ್ತವಾದ ವಿಷಯು. ಪ್ರಾಕ್ತನವಿಮರ್ಶ ವಿಚಕ್ಷಣ ರಾವ್ ಬಹದ್ದೂರ್ ಆರ್ ನರಸಿಂಹಾಚಾರ್ಯರವರು ತಮ್ಮ ೧೯೧೬ನೆಯ ಇಸ್ವಿಯ ಕಾರ್ಯವಿವರಣೆಯಲ್ಲಿ, ೧೭ನೆಯ ವಿಭಾಗದಲ್ಲಿ, ಹೀಗೆ ಬರೆದಿದ್ದಾರೆ:—The Vidyasankara Temple, according to tradition, was built in the Saka year 1260, the year Bahudhanya (A. D 1338), though from a newly discovered inscription at Sringeri, *there is strong reason to infer that it was erected soon after 1356.*

ರವರು ಶಾ|| ೧೨೫೫ನೆಯ ಶ್ರೀಮುಖ ಸಂವತ್ಸರದ ಕಾರ್ತಿಕ ಶುಕ್ಲ ಸಪ್ತಮಿಯಲ್ಲಿ ಲಂಬಿಕಾಯೋಗನಿರತರಾದಂತೆಯೂ ಶ್ರೀಮಠದಲ್ಲಿರುವ ಕೆಲವು ಹಳೆಯ ಕಡತಗಳಿಂದ ತಿಳಿಯಬರುವುದು. ಈ ದೇವಾಲಯದ ಆಕಾರವು ಶ್ರೀ ಚಕ್ರದ ಮೇರುಪ್ರಸ್ತಾರದಂತೆ ಕಂಡುಬರುವುದು. ಇದಕ್ಕೆ ಉಪಯೋಗಿಸಿರುವ ಕಲ್ಲುಗಳು ತುಂಬಾ ಕಠಿನವಾಗಿವೆ. ಇಂತಹ ಕಲ್ಲುಗಳಲ್ಲಿ ಮಾಡಿರುವ ಕೆಲಸವು ಅತಿ ವಿಚಿತ್ರವಾಗಿಯೂ ಸುಂದರವಾಗಿಯೂ ಇರುವುದು. ದೇವಸ್ಥಾನದ ಹೊರಭಾಗದಲ್ಲಿ ಸಪ್ತಲೋಕಗಳೆಂದು ಹೆಸರಿಟ್ಟು ಕೆಳಭಾಗದಿಂದ ಮೇಲಿನವರೆಗೆ ಅನೇಕ ಜೀವಜಂತುಗಳೂ ಮನುಷ್ಯರೂ ದೇವತಾಬಿಂಬಗಳೂ ಪುರಾಣಗಳಿಗೆ ಅನುಸಾರವಾಗಿ ತೋರಿಸಲ್ಪಟ್ಟಿವೆ. ಒಳಭಾಗದಲ್ಲಿ ಮುಖಮಂಟಪವು ಹನ್ನೆರಡು ಸ್ತಂಭಗಳಿಂದ ಯುಕ್ತವಾಗಿಯೂ ಉನ್ನತವಾಗಿಯೂ ನಿರ್ಮಿಸಲ್ಪಟ್ಟಿದೆ. ಈ ಮಂಟಪವನ್ನು ಪ್ರವೇಶಿಸಲು ದಕ್ಷಿಣೋತ್ತರ ಪೂರ್ವ ದಿಕ್ಕುಗಳಲ್ಲಿ ಮೂರು ದ್ವಾರಗಳಿರುವುವು. ಮಂಟಪದ ಸುತ್ತಲೂ ಇರುವ ಹನ್ನೆರಡು ಸ್ತಂಭಗಳು ಮೇಷಾದಿ ದ್ವಾದಶರಾಶಿಗಳಿಂದ ಗುರ್ತಿಸಲ್ಪಟ್ಟಿವೆ. ಇದರ ರಹಸ್ಯವನ್ನು ವಿಚಾರಿಸಿದರೆ ಸೂರ್ಯನು ಮೇಷರಾಶಿಯಲ್ಲಿರುವ ತಿಂಗಳಲ್ಲಿ ಸೂರ್ಯಕಿರಣಗಳು ನಿಯತವಾಗಿ ಆ ರಾಶಿಯಿಂದ ಚಿಹ್ನಿತವಾದ ಸ್ತಂಭವನ್ನು ಸ್ಪರ್ಶಿಸುವುವು. ಇದರಂತೆ ಸೂರ್ಯನು ಆಯಾ ರಾಶಿಯನ್ನು ಹೊಂದಿದಾಗ ಸೂರ್ಯಕಿರಣಗಳು ಆಯಾ ರಾಶಿಗಳಿಂದ ಅಂಕಿತವಾಗಿರುವ ಸ್ತಂಭಗಳಮೇಲೆ ಪ್ರಸರಿಸುವಂತೆ ಶಿಲ್ಪಿಯ ಚಾತುರ್ಯದಿಂದಲೂ ಗಣಿತ ವಿಜ್ಞಾನದಿಂದಲೂ ಕಲ್ಪಿಸಲ್ಪಟ್ಟಿರುವುದಾಗಿ ಕಂಡುಬರುವುದು.

ಶ್ರೀ ವಿದ್ಯಾಶಂಕರಾಲಯದ ಗರ್ಭಗೃಹನಿರ್ಮಾಣವನ್ನು ಯೋಚಿಸಿದರೆ, ಈ ಗರ್ಭಗೃಹವು ಸಿಂಹಗಿರಿಯೆಂಬ ಸ್ಥಳದಲ್ಲಿ ಆ ಶ್ರೀಗಳವರು ಲಂಬಿಕಾಯೋಗಸ್ಥರಾಗುವುದಕ್ಕೆ ಮೊದಲು ಪ್ರದರ್ಶಿಸಿದ ಬಿಂಬದ ಆಕೃತಿಯನ್ನು ಸಂಪೂರ್ಣವಾಗಿ ಅನುಸರಿಸಿರುವುದು. ಇದರಿಂದ ಈ ದೇವಾಲಯಕ್ಕೂ ಸಿಂಹಗಿರಿಯಲ್ಲಿರುವ ಬಿಂಬಕ್ಕೂ ಯಾವುದೋ ಒಂದು ಸಂಬಂಧವಿರಬೇಕಲ್ಲವೇ? ವಿದ್ಯಾಶಂಕರಾಲಯವನ್ನು ನಿರ್ಮಿಸುವುದಕ್ಕೆ ಪೂರ್ವವೇ ಸಿಂಹಗಿರಿಯಲ್ಲಿ ಜನವದಂತಿಗೆ ವಿಷಯವಾದ ಒಂದು ಬಿಂಬವು ಇದ್ದಂತೆ ನಿಶ್ಚೈಸಬೇಕಾಗುವುದು. ಹಾಗೆ ನಿಶ್ಚೈಸಲು ಅಸಂದಿಗ್ಧವಾದ ಪ್ರಮಾಣವು ಹಸ್ತಗತವಾಗಿರುವುದು. ಅದಾವುದೆಂದರೆ:—ಶ್ರೀ ವಿದ್ಯಾಶಂಕರಾಲಯ ಪ್ರತಿಷ್ಠಾಕಾಲದಲ್ಲಿ ಶ್ರೀ ಭಾರತೀಕೃಷ್ಣತೀರ್ಥಸ್ವಾಮಿಗಳವರು ತಮ್ಮ ಶಿಷ್ಯರಾದ ವಿಜಯನಗರ ಸಂಸ್ಥಾನಾಧಿಪತಿಗಳಿಂದ ಸ್ವಾಯತ್ತೀಕೃತವಾಗಿದ್ದ ಗ್ರಾಮಗಳಲ್ಲಿ ೧೫೦ ವೃತ್ತಿಗಳನ್ನು ಕಲ್ಪಿಸಿ

ದೇವತಾಪೂಜೆಗೂ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೂ ವಿನಿಯೋಗಿಸಿರುವರು. ಆ ೧೫೦ ವೃತ್ತಿಗಳಲ್ಲಿ ಒಂದು ವೃತ್ತಿಯು ಸಿಂಹಗಿರಿ ಚತುರ್ಮೂರ್ತಿ ವಿದ್ಯೇಶ್ವರನಿಗೆ ಕೊಡಲ್ಪಟ್ಟಿರುವುದಾಗಿ ತಾಮ್ರಶಾಸನದಿಂದಲೂ ಲೇಖಗಳಿಂದಲೂ ವ್ಯಕ್ತಪಡುವುದಲ್ಲದೆ, ಅವುಗಳಲ್ಲಿ ಹೇಳಿರುವ ಚತುಸ್ಸೀಮಾ ಮಧ್ಯಪಲ್ಲಿಯೇ ತರೀಭೂಮಿಯು ಯಾವವಿಧದಿಂದಲೂ ರೂಪಾಂತರವನ್ನು ಹೊಂದಿಸದೆ ಆ ದೇವರ ಪೂಜಕನ ಅಧೀನವಾಗಿಯೇ ಇರುತ್ತ ಇದುವರೆಗೆ ಆ ಜಮೀನಿನ ಉತ್ಪತ್ತಿಯಿಂದ ಸಿಂಹಗಿರಿಯಲ್ಲಿರುವ ಚತುರ್ಮೂರ್ತಿ ವಿದ್ಯೇಶ್ವರನ ಪೂಜೆಯು ನಡೆದುಬರುತ್ತಿದೆ. ಈ ವಿದ್ಯಮಾನದಿಂದ ವಿದ್ಯಾಶಂಕರಾಲಯ ನಿರ್ಮಾಣಕ್ಕಿಂತಲೂ ಆ ದೇವರ ಪ್ರತಿಷ್ಠೆಯಾಗುವುದಕ್ಕಿಂತಲೂ ಮೊದಲು ಸಿಂಹಗಿರಿಯಲ್ಲಿರುವ ಮೂರ್ತಿಯು ಇದ್ದಿತೆಂದು ಹೇಳುವುದರಲ್ಲಿ ಇದಕ್ಕಿಂತಲೂ ಬಲಿಷ್ಠವಾದ ಪ್ರಮಾಣಾಂತರವು ಅಪೇಕ್ಷಿತವಾಗಲಾರದು. ಪುರಾಣಗಳಲ್ಲಿ ದೇವತಾಮೂರ್ತಿಭೇದಗಳೂ ಆ ಮೂರ್ತಿಗಳ ಸ್ವರೂಪಗಳೂ ಅನೇಕವಾಗಿ ಹೇಳಲ್ಪಟ್ಟಿವೆ. ಆದರೆ ಯಾವ ಪುರಾಣದಲ್ಲಿಯೂ ಸಿಂಹಗಿರಿ ಚತುರ್ಮೂರ್ತಿ ವಿದ್ಯೇಶ್ವರನ ಆಕೃತಿಯಂತೆ ಇರುವ ಮತ್ತೊಂದು ಮೂರ್ತಿಯ ಆಕೃತಿಯನ್ನು ಹೇಳಿರುವಂತೆ ಪ್ರಸಿದ್ಧಿಯಿಲ್ಲ. ದೇವತಾಮೂರ್ತಿಗಳನ್ನು ಪ್ರತಿಷ್ಠಿಸಿ ವಿಶೇಷವಾಗಿ ಆರಾಧಿಸುವ ಸ್ವಭಾವವುಳ್ಳ ನಮ್ಮ ಭರತಖಂಡದೊಳಗೆ ಯಾವ ಪ್ರದೇಶದಲ್ಲಿಯೂ ಸಿಂಹಗಿರಿಯ ಮೂರ್ತಿಯನ್ನು ಹೋಲುವ ಮತ್ತೊಂದು ಮೂರ್ತಿಯು ಇದುವರೆಗೆ ದೃಷ್ಟಿಗೋಚರವಾಗಿರುವಂತೆ ತಿಳಿದುಬರುವುದಿಲ್ಲವು. ಈ ಕಾರಣಗಳಿಂದ ಯೋಗಸಿದ್ಧರಿಗೆ ಸಂಕಲ್ಪಮಾತ್ರದಿಂದ ಯಾವ ಶರೀರವನ್ನಾದರೂ ಪಡೆವುದಕ್ಕೂ ಇಚ್ಛಾಮಾತ್ರದಿಂದ ಶರೀರವನ್ನು ಬಿಡುವುದಕ್ಕೂ ಸಾಮರ್ಥ್ಯವುಂಟಾಗುವುದೆಂದು ಹೇಳುವ ಯೋಗಶಾಸ್ತ್ರವನ್ನು ನಂಬಿ ಚಿರಕಾಲದಿಂದಲೂ ಅನುಸ್ಯೂತವಾಗಿ ಬಂದಿರುವ ವದಂತಿಯಲ್ಲಿ ವಿಶ್ವಾಸವಿಡಲು ಅಭ್ಯಂತರವಿಲ್ಲವೆಂದು ವಿಚಕ್ಷಣರಾದವರಿಗೆ ವೇದ್ಯವಾಗದಿರಲಾರದು.

* * * *

ಶ್ರೀ ವಿದ್ಯಾರಣ್ಯಸ್ವಾಮಿಗಳವರು ವಿಜಯನಗರದಲ್ಲಿ ಕರ್ಣಾಟಕ ಸಿಂಹಾಸನವನ್ನು ಸ್ಥಾಪಿಸುವುದಕ್ಕೆ ಮೊದಲು ಶೃಂಗಗಿರಿಯು ನಗರವಾಗಿದ್ದಂತೆ ತಿಳಿಯಲು ಅವಕಾಶವಿಲ್ಲ. ಶ್ರೀ ವಿದ್ಯಾರಣ್ಯಸ್ವಾಮಿಗಳವರ ಪರಮಾನುಗ್ರಹಕ್ಕೆ ಭಾಜನರಾದ ವಿಜಯನಗರದ ಅರಸುಗಳು ಶಾಲಿವಾಹನ ಶಕ ೧೨೬೭ನೆಯ ಪಾರ್ಥಿವ ಸಂವತ್ಸರದಿಂದ ಶಾ॥ ೧೪೦೮—ನೆಯ ಅಕ್ಷಯ ಸಂವತ್ಸರದವರೆಗೆ ತಮ್ಮ ರಾಷ್ಟ್ರದಲ್ಲಿ ೩,೦೦೦ ವರಹಗಳ ಬೇರೀಜುಳ್ಳ ಗ್ರಾಮಗಳನು

ತಮ್ಮ ಗುರುಗಳಾದ ಭಾರತೀಕೃಷ್ಣತೀರ್ಥರು ಮತ್ತು ವಿದ್ಯಾರಣ್ಯಸ್ವಾಮಿಗಳವರಿಗೆ ಕಾಣಿಕೆಯಾಗಿ ಸಮರ್ಪಿಸಿದಂತೆ ತಿಳಿದುಬರುವುದು. ಸ್ವಾಯತ್ತೀಕೃತವಾದ ಆ ಗ್ರಾಮಗಳನ್ನು ಹಿಂದೆ ಪ್ರಸ್ತಾಪಿಸಿದಂತೆ ೧೫೦ ವೃತ್ತಿಗಳಾಗಿ ವಿಂಗಡಿಸಿ ವಿದ್ಯಾವಂತರೂ ಕುಲೀನರೂ ಕರ್ಮಠರೂ ಆಗಿರುವ ಅನೇಕ ಬ್ರಾಹ್ಮಣ ಕುಟುಂಬಿಗಳನ್ನು ಬಹುದೂರದೇಶದಿಂದ ಬರಮಾಡಿ ಅವರಿಗೆ ಗೃಹಗಳನ್ನು ಮಾಡಿಸಿಕೊಟ್ಟು ಒಂದು ಕುಟುಂಬದ ಜೀವನ ನಿರ್ವಾಹಕ್ಕೆ ೫ ವರಹಗಳ ಬೇರೀಜಿನ ಭೂಮಿಯಂತೆ ಇನಾಂತಿಯನ್ನು ಕೊಟ್ಟು, ಬ್ರಾಹ್ಮಣರ ವಸತಿಯಿಂದ ಶೃಂಗಪುರಿಯನ್ನು ಕಲ್ಪಿಸಿದಂತೆ ಕಂಡುಬರುವುದು. ಶೃಂಗಪುರಾಗ್ರಹಾರ ಬ್ರಾಹ್ಮಣರು ದೂರದೇಶದಿಂದ ಬಂದು ಅಲ್ಲಿ ವಾಸಮಾಡಿದರೆಂಬ ಅಂಶವು ಆಯಾ ಜನರಿಗೆ ಕೊಟ್ಟಿರುವ ಇನಾಂತಿ ಪಟ್ಟಿಗಳಲ್ಲಿ ನಿರ್ದೇಶಿಸಿರುವ ನಾಮ ಗೋತ್ರ ಸೂತ್ರಗಳಿಂದಲೇ ಸ್ಪಷ್ಟಪಡುವುದು. ಈಗ ಶೃಂಗೇರಿಯೆಂದು ಪ್ರಸಿದ್ಧವಾದ ನಗರವಿರುವ ಪ್ರದೇಶವನ್ನು ಶೃಂಗಗಿರಿಯೆಂದು ಕರೆಯುತ್ತಿದ್ದಂತೆ ಹೇಳಬಹುದು. ಈ ಪರ್ವತವು ಪ್ರಸಿದ್ಧರಾದ ಋಷ್ಯಶೃಂಗ ಮಹರ್ಷಿಗಳ ಆಶ್ರಮವಾಗಿದ್ದುದರಿಂದ ಅವರ ಹೆಸರಿನಿಂದಲೇ ಈ ಪರ್ವತಕ್ಕೆ ಋಷ್ಯಶೃಂಗಗಿರಿ ಎಂದು ಪ್ರಸಿದ್ಧಿಯುಂಟಾಯಿತು. ಈಚೆಗೆ ಶ್ರೀ ವಿದ್ಯಾರಣ್ಯಸ್ವಾಮಿಗಳವರು ಈ ಋಷ್ಯಶೃಂಗಗಿರಿಯಲ್ಲಿಯೇ ಊರನ್ನು ನಿರ್ಮಿಸಿದುದರಿಂದ ಇದಕ್ಕೂ ಶೃಂಗನಗರ, ಶೃಂಗಪುರಿ, ಶೃಂಗಗಿರಿ, ಶೃಂಗೇರಿ ಎಂಬ ಹೆಸರುಗಳುಂಟಾದುವು.

ಶೃಂಗಗಿರಿ ಮಠದಲ್ಲಿ ಲೌಕಿಕ ವ್ಯವಹಾರದ ವ್ಯವಸ್ಥೆಗಳೆಲ್ಲವೂ ವಿದ್ಯಾರಣ್ಯಸ್ವಾಮಿಗಳವರ ಕಾಲದಲ್ಲಿ ಏರ್ಪಡಿಸಲ್ಪಟ್ಟುವೆಂದೂ, ಅವರಿಗಿಂತ ಪೂರ್ವದಲ್ಲಿದ್ದ ಗುರುಗಳಿಗೆ ಲೌಕಿಕ ಸಂಬಂಧವಿರಲಿಲ್ಲವೆಂದೂ ಧಾರಾಳವಾಗಿ ಹೇಳಬಹುದು. ಶೃಂಗನಗರ ನಿರ್ಮಾಣದಂತೆ ಮಠದ ಕಟ್ಟಡವೂ ಅವರ ಕಾಲದಲ್ಲಿ ವಿಸ್ತರಿಸಲ್ಪಟ್ಟಿತು. ಆಚಾರ್ಯ ನಿರ್ಮಿತ ಚಂದನದಾರುಮಯ ಶಾರದಾಮೂರ್ತಿಯ ಸ್ಥಾನದಲ್ಲಿ ಅತಿ ಸುಂದರವಾಗಿಯೂ ಹೆಚ್ಚಾದ ಸುವರ್ಣಭಾಗದಿಂದ ಮಿಳಿತವಾಗಿಯೂ ಇರುವ ಪಂಚಲೋಹಮಯ ಶಾರದಾಬಿಂಬವು ಅವರಿಂದಲೇ ಪ್ರತಿಷ್ಠಿಸಲ್ಪಟ್ಟಂತೆ ಪ್ರಸಿದ್ಧಿಯಿರುವುದು. ಈ ಮಠದ ಸ್ವಾಮಿಗಳು ಸ್ವಹಸ್ತಾಕ್ಷರಗಳಿಗೆ ಬದಲಾಗಿ ಉಪಯೋಗಿಸತಕ್ಕ ಮೊಹರು ಶ್ರೀ ವಿದ್ಯಾಶಂಕರ ಎಂಬ ಅಕ್ಷರಗಳಿಂದ ಅಂಕಿತವಾಗಿರುವುದು. ಸಂಸ್ಥಾನಕ್ಕೆ ಸಂಬಂಧಿಸಿದ ಪ್ರತಿಯೊಂದು ಪಾತ್ರೆಯೂ ಶ್ರೀ ವಿದ್ಯಾಶಂಕರ ಎಂಬ ಮಾತಿನಿಂದಲೇ ಅಂಕಿತಮಾಡಲ್ಪಟ್ಟಿರುವುದು. ಹಿಂದಿನ ಗುರುಗಳು ಕೊಟ್ಟಿರುವ ಭೂದಾನ

ಶಾಸನಗಳಲ್ಲಿ ಶ್ರೀ ವಿದ್ಯಾಶಂಕರ ಎಂದು ಒಪ್ಪಿತವು ಹಾಕಲ್ಪಟ್ಟಿದೆ. ವಿದ್ಯಾರಣ್ಯ ಸ್ವಾಮಿಗಳವರು ಸಂಸ್ಥಾನದ ಪ್ರತಿಯೊಂದು ಆಡಳಿತವನ್ನೂ, ಎಲ್ಲಾ ವ್ಯವಸ್ಥೆಗಳನ್ನೂ ತಮ್ಮ ಗುರುಗಳಾದ ವಿದ್ಯಾಶಂಕರರ ಹೆಸರಿನಿಂದಲೇ ಮಾಡಿದರೆಂದು ಅಭಿಪ್ರಾಯಪಡುವುದರಲ್ಲಿ ಇದಕ್ಕಿಂತಲೂ ಬೇರೊಂದು ಪ್ರಮಾಣವು ಅವಶ್ಯಕವಾಗಿರಲಾರದು. ಶ್ರೀ ವಿದ್ಯಾರಣ್ಯಸ್ವಾಮಿಗಳವರು ಶಾ|| ಶಕ ೧೨೫೩ನೆಯ ಪ್ರಜೋತ್ಪತ್ತಿ ಸಂವತ್ಸರದ ಕಾರ್ತಿಕ ಶುದ್ಧ ಸಪ್ತಮಿಯಲ್ಲಿ ಶ್ರೀ ವಿದ್ಯಾತೀರ್ಥ ಸ್ವಾಮಿಗಳವರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ನಿರ್ಯಾಣಕಾಲದಲ್ಲಿ ವಿಜಯನಗರಕ್ಕೆ ಸಮೀಪದಲ್ಲಿರುವ ಪಂಪಾಕ್ಷೇತ್ರದಲ್ಲಿ ವಸತಿ ಮಾಡಿದ್ದು, ಶಾ|| ಶಕ ೧೩೦೮ನೆಯ ಅಕ್ಷಯ ಸಂವತ್ಸರದ ಜ್ಯೇಷ್ಠ ಶುಕ್ಲ ತ್ರಯೋದಶಿ ಇಂದುವಾರದಲ್ಲಿ ಶ್ರೀ ವಿರೂಪಾಕ್ಷೇಶ್ವರನ ಸನ್ನಿಧಿಯಲ್ಲಿ ವಿದೇಹಕೈವಲ್ಯವನ್ನು ಪಡೆದಂತೆ ತಿಳಿದುಬಂದಿದೆ. ಇವರ ನಿರ್ಯಾಣದ ಬಳಿಕ ವಿಜಯನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದ ಬುಕ್ಕರಾಯರ ಮಕ್ಕಳು ಎರಡನೆಯ ಹರಿಹರ ಮಹಾರಾಜರು ತಮ್ಮ ಗುರುಭಕ್ತಿಯನ್ನೂ ಕೃತಜ್ಞತೆಯನ್ನೂ ಪ್ರದರ್ಶಿಸಲು ೫೦೦ ವರಹಗಳ ಬೇರೀಜಿನ ಭೂಮಿಯನ್ನು ೧೦೦ ವೃತ್ತಿಗಳಾಗಿ ಕಲ್ಪಿಸಿ ೯೬ ವೃತ್ತಿಗಳನ್ನು ಬ್ರಾಹ್ಮಣರಿಗೂ ೪ ವೃತ್ತಿಗಳನ್ನು ದೇವರುಗಳಿಗೂ ದಾನಮಾಡಿ, ಶೃಂಗೇರಿಗೆ ದಕ್ಷಿಣಭಾಗದಲ್ಲಿ ವಿದ್ಯಾರಣ್ಯಪುರವೆಂಬ ನಾಮಧೇಯದಿಂದ ಅಗ್ರಹಾರವನ್ನು ನಿರ್ಮಿಸಿ, ವೃತ್ತಿವಂತರಾದ ಬ್ರಾಹ್ಮಣರು ಅಲ್ಲಿ ವಾಸಿಸುವಂತೆ ಮಾಡಿದ್ದಾಗಿ ಆ ರಾಜರು ಕೊಟ್ಟಿರುವ ತಾಮ್ರಶಾಸನದಿಂದ ತಿಳಿದುಬರುವುದು.

---

# ಪರಿಶಿಷ್ಟ (೨)

"ಸರ್ವದರ್ಶನ ಸಂಗ್ರಹ" ಗ್ರಂಥದಲ್ಲಿ ವಿದ್ಯಾರಣ್ಯರು ತಮ್ಮ ಮತ್ತು ತಮ್ಮ ಗುರುಗಳ (ವಿದ್ಯಾತೀರ್ಥರ) ಪೂರ್ವಾಶ್ರಮದ ಹೆಸರುಗಳನ್ನು ಮಾತ್ರವೇ ಹೇಳಿಕೊಂಡಿರುವುದರಿಂದ, ಆ ಗ್ರಂಥವನ್ನು ಬರೆಯುವ ವೇಳೆಗೆ ಅವರಿಬ್ಬರೂ ಸಂನ್ಯಾಸಿಗಳಾಗದೆ ಇನ್ನೂ ಸಂಸಾರಿ ದಶೆಯಲ್ಲಿಯೇ ಇದ್ದಿರ ಬೇಕೆಂದು ಊಹಿಸಬಹುದೆ? ಈ ಊಹೆಯು ಸಾಧುವೆನಿಸಲಾರದೆಂದು ತೋರುತ್ತದೆ. ಏಕೆಂದರೆ, ಸರ್ವಜ್ಞ ವಿಷ್ಣು ಗುರುಗಳೇ ಯತ್ಯಾಶ್ರಮಕ್ಕೆ ಬಾರದಿದ್ದ ಕಾಲದಲ್ಲಿ ಶಿಷ್ಯರಾದ ಮಾಧವ ಪಂಡಿತರೂ ಅವರ ಮಿತ್ರರಾದ ವೇಂಕಟನಾಥಾಚಾರ್ಯರೂ ಬಾಲ್ಯವನ್ನು ಇನ್ನೂ ಬಹುದೂರ ಹಿಂದೆ ಬಿಟ್ಟವರಾಗದೆ ಪ್ರಸಿದ್ಧಿಯನ್ನು ಅರಿತವರಾಗದೆ ಇದ್ದಿರಬೇಕು. ಹಾಗೆ ಇನ್ನೂ ಚಿಕ್ಕ ವಯಸ್ಸಿನವರಾಗಿ ಅಪ್ರಖ್ಯಾತರಾಗಿದ್ದವರ ಗ್ರಂಥಗಳನ್ನು ಪ್ರಮಾಣಗಳೆಂದು ಅಂಗೀಕರಿಸಿ ಅವುಗಳ ವಾಕ್ಯಗಳನ್ನು ಶಾಸ್ತ್ರ ಪ್ರಬಂಧ ಗಳಲ್ಲಿ ಉದಾಹರಿಸುವುದು ಯಾರಿಗೂ ಸರಿಯೆನಿಸದು. "ಸರ್ವದರ್ಶನ ಸಂಗ್ರಹ"ದಲ್ಲಿ ವೇಂಕಟನಾಥ ವಚನಗಳು ಉದಾಹೃತಗಳಾಗಿರುವುದರಿಂದ, ಆ ಗ್ರಂಥದ ರಚನೆಯ ಕಾಲಕ್ಕೆ ವೇಂಕಟನಾಥರು ಪ್ರಸಿದ್ಧರಾದ ಆಚಾರ್ಯ ರಾಗಿ ಸಕಲ ಸಂಮಾನಿತರಾಗಿದ್ದಿರಬೇಕು; ಎಂದರೆ ವಾರ್ಧಕ್ಯವನ್ನು, ಅಥವಾ ಅದರ ಸಾಮೀಪ್ಯವನ್ನು ಸೇರಿದ್ದಿರಬೇಕು—ಎಂದು ನಾವು ಒಪ್ಪ ಬೇಕಾಗುತ್ತದೆ. ಅವರು ಹಾಗೆ ವೃದ್ಧರೂ ಪ್ರಸಿದ್ಧರೂ ಆಗುವವೇಳೆಗೆ ಸರ್ವಜ್ಞ ವಿಷ್ಣುಪಂಡಿತರು ಸಂನ್ಯಾಸದಲ್ಲಿ ಪರಿಣತರಾಗಿಯೇ ಇದ್ದಿರಬೇಕು. ಅಂದಿಗೆ ಮಾಧವಾಚಾರ್ಯರೂ ಅಪರ ವಯಸ್ಸನ್ನು ಸಮೀಪಿಸಿಯೇ ಇದ್ದಿರಬೇಕು. ಹೀಗೆ ನೋಡಲಾಗಿ, "ಸಂಗ್ರಹ" ರಚನೆಯಕಾಲಕ್ಕೆ ಮಾಧವಾಚಾರ್ಯರೂ ಅವರ ಗುರುಗಳೂ ಯತ್ಯಾಶ್ರಮದಿಂದ ಇನ್ನೂ ದೂರರಾಗಿದ್ದರೆಂಬ ಅನುಮಾನಕ್ಕೆ ಎಷ್ಟುಮಾತ್ರವೂ ಎಡೆ ಕಾಣುವುದಿಲ್ಲ. ಇದೂ ಅಲ್ಲದೆ, "ಸಂಗ್ರಹಗ್ರಂಥ"ದ ನಾನಾಪ್ರಕರಣಗಳ ಶೈಲಿಯನ್ನೂ

ರೀತಿಯನ್ನೂ ನೋಡಿದರೆ ಅದು ಅನೇಕ ಶಾಸ್ತ್ರಗಳ ಆಲೋಡನೆಯಿಂದ ಲಾಘವ ಪಾಟವಗಳನ್ನು ಪಡೆದ ಕೈಯ ಕೆಲಸದಂತೆ ತೋರುವುದೇವಿನಾ, ಇನ್ನೂ ಪ್ರಾರಂಭ ದಶೆಯಲ್ಲಿರುವವರ ಕೆಲಸದಂತೆ ಕಾಣುವುದಿಲ್ಲ. ಅದರಲ್ಲಿಯ ವಾದಸರಣಿಯು ಮಿತಪದ ಗುಂಫಿತವಾಗಿ, ಅತಿಮುಖ್ಯ ವಿಷಯಗಳನ್ನು ಮಾತ್ರ ಒಳಗೊಂಡುದಾಗಿ, ಸಿಕ್ಕು ತೊಡಕುಗಳಿಗೆಡೆಗುಡದೆ, ಉದ್ದಾಮವಾದ ಶಾಸ್ತ್ರಧೋರಣೆಯನ್ನನುಸರಿಸಿದೆ. ಇದು ಸಂಪೂರ್ಣ ಪಂಡಿತರೂ ವಿಶೇಷವಾದ ವಿವರಣ ಪರಿಶ್ರಮವುಳ್ಳವರೂ ಆದವರಿಂದ ಮಾತ್ರವೇ ಸಾಧ್ಯವಾದ ಕೆಲಸ. ಎಂದರೆ—"ಸಂಗ್ರಹ"ವನ್ನು ಬರೆಯುವ ವೇಳೆಗೆ ಮಾಧವಾಚಾರ್ಯರು ಜ್ಞಾನವೃದ್ಧರೂ ವಯೋವೃದ್ಧರೂ ಸಹ ಆಗಿದ್ದಿರಬೇಕು. ಶಾಸ್ತ್ರ ಬೋಧಕರಿಗಿರಬೇಕಾದ ವ್ಯಾಖ್ಯಾನ ಕೌಶಲ ರೂಪದ ಜ್ಞಾನವು ಅನುಭವಜನಿತವಾಗಿ ಬರತಕ್ಕದಾದಕಾರಣ, ಆ ಬಗೆಯ ಜ್ಞಾನದ ಅಭಿವೃದ್ಧಿಯು ಬಹುಮಟ್ಟಿಗೆ ವಯೋನುಗುಣವಾಗಿರುವುದೆಂದೇ ಹೇಳ ಬೇಕಾಗುವುದು. ಹೀಗೆ ನೋಡಿದರೂ "ಸಂಗ್ರಹ" ರಚನೆಯ ಕಾಲಕ್ಕೆ ಮಾಧವಾಚಾರ್ಯರು ಮುಪ್ಪಿನ ಹತ್ತಿರಕ್ಕೆ ಬಂದಿದ್ದರೆಂದೂ ಅವರ ಗುರುಗಳು ಯತಿಗಳಾಗಿಯೇ ಇದ್ದಿರಬೇಕೆಂದೂ ತೀರ್ಮಾನಿಸಬೇಕಾಗುವುದು.

ಇನ್ನು, "ಸಂಗ್ರಹ" ಗ್ರಂಥದಲ್ಲಿಯ ಶಾಂಕರ ದರ್ಶನ ಪ್ರಕರಣವು ವಿದ್ಯಾರಣ್ಯ ಕೃತವೇ ಸರಿ—ಎಂಬ ವಿಷಯದಲ್ಲಿ ಹಿಂದೆ ಕೊಟ್ಟಿರುವ ಕಾರಣಗಳ (ಪುಟ ೨೫) ಜೊತೆಗೆ ಇನ್ನೊಂದನ್ನು ತೋರಿಸಬಹುದು. ಅದೇನೆಂದರೆ—ಗ್ರಂಥದಲ್ಲಿ ೧ ರಿಂದ ೧೫ ರ ವರೆಗಿನ ಪ್ರಕರಣಗಳ ಉಪಕ್ರಮ ರೀತಿ ಉಪಸಂಹಾರ ರೀತಿಗಳೂ, ಪೂರ್ವಪಕ್ಷ ಸಮಾಧಾನಗಳ ಪರಿಪಾಟಿಯೂ, ಸಿದ್ಧಾಂತ ಪ್ರತಿಪಾದನಕ್ರಮವೂ ಹೇಗಿವೆಯೋ, ೧೬ನೆಯ ಪ್ರಕರಣವಾದ "ಶಾಂಕರ ದರ್ಶನ" ನಿರೂಪಣೆಯಲ್ಲಿಯೂ ಆ ಲಕ್ಷಣಗಳು ಹಾಗೆಯೇ ಕಾಣಬರುತ್ತವೆ. ಇದರಿಂದ, ಈ ಕಡೆಯ ಪ್ರಕರಣವೂ ಗ್ರಂಥದ ಇತರ ಭಾಗಗಳೂ ಸಮಾನ ಕರ್ತೃಕಗಳಾದವು ಎಂಬಂಶವು ಸ್ಥಿರಪಡುತ್ತದೆ. ಇದೂ ಅಲ್ಲದೆ "ಸರ್ವ ದರ್ಶನ ಸಂಗ್ರಹ"ಕ್ಕೆ "ದರ್ಶನಾಂಕುರ"ವೆಂಬ ವ್ಯಾಖ್ಯಾನವನ್ನು ಬರೆದಿರುವ ಮಹಾಮಹೋಪಾ

ಧ್ಯಾಯ ಬಿರುದಾಂಕಿತರಾದ ಬ್ರಹ್ಮಶ್ರೀ ಅಭ್ಯಂಕರ ವಾಸುದೇವಶಾಸ್ತ್ರಿಗಳವರು ಹೀಗೆ ಅಭಿಪ್ರಾಯಪಟ್ಟಿರುವರು :—

ಶ್ರೀಮದ್ವಿದ್ಯಾರಣ್ಯ ಮುನಿಭಿರಪಿ ಪಂಚದಶ್ಯಾದಿ ಪ್ರಬಂಧಾನ್ವಿರಚ್ಯ ತತ್ರ ದಾಕ್ಷೇಪ ನಿರಸನಪೂರ್ವಕಮದ್ವೈತವಾದ ಏವ ಪ್ರಸ್ಥಾಪಿತಃ । ತೀಕ್ಷ್ಣಬುದ್ಧಯಶ್ಚ ಸಹೃದಯಾ ದರ್ಶನಾಂತರಾಣ್ಯಾಲೋಚ್ಯ ತೇಷು ಸರ್ವೇಷ್ವದ್ವೈತವಾದ ಏವ ಸಾರಭೂತ ಇತಿ ನಿಶ್ಚೇತುಂ ಪ್ರಭವಂತಿ। ಯೇಚ ಸಾಧಾರಣಮತಯಸ್ತಾದೃಶಂ ನಿಶ್ಚಯಂ ಕರ್ತುಂ ನಪಾರಯಂತಿ ತೇಷ್ವಪಿ ಕತಿಚಿದ್ವಿಶಿಷ್ಟಪುರುಷಾ ಏಕತ್ರ ಸಂಗೃಹೀತಾನ್ಯನೇಕಾನಿ ದರ್ಶನಾನಿ ಪಶ್ಯೇಯುಶ್ಚೇದಿದಮೀದೃಶಮಿದಮೀದೃಶಮಿತ್ಯೇವಂ ತಾರತಮ್ಯಮವಗಂತುಂ ಶಕ್ನುಯುರೇವ। ಯಥಾ ವಿವಿಧೇಷ್ವನೇಕೇಷು ರತ್ನೇಷು ಪಾರ್ಥಕ್ಯೇನೇಕೈಕಶೋವಲೋಕಿತೇಷು ಸಾರಾಸಾರ ವಿವೇಕಾಯ ಯಾದೃಶಂ ಬುದ್ಧೇಸ್ತೈಕ್ಷ್ಣ್ಯಮಪೇಕ್ಷ್ಯತೇ ನ ತಾದೃಶಸ್ಯ ತೈಕ್ಷ್ಣ್ಯಸ್ಯಾಪೇಕ್ಷಾ ತೇಷ್ವೇವ ರತ್ನೇಷ್ವೇಕಸ್ಯಾಂ ಮಾಲಾಯಾಂ ಗುಂಫಿತೇಷು ಸಂಭಾವ್ಯತೇ । ಅಮುಮೇವಾರ್ಥಂ ಹೃದಿ ನಿಧಾಯ ಶ್ರೀಮತ್ಸಾಯಣ ಮಾಧವಾಚಾರ್ಯೈಃ ಸರ್ವದರ್ಶನ ಸಂಗ್ರಹಾಭಿಧೋ ಗ್ರಂಥೋ ನಿರಮಾಯೀತಿ ಮನ್ಯೇ ॥..............................

ಶ್ರೀಮಚ್ಛಂಕರಾಚಾರ್ಯಾಣಾಂ ಮನೋಗತಮವಧಾರಯಿತುಂ ಪ್ರದರ್ಶಯಿತುಂ ಚ ಪ್ರವರ್ತಮಾನಾಃ ಪೃಥಿವ್ಯಾಂ ಲಲಾಮಭೂತಾ ಬೃಹಸ್ಪತಿಪ್ರತಿಮಬುದ್ಧಯಃ ಶ್ರೀಪದ್ಮಪಾದಾಚಾರ್ಯ ವಾಚಸ್ಪತಿಮಿಶ್ರ ಸಾಯಣ ಮಾಧವಾಚಾರ್ಯ ಪ್ರಭೃತಯಃ ಪಂಚಷಾ ಭಾಷ್ಯವಿತ್ತಮಾ ಅಭೂವನ್। ತೇಷ್ವವಗತಸ್ಯ ಗೂಢಾರ್ಥಸ್ಯ ಪ್ರಕಾಶನೇ ಶ್ರೀಮತ್ಸಾಯಣ ಮಾಧವಾಚಾರ್ಯಾ ಏವ ಪುರೋಯಾಯಿತಾಂ ದಧತೇ। ಏಷಾಂ ಗ್ರಂಥವಿಲೇಖನಶೈಲೀ ಕಾಚಿದಪೂರ್ವಾ ಸಂದೃಶ್ಯತೇ ಯಯಾಚಾತಿಕಠಿನೋಪ್ಯರ್ಥಃ ಸುಸಂಸ್ಕೃತಮತೀನಾಂ ವಾಚಕಾನಾಂ ಬುದ್ಧಾವಯತ್ನೇನೈವಾವತರತಿ । ತೈರೇವಚಾಯಂ ಸರ್ವದರ್ಶನ ಸಂಗ್ರಹಾಭಿಧೋ ಗ್ರಂಥೋ ನಿರಮಾಯಿ ॥

———

# ಶ್ರೀ ಭಾರತೀ ಕೃಷ್ಣ ತೀರ್ಥರು

## ಹೆಸರು—ಕಾಲ

ಶ್ರೀ ಭಾರತೀ ಕೃಷ್ಣ ತೀರ್ಥರು (ಅಥವಾ ಭಾರತೀ ತೀರ್ಥರು) ವಿದ್ಯಾರಣ್ಯರ ಎರಡನೆಯ ಗುರುಗಳು. ಇವರಿಗೆ ಅದ್ವೈತ ಬ್ರಹ್ಮಾನಂದರೆಂದೂ ಹೆಸರು. ಇವರನ್ನು ಆನಂದಾತ್ಮ ಸರಸ್ವತೀ* ಎಂಬ ಹೆಸರಿನಿಂದಲೂ ಕರೆಯುತ್ತಿದ್ದಂತೆ ತೋರುತ್ತದೆ. ಇವರು ಕಂಚಿಯ ವಿದ್ಯಾತೀರ್ಥರಿಂದ ಯತಿಪದವನ್ನು ಪಡೆದವರಾದರೂ, ಕಂಚಿಯ ಪೀಠವನ್ನು ಆರೋಹಣ ಮಾಡದೆ ಶೃಂಗೇರಿಗೆ ಬಂದು ಅಲ್ಲಿಯ ಪೀಠವನ್ನಲಂಕರಿಸಿದಕಾರಣ, ಇವರ ಹೆಸರು ಕಂಚಿಯ ಗುರು ಪರಂಪರೆಯಲ್ಲಿ ವಿಶೇಷವಾಗಿ ಸೇರಿಲ್ಲ. ಅದರಿಂದಲೇ "ಪುಣ್ಯ ಶ್ಲೋಕಮಂಜರೀ"ಕಾರರು ಇವರ ಪೂರ್ವಾಶ್ರಮ ಪ್ರವರವನ್ನು† ತಿಳಿಸಿಲ್ಲ.

ಹಿಂದೆ ವಿದ್ಯಾತೀರ್ಥರು ಕನ್ನಡಿಗರಾಗಿದ್ದಿರಬಹುದೆಂಬ ಅನುಮಾನಕ್ಕೆ ಕೊಟ್ಟಿರುವ ಕಾರಣಗಳಲ್ಲಿ ಕೆಲವು ಭಾರತೀತೀರ್ಥರ ವಿಷಯದಲ್ಲಿಯೂ ಅನ್ವಯಿಸುತ್ತವೆ. ಭಾರತೀತೀರ್ಥರು ಕಂಚಿಯನ್ನು ಬಿಟ್ಟು ಬಂದು ಶೃಂಗೇರಿ ಹಂಪೆಗಳಲ್ಲಿ ನೆಲಸಿದ್ದುದನ್ನು ನೋಡಿದರೆ, ಅದಕ್ಕೆ ಕಾರಣವು

---

* "ಗುರುರತ್ನಮಾಲಾ ಸ್ತವ"ದ ವ್ಯಾಖ್ಯಾನದಲ್ಲಿ, ಆತ್ಮಬೋಧೇಂದ್ರ ಸರಸ್ವತೀ ಸ್ವಾಮಿಗಳವರು ಹೀಗೆ ಬರೆದಿರುವರು.—

"ವಸ್ತುತಸ್ತು ಶ್ರೀಮದದ್ವೈತ ಬ್ರಹ್ಮಾನಂದ ಶ್ರೀಚರಣಾನಾಮೇವ ಆನಂದಾತ್ಮಾನ ಇತಿ ನಾಮಾಂತರಮಪಿ । ಭಾರತೀತೀರ್ಥ ಇತ್ಯಪಿ ನಾಮ ತೇಷಾಮೇವ ॥"

ಶಂಕರಾನಂದರವರು ಭಗವದ್ಗೀತಾ ವ್ಯಾಖ್ಯಾನ ಮೊದಲಾದ ಕೆಲವು ಗ್ರಂಥಗಳಲ್ಲಿ "ಆನಂದಾತ್ಮ ಸರಸ್ವತೀ" ಎಂಬ ಹೆಸರಿನಿಂದ ಸ್ಮರಣೆ ಮಾಡಿರುವ ಗುರುಗಳು ಭಾರತೀ ತೀರ್ಥರೇ ಇರಬೇಕು.

† ಭಾರತೀತೀರ್ಥರೆಂಬವರು ಮಾಧವ ಸಾಯಣರ ತಮ್ಮಂದಿರಾದ ಭೋಗನಾಥರಾಗಿರ ಬಹುದೆ?—ಎಂಬ ಶಂಕೆಯನ್ನು ಮುಂದೆ ಭೋಗನಾಥ ಪ್ರಕರಣದಲ್ಲಿ ಪರಿಹಾರಮಾಡಿದೆ.

ಕನ್ನಡಿಗರಾದ ಇವರು ಕನ್ನಡ ನಾಡೇ ತಮಗೆ ಹೆಚ್ಚು ಅನುಕೂಲವಾದ ಕಾರ್ಯಕ್ಷೇತ್ರವಾದೀತೆಂದು ನಿರೀಕ್ಷಿಸಿದ್ದುದೇ ಎಂದು ತೋರುತ್ತದೆ.

ಇವರನ್ನು ವಿದ್ಯಾತೀರ್ಥರ ಇತರ ಶಿಷ್ಯರಾದ ಶಂಕರಾನಂದರೇ ಮೊದಲಾದವರು ಅತ್ಯಂತ ಭಕ್ತಿ ವಿಶ್ವಾಸಗಳಿಂದ ಗೌರವಿಸಿರುವರು. ವಿದ್ಯಾರಣ್ಯರಿಗೆ ಸಂನ್ಯಾಸಾಶ್ರಮವನ್ನು ಕೊಟ್ಟವರು ಈ ಭಾರತೀ ತೀರ್ಥರೇ ಎಂಬ ಕಥೆಯನ್ನು ಹಿಂದೆ ವಿದ್ಯಾರಣ್ಯ ಚರಿತ್ರೆಯಲ್ಲಿ ಹೇಳಿದೆ. ಕ್ರಿ. ಶ. ೧೩೪೬ರ ವೇಳೆಗೇ ಇವರು ಶೃಂಗೇರಿಗೆ ಬಂದಿದ್ದರು. ಮೊದಲನೆಯ ಹರಿಹರನು ಆ ವರ್ಷ ಶೃಂಗೇರಿಗೆ ಹೋಗಿ ತನ್ನ ಜಯೋತ್ಸವ ಪ್ರಯುಕ್ತವಾಗಿ ಭೂದಾನಗಳನ್ನು ಮಾಡಿದುದು ಈ ಭಾರತೀ ತೀರ್ಥರ ಪರಿವಾರದ ಪ್ರಯೋಜನಕ್ಕಾಗಿಯೇ.

ಭಾರತೀ ತೀರ್ಥರ ಪೀಠಾಧಿಕಾರ ಕಾಲವು ಕ್ರಿ. ಶ. ೧೩೨೮ ರಿಂದ ೧೩೮೦ ರವರೆಗೂ ಎಂದು ಶೃಂಗೇರಿಯ ಮಠದ ಪಟ್ಟಿಯಿಂದ ತಿಳಿದು ಬರುತ್ತದೆ.* ಆದರೆ ಇದರಲ್ಲಿ ಕೆಲವು ವರ್ಷಗಳ ಕಾಲ, ಎಂದರೆ ವಿದ್ಯಾತೀರ್ಥರು ಯೋಗಸಮಾಧಿಯನ್ನು ಸೇರುವ ವರೆಗೂ—ಬಹುಶಃ ಕ್ರಿ. ಶ. ೧೩೫೬ಕ್ಕೆ ಸ್ವಲ್ಪ ಹಿಂದಿನ ವರೆಗೂ— ಭಾರತೀ ಕೃಷ್ಣ ತೀರ್ಥರವರು ಮಠದ ಮುಖ್ಯಾಧೀಶ್ವರರಾಗದೆ "ಚಿಕ್ಕ ಸ್ವಾಮಿ"ಗಳಾಗಿದ್ದಿರಬೇಕು. ವಿದ್ಯಾತೀರ್ಥರ ತರುವಾಯ ಇವರು "ದೊಡ್ಡ ಸ್ವಾಮಿ" ಗಳಾಗಲು, ಇವರಿಂದ ಹಿಂದೆಯೇ ಸಂನ್ಯಾಸಗ್ರಹಣಮಾಡಿದ್ದ ವಿದ್ಯಾರಣ್ಯರು ಆಗ "ಚಿಕ್ಕ ಸ್ವಾಮಿ"ಗಳೆನಿಸಿದ್ದಿರಬೇಕು.

ಆದರೂ ವಿದ್ಯಾರಣ್ಯರು ಆಗಿಗೆ ವಿಜಯನಗರದಲ್ಲಿ ರಾಜಕೀಯಾದಿ ಲೌಕಿಕ ಕಾರ್ಯಗಳಲ್ಲಿ ಪ್ರವೃತ್ತರಾಗಿದ್ದ ಕಾರಣ, ಆ ಬಳಿಯ ಹಂಪೆಯ ಮಠದಲ್ಲಿಯೇ ಅವರು ವಿಶೇಷವಾಗಿ ಇರುತ್ತಿದ್ದರೆಂದು ತೋರುತ್ತದೆ. ಹಾಗಿರಲಾಗಿ, ಶೃಂಗಗಿರಿಯ ಮಠದ ಸಾಮಾನ್ಯ ದಿನಚರ್ಯೆಯು ಬಹುಮಟ್ಟಿಗೆ ಭಾರತೀ ತೀರ್ಥರಿಂದಲೇ ನಡೆಯಬೇಕಾಗಿತ್ತು. ಇವರು ಆ

---

* "*The Mysore Gazetteer*" by B.L. Rice, C.I.E., Page 474.

ಮಠಕ್ಕೆ ಮೂಲಮೂರ್ತಿಯಂತೆಯೂ ವಿದ್ಯಾರಣ್ಯರು ಉತ್ಸವ ಮೂರ್ತಿಯಂತೆಯೂ ಇದ್ದರೆಂಬುದು ಉತ್ಪ್ರೇಕ್ಷೆಯಾಗದು.

## ಅವರ ಪಾಂಡಿತ್ಯ ಪ್ರಭಾವ

ಭಾರತೀ ತೀರ್ಥರು ಬಹು ದೊಡ್ಡ ಪಂಡಿತರಾಗಿದ್ದಿರಬೇಕು. ಅವರ ವಾಗ್ಧೋರಣೆಯೂ ಶೈಲಿಯೂ ಪಂಡಿತ ರಂಜಕಗಳಾಗಿವೆ. ಅವರು ಪಾಠ ಹೇಳುವುದರಲ್ಲಿಯೂ ಉಪನ್ಯಾಸ ಮಾಡುವುದರಲ್ಲಿಯೂ ಬಹು ಸಮರ್ಥರಾಗಿದ್ದರೆಂದು ಇಮ್ಮಡಿ ಹರಿಹರನ ಒಂದು ಶಾಸನವು ತಿಳಿಸುತ್ತದೆ:—

ಅತ್ಯುದ್ದಂಡ ಪ್ರಚಂಡ ಪ್ರಕರಣ ವಿವಿಧ ಗ್ರಂಥ ಸಂದರ್ಭ ಭೇದ।
ಪ್ರತ್ಯಕ್ಷೀಕಾರ ಕರ್ಮ ಕ್ರಮ ಕುಶಲತರ ಪ್ರೌಢವಾಗ್ಗುಂಫನಾನಿ॥
ಯಸ್ತು ವ್ಯಾಖ್ಯಾನ ಕಾಲೇ ರಚಯತಿ ಹಿಮವತ್ಪಾನು ನಿರ್ಭೇದ ಭಿನ್ನ।
ಸ್ಫೂರ್ಜದ್ಗಂಗಾ ಪ್ರವಾಹಾನುಕರಣಮಮಲೋ ಭಾರತೀತೀರ್ಥ ಏಷಃ॥

"ಬಹು ಪ್ರೌಢಗಳಾದ ಗ್ರಂಥಗಳ ಗಹನತರಗಳಾದ ಅರ್ಥಗಳನ್ನು ವಿವರವಾಗಿ ಹೇಳಿ ಪ್ರತ್ಯಕ್ಷಗೊಳಿಸುವುದಕ್ಕಾಗಿ ಈ ಭಾರತೀ ತೀರ್ಥರು ಉಪಯೋಗಿಸುತ್ತಿದ್ದ ವಾಕ್ಯ ಜಾಲಗಳ ಸರಣಿಯು, ಹಿಮವತ್ಪರ್ವತದಿಂದ ಬಂಡೆಗಳನ್ನೊಡೆದುಕೊಂಡು ಭೋರ್ಗರೆಯುತ್ತ ಹರಿದು ಬರುವ ದಿವ್ಯ ಗಂಗಾ ಪ್ರವಾಹವನ್ನು ಹೋಲುತ್ತಿತ್ತು."

ಈ ಭಾವವನ್ನು ಶಂಕರಾನಂದರು "ಬೃಹದಾರಣ್ಯಕೋಪನಿಷದ್ದೀಪಿಕೆ"*ಯಲ್ಲಿ ಈ ರೀತಿ ಪುಷ್ಟೀಕರಿಸಿರುವರು:—

ಸಚ್ಛಾಸ್ತ್ರತ್ವೇಪಿ ಸಾಕ್ಷಾದ್ಗುರವ ಇವ ದಯಾಮೇದುರಾ ಯೇ ಪುನರ್ಮಾಂ।
ಗೂಢೇಷ್ವರ್ಥೇಷು ಗಾಢಂ ವಿವರಣ ಸರಣೇಶ್ಚಕ್ರುರಾತ್ರ ಪ್ರವೇಶಂ॥

---

* ಶಂಕರಾನಂದ ಕೃತವಾದ "ಬೃಹದಾರಣ್ಯೋಪನಿಷದ್ದೀಪಿಕೆ"ಯು ಮುದ್ರಿತವಾಗಿರುವ ಸಂಗತಿ ನಮಗೆ ತಿಳಿಯದು. ಮೈಸೂರಿನ ಪ್ರಾಚ್ಯಕೋಶಾಗಾರದಲ್ಲಿ ಅದರ ಹಸ್ತಲಿಖಿತ ಪ್ರತಿಯೊಂದು ಇದೆ. ಅದರಲ್ಲಿ ಇಲ್ಲಿ ಕೊಟ್ಟಿರುವ ಶ್ಲೋಕಗಳು ಇರುವಹಾಗಿಲ್ಲ. ಈ ಶ್ಲೋಕಗಳನ್ನು ಕಂಚಿಯ ಗುರುರಾಜ ರತ್ನಮಾಲಿಕಾ ಸ್ತವದ ವ್ಯಾಖ್ಯಾನದಲ್ಲಿ ಆತ್ಮಬೋಧೇಂದ್ರ ಸರಸ್ವತೀ ಸ್ವಾಮಿಗಳೆಂಬವರು ಉದಾಹರಿಸಿರುವರು.

ಭಾರತ್ಯಾನಂದ ತೀರ್ಥಾಪರ ಬಿರುದವಹಾನದ್ವಯ ಬ್ರಹ್ಮಸೌಖ್ಯಾನ್ ।
ವೃದ್ಧಾನ್ ಸಿದ್ಧಾನ್ ಪ್ರಬುದ್ಧಾನಪಿ ಹೃದಿ ಸತತಂ ಭಾವಯೇ ಬ್ರಹ್ಮ
ಭೂತಾನ್ ॥

ಈ ಶ್ಲೋಕದಿಂದ ಭಾರತೀ ತೀರ್ಥರು ಶಂಕರಾನಂದರಿಗಿಂತಲೂ ವಯಸ್ಸಿನಲ್ಲಿ ದೊಡ್ಡವರಾಗಿದ್ದರೆಂತಲೂ, ಶಂಕರಾನಂದರಿಗೆ ಅವರು ಗಹನಗಳಾದ ಶಾಸ್ತ್ರ ರಹಸ್ಯಗಳನ್ನರಿತುಕೊಳ್ಳುವುದರಲ್ಲಿ ಅತಿ ದಯೆಯಿಂದ ಸಹಾಯಮಾಡಿದ್ದರೆಂತಲೂ, ಮತ್ತು ಶಂಕರಾನಂದರು "ಬೃಹದಾರಣ್ಯಕೋಪನಿಷದ್ದೀಪಿಕೆ"ಯನ್ನು ಬರೆಯುವ ವೇಳೆಗೇ ಅವರು ಸಮಾಧಿಸ್ಥರಾಗಿದ್ದರೆಂತಲೂ ತಿಳಿಯಬರುತ್ತದೆ. ಆದುದರಿಂದಲೇ ಶಂಕರಾನಂದರು ತಮಗೆ ಭಾರತೀ ತೀರ್ಥರು ಸಾಕ್ಷಾದ್ಗುರುಗಳಲ್ಲದೆ "ಸಚ್ಛಾತ್ರ"ರು—ಎಂದರೆ ತಮ್ಮ ಗುರುಗಳ ಮತ್ತೊಬ್ಬ ಶಿಷ್ಯರು—ಮಾತ್ರವೇ ಆಗಿದ್ದರೂ, ಅವರಲ್ಲಿ ಗುರುಗಳಿಗೆ ಸಲ್ಲಬೇಕಾದಂಥಾ ಭಕ್ತಿಯನ್ನಿಟ್ಟುಕೊಂಡಿದ್ದರು. ಅವರು ಭಾರತೀ ತೀರ್ಥ ಚರಿತೆಯನ್ನು ಹೀಗೆ ಸಂಕ್ಷೇಪಿಸಿರುವರು:—

ದ್ವೈತಧ್ವಾಂತ ನಿಕೃಂತನಾಹರಧಿಪೈ ಶ್ಶಿಷ್ಯೈರ್ವಿಶಿಷ್ಟ್ಯಾಷ್ಟಭಿ ।
ರ್ವಿಷ್ಟಭ್ಯಾದ್ವಯ ವಿಷ್ಟರಾಷ್ಟಕ ಮಿತಃ ಶ್ರೀಮಾಧವಾದ್ಯೈರ್ಬುಧೈಃ ॥
ಸ್ಪಷ್ಟಂ ಯೋ ವ್ಯದಧಿಷ್ಟ ಶಿಷ್ಟ ಪರಿಷತ್ಸ್ವದ್ವೈತ ಮೇವಾದ್ವಯ ।
ಬ್ರಹ್ಮಾನಂದ ಮುನೀಶ್ವರಂ ತಮನಘಂ ವಂದೇ ವಿರೂಪಾಕ್ಷಗಂ ॥

ಹಿಂದೆ (ಪುಟ ೩೮) ಹೇಳಿದ ಅಷ್ಟಮಠಸ್ಥಾಪನಾಕಾರ್ಯದಲ್ಲಿ ಭಾರತೀ ತೀರ್ಥರೂ ಭಾಗಿಗಳಾಗಿದ್ದರೆಂದು ಇದರಿಂದ ಗೊತ್ತಾಗುತ್ತದೆ. ಕಡೆಯ ವಚನದಿಂದ ಭಾರತೀ ತೀರ್ಥ ಸ್ವಾಮಿಗಳವರು ಪ್ರಾಯಶಃ ವಿರೂಪಾಕ್ಷಿ(ಹಂಪೆ)ಯಲ್ಲಿಯೇ ಇದ್ದು ಸಮಾಧಿಹೊಂದಿದರೆಂದು ಬೋಧ್ಯವಾಗುತ್ತದೆ.

## ಅವರ ಗ್ರಂಥಗಳು

ಇಂತಹ ಅದ್ವೈತ ಬೋಧನ ವಿಚಕ್ಷಣರೂ ವಾಕ್ಚತುರರೂ ಆದ ಪಂಡಿತರನ್ನು ಗ್ರಂಥ ರಚನಾಕಾರ್ಯಕ್ಕಾಗಿಯೇ ವಿದ್ಯಾರಣ್ಯರು ಶೃಂಗೇರಿಗೆ ಕರೆತಂದಿರಬೇಕು. ಭಾರತೀ ತೀರ್ಥ ಕೃತವೆಂದು ಪ್ರಸಿದ್ಧವಾಗಿರುವ ಗ್ರಂಥಗಳು ಮೂರು :—

೧. ವೇದಾಂತ ಪಂಚದಶಿ (ಅಥವಾ ಅದರ ಭಾಗಗಳು),
೨. ದೃಗ್ದೃಶ್ಯ ವಿವೇಕ—(?),
೩. ವೈಯಾಸಿಕ ನ್ಯಾಯ ಮಾಲೆ.

ಈ ಮೂರೂ ಅದ್ವೈತ ವೇದಾಂತ ವಿಷಯಕವಾದವುಗಳೇ. "ಪಂಚದಶಿ"ಯ ನಿಜವಾದ ಹೆಸರು "ಬ್ರಹ್ಮಾನಂದ"ವೆಂದು. ಅದರ ಕರ್ತೃತ್ವದ ವಿಚಾರವನ್ನು ಮುಂದೆ ಸ್ವಲ್ಪ ವಿಸ್ತಾರವಾಗಿಯೇ ಕೈಕೊಳ್ಳ ಬೇಕಾಗಿದೆ.

"ದೃಗ್ದೃಶ್ಯ ವಿವೇಕ"ವು ನಾಲ್ವತ್ತಾರು ಅನುಷ್ಟುಪ್ ಶ್ಲೋಕಗಳು ಮಾತ್ರವುಳ್ಳ ಸಣ್ಣ ಗ್ರಂಥ. ಆದರೂ ಅದ್ವೈತ ಮತಸಿದ್ಧಾಂತವೆಲ್ಲವೂ ಇದರಲ್ಲಿ ಬಹು ವಿಶದವಾಗಿ ಸುಲಭಗ್ರಾಹ್ಯವಾಗುವಂತೆ ಅಡಗಿಸಲ್ಪಟ್ಟಿದೆ. ಬ್ರಹ್ಮಾನಂದ ಭಾರತಿಗಳೆಂಬುವರು ಇದಕ್ಕೆ "ವಾಕ್ಯಸುಧೆ"ಯೆಂಬ ವ್ಯಾಖ್ಯಾನವನ್ನು ಬರೆದಿರುವರು. "ದೃಗ್ದೃಶ್ಯ ವಿವೇಕ"ವು ಶಂಕರ ಭಗವತ್ಪಾದಾಚಾರ್ಯರ ಕೃತಿಯೆಂದು ಕೆಲವು ಪುಸ್ತಕಗಳಲ್ಲಿ ಮುದ್ರಿತ ವಾಗಿದೆ. ಇದರಲ್ಲಿ ತಥ್ಯಾಂಶವಾವುದೆಂದು ಹೇಳುವುದು ಅಸಾಧ್ಯ.

"ವೈಯಾಸಿಕ ನ್ಯಾಯಮಾಲೆ"ಯು ವ್ಯಾಸಮಹರ್ಷಿ ಪ್ರಣೀತ ವಾದ ಬ್ರಹ್ಮ ಸೂತ್ರಗಳ ಮೇಲಿನ ಶ್ಲೋಕರೂಪವಾದ ವಿವರಣೆ. ಆ ಸೂತ್ರಗಳ ಪ್ರತಿಯೊಂದು ಅಧಿಕರಣದ ವಿಷಯವೂ ಈ "ನ್ಯಾಯ ಮಾಲೆ"ಯ ಎರಡು ಅನುಷ್ಟುಪ್ ಶ್ಲೋಕಗಳಲ್ಲಿ—ಪೂರ್ವಪಕ್ಷವೊಂದ ರಲ್ಲಿ, ಸಿದ್ಧಾಂತ ಮತ್ತೊಂದರಲ್ಲಿ—ಸಂಗ್ರಹಿಸಲ್ಪಟ್ಟಿದೆ. ಈ ಶ್ಲೋಕ ಗಳಿಗೆ ಭಾರತೀ ತೀರ್ಥ ರಚಿತವೇ ಆದ ವಚನ ವ್ಯಾಖ್ಯೆಯೊಂದೂ ಇದೆ. ಉತ್ತರ ಮೀಮಾಂಸಾ ಶಾಸ್ತ್ರಾಭ್ಯಾಸಿಗಳಿಗೆ ಈ ಗ್ರಂಥವು ಮಹೋಪ ಕಾರಕವಾಗಿರುವುದು.

ಮಾಧವ ಸಾಯಣರಿಗೆ ಹೇಗೆ ಪರಸ್ಪರ ಅಭೇದ ಬುದ್ಧಿಯಿದ್ದಿತೋ ವಿದ್ಯಾರಣ್ಯ ಭಾರತೀ ತೀರ್ಥರಿಗೂ ಸಹ ಹಾಗೆಯೇ ಇದ್ದಿತೆಂದು ತೋರು ತ್ತದೆ. ಮಾಧವ (ವಿದ್ಯಾರಣ್ಯ)ರ ಪ್ರವೃತ್ತಿಮಾರ್ಗೌಪಯಿಕ ಗ್ರಂಥ

ಲೇಖನಕ್ಕೆ ಸಾಯಣಾಚಾರ್ಯರು ಅನುವಾಗಿದ್ದಂತೆ, ಅವರ ನಿವೃತ್ತಿ ಮಾರ್ಗೌಪಯಿಕ ಗ್ರಂಥರಚನೆಗೆ ಭಾರತೀತೀರ್ಥರು ಜೊತೆಯಾಗಿದ್ದರು. ಅವರಿಬ್ಬರೂ ಸೇರಿ ಕೆಲಸಮಾಡಿದರೆಂಬುದಕ್ಕೆ ಪ್ರಸಿದ್ಧವಾದ "ಪಂಚ ದಶೀ" ಗ್ರಂಥವು ನಿದರ್ಶನವಾಗಿದೆ. ಇದರಿಂದ ತೋರಿಬರುವ ಸಂಗತಿ ಗಳು ಸ್ವಲ್ಪ ವಿಸ್ತಾರವಾದ ವಿಚಾರಕ್ಕೆ ಅರ್ಹವಾಗಿವೆ.

## "ವೇದಾಂತ ಪಂಚದಶೀ" ವಿಚಾರ

"ಬ್ರಹ್ಮಾನಂದ"ವೆಂಬ ಮತ್ತೊಂದು ಹೆಸರುಳ್ಳ ಈ ಗ್ರಂಥಕ್ಕೆ ತಾತ್ಪರ್ಯದೀಪಿಕೆಯೆಂಬ ವ್ಯಾಖ್ಯಾನವೊಂದಿದೆ. ಇದನ್ನು ಬರೆದಾತನು ರಾಮಕೃಷ್ಣನೆಂಬ ಪಂಡಿತನು. ಈತನು

ನತ್ವಾ ಶ್ರೀಭಾರತೀತೀರ್ಥ ವಿದ್ಯಾರಣ್ಯ ಮುನೀಶ್ವರೌ ।
ಪ್ರತ್ಯಕ್ತತ್ತ್ವ ವಿವೇಕಸ್ಯ ಕ್ರಿಯತೇ ಪದದೀಪಿಕಾ॥

"ಶ್ರೀ ಭಾರತೀ ತೀರ್ಥ ವಿದ್ಯಾರಣ್ಯ ಮುನಿಗಳಿರ್ವರಿಗೂ (ದ್ವಿವಚನ) ನಮಸ್ಕಾರ ಮಾಡಿ, ಪ್ರತ್ಯಕ್ತತ್ತ್ವವಿವೇಕವೆಂಬ ಪ್ರಕರಣಕ್ಕೆ "ಪದ ದೀಪಿಕೆ"ಯೆಂಬ ವ್ಯಾಖ್ಯಾನವನ್ನು ಮಾಡಲಾಗುತ್ತದೆ"—

ಎಂಬೀರೀತಿಯಲ್ಲಿ, ಭಾರತೀ ತೀರ್ಥ ವಿದ್ಯಾರಣ್ಯರಿರ್ವರ ಹೆಸರು ಗಳನ್ನೂ ಕೂಡಿಸಿ ಪ್ರತಿಯೊಂದು ಪ್ರಕರಣದ ಆರಂಭದಲ್ಲಿಯೂ ಹೇಳಿ ದ್ದಾನೆ. ಪ್ರತಿ ಪ್ರಕರಣಾಂತ್ಯದಲ್ಲಿಯೂ ಹಾಗೆಯೇ

"ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಭಾರತೀತೀರ್ಥ ವಿದ್ಯಾರಣ್ಯ ಶ್ರೀಚರಣ ಶಿಷ್ಯೇಣ (ಅಥವಾ ಮುನಿವರ್ಯ ಕಿಂಕರೇಣ) ಶ್ರೀ ರಾಮಕೃಷ್ಣಾಖ್ಯ ವಿದುಷಾ ವಿರಚಿತಂ॥"

ಎಂದು ಬರೆದಿದ್ದಾನೆ. ಇದರಿಂದ ಆತನು ಭಾರತೀ ತೀರ್ಥ ವಿದ್ಯಾರಣ್ಯರು ಗಳಿಬ್ಬರಿಗೂ ಸಾಕ್ಷಾಚ್ಛಿಷ್ಯನೆಂದೂ ಅವರಿಬ್ಬರೂ ಒಟ್ಟಿಗೆ ಆ ಗ್ರಂಥವನ್ನು ರಚಿಸಿದರೆಂದೂ ಸೂಚನೆ ಬರುತ್ತದೆ. ಇದಲ್ಲದೆ ಏಳನೆಯ ಪ್ರಕರಣವಾದ "ತೃಪ್ತಿದೀಪ"ದ ವ್ಯಾಖ್ಯಾನಾರಂಭದಲ್ಲಿ ವೇದಭಾಷ್ಯದಲ್ಲಿಯ "ವೇದಾ ರ್ಥಸ್ಯ ಪ್ರಕಾಶೇನ" ಇತ್ಯಾದಿಯಾದ (೩೧ನೆಯ ಪುಟವನ್ನು ನೋಡಿರಿ)

ವಿದ್ಯಾತೀರ್ಥ ವಂದನಾ ಶ್ಲೋಕವನ್ನೂ ರಾಮಕೃಷ್ಣನು ಉಪಯೋಗಿಸಿ ುವುದರಿಂದ, ಆತನು ಆ ಕಾಲದವನೇ ಇರಬಹುದೆಂಬ ಊಹೆಯು ಸಾಧ್ಯವಾಗಿದೆ. ಅದೇ ವ್ಯಾಖ್ಯಾನ ಭಾಗದಲ್ಲಿ ರಾಮಕೃಷ್ಣಪಂಡಿತನು

ತೃಪ್ತಿ ದೀಪಾಖ್ಯಂ ಪ್ರಕರಣಮಾರಭಮಾಣಃ ಶ್ರೀ ಭಾರತೀತೀರ್ಥ ಗುರುಸ್ತಸ್ಯ ಶ್ರುತಿ ವ್ಯಾಖ್ಯಾನ ರೂಪತ್ವಾತ್ ತದ್ವ್ಯಾಖ್ಯೇಯಾಂ ಶ್ರುತಿಮಾದೌ ಪಠತಿ ॥

"ಭಾರತೀ ತೀರ್ಥ ಗುರುಗಳು 'ತೃಪ್ತಿದೀಪ' ಪ್ರಕರಣವನ್ನಾರಂಭಿಸತಕ್ಕವ ರಾಗಿ, ಆದರಲ್ಲಿ ವ್ಯಾಖ್ಯಾನಮಾಡಲ್ಪಡಬೇಕಾಗಿರುವ ವೇದವಾಕ್ಯವನ್ನು ಮೊದಲು ಪಠಿಸಿರುತ್ತಾರೆ" ಎಂದು ಬರೆದಿದ್ದಾನೆ.

ಈ ವಾಕ್ಯದಲ್ಲಿ ಆತನು ಹಿಂದಿನಂತೆ ಗುರುಗಳಿಬ್ಬರನ್ನೂ ಸ್ಮರಿಸದೆ, ಭಾರತೀ ತೀರ್ಥರೊಬ್ಬರನ್ನೇ ಧ್ಯಾನಿಸಿರುವುದರಿಂದ ಅವರೊಬ್ಬರೇ ಗ್ರಂಥದ ಈ ಪ್ರಕರಣಕ್ಕೆ ಸೇರಿದ ಭಾಗಗಳನ್ನು ಬರೆದರೆಂಬ ಸೂಚನೆ ತೋರುತ್ತದೆ. ವ್ಯಾಖ್ಯಾನದ ಉಪಕ್ರಮೋಪಸಂಹಾರ ವಾಕ್ಯಗಳಿಂದ ಲಾದರೋ, ವಿದ್ಯಾರಣ್ಯರಿಗೂ ಸಮಗ್ರ ಗ್ರಂಥದ ಕರ್ತೃತ್ವದಲ್ಲಿ ಭಾಗ ವಿತ್ತೆಂದು ತೋರುತ್ತದೆ. ಇದುವರೆಗೆ ಮುದ್ರಿತವಾಗಿರುವ "ಪಂಚ ದಶಿ"ಯ ಪ್ರತಿಗಳಲ್ಲಿ "ಪ್ರತ್ಯಕ್ತತ್ತ್ವವಿವೇಕ"ವೆಂಬ ಪ್ರಕರಣವು ಮೊದಲನೆಯದಾಗಿದೆ. ಇದೇ ಗ್ರಂಥಾರಂಭವಾಗಿರುವ ಪಕ್ಷಕ್ಕೆ ವಿದ್ಯಾ ರಣ್ಯರೇ ಇದನ್ನು ಪ್ರಾರಂಭಿಸಿದರೆಂದು ಹೇಳಬೇಕಾಗುವುದು. ಏಕೆಂದರೆ, ಇದರ ಪ್ರಥಮ ಶ್ಲೋಕವು ಅನೇಕಾರ್ಥಗರ್ಭಿತವಾದ ಶಂಕರಾನಂದ ಸ್ತುತಿಯಾಗಿದೆ.

ನಮಶ್ಶ್ರೀ ಶಂಕರಾನಂದ ಗುರು ಪಾದಾಂಬುಜನ್ಮನೇ ।
ಸವಿಲಾಸ ಮಹಾಮೋಹ ಗ್ರಾಹ ಗ್ರಾಸೈಕ ಕರ್ಮಣೇ ॥

ಎಂಬುದೇ ಆ ಪ್ರಾರಂಭ ಶ್ಲೋಕ. ಭಾರತೀ ತೀರ್ಥರು (ನಾವು ಮೇಲೆ ನೋಡಿರುವಂತೆ) ಶಂಕರಾನಂದರಿಗೆ ಗುರುಪ್ರಾಯರಾಗಿದ್ದು, ಶಂಕ ರಾನಂದರಿಂದ ಸಂಸ್ತುತರಾಗಿರುವ ಕಾರಣ, ಅಂತಹ ಭಾರತೀ ತೀರ್ಥರು ತಮಗಿಂತ ಕಿರಿಯವರಾದ ಶಂಕರಾನಂದರಿಗೆ ನಮಸ್ಕಾರಮಾಡಿ ಗ್ರಂಥ

ವನ್ನಾರಂಭಿಸಿರುವುದು ಅಸಂಭವ. ಬಹುಶಃ ವಿದ್ಯಾರಣ್ಯರೇ ಗ್ರಂಥದ ಈ ಭಾಗವನ್ನು ಬರೆಯಲು ಪ್ರಾರಂಭಿಸಿದ್ದಿರಬೇಕು. ಆ ವೇಳೆಗೆ ವಿದ್ಯಾತೀರ್ಥರು ಮುಕ್ತರಾಗಿದ್ದುದರಿಂದಲೂ, ಭಾರತೀತೀರ್ಥರು ತಮ್ಮೊಡನೆಯೇ ಗ್ರಂಥರಚನೆಯಲ್ಲಿ ಸೇರಿದ್ದರಾದುದರಿಂದಲೂ, ಅವರಿಬ್ಬರನ್ನೂ ಬಿಟ್ಟು, ಉಳಿದೊಬ್ಬ ಗುರುಗಳಾದ ಶಂಕರಾನಂದರನ್ನು ವಿದ್ಯಾರಣ್ಯರು ಇಲ್ಲಿ ಸ್ತುತಿಸಿರಬಹುದು. ಅಥವಾ, ಇತರ ಗ್ರಂಥಗಳಲ್ಲಿ ವಿದ್ಯಾತೀರ್ಥ ಭಾರತೀ ತೀರ್ಥರುಗಳ ಸ್ಮರಣೆಯಿರುವುದರಿಂದ, ಈ ಗ್ರಂಥದಲ್ಲಿ ಶಂಕರಾನಂದರಿಗೆ ನಮಸ್ಕಾರ ಮಾಡಿರಬಹುದು. ಹೀಗೆ ವಿದ್ಯಾರಣ್ಯರು ಗ್ರಂಥವನ್ನು ಮೊದಲುಮಾಡಿ ಆರು ಪ್ರಕರಣಗಳನ್ನು ಮುಗಿಸಿದ ಬಳಿಕ, ಮೇಲೆ ರಾಮಕೃಷ್ಣಪಂಡಿತರು ತೋರಿಸಿದಂತೆ ಭಾರತೀ ತೀರ್ಥರು ತೃಪ್ತಿದೀಪವೆಂಬ ಏಳನೆಯ ಪ್ರಕರಣವನ್ನಾರಂಭಿಸಿ ಗ್ರಂಥವನ್ನು ಕಡೆಯವರೆಗೂ ಬರೆದಿರಬಹುದು.

## ಒಂದು ನೂತನ ವಿಷಯ

ಅಥವಾ, ಇದುವರೆಗೆ ಮುದ್ರಿತವಾಗಿರುವ "ಪಂಚದಶಿ"ಯ ಪ್ರತಿಗಳಲ್ಲಿಯ ಪ್ರಕರಣಾನುಕ್ರಮವೇ ಮೂಲಪಾಠದಿಂದ ವ್ಯತ್ಯಸ್ತವಾದುದಾಗಿರಬಹುದು. ಹೀಗೆ ಹೇಳುವುದಕ್ಕೆ ನಮಗೆ ದೊರೆತಿರುವ ಒಂದು ಪುರಾತನ ಹಸ್ತಲಿಖಿತ ಪ್ರತಿಯು ಆಧಾರವಾಗಿದೆ. ಈ ಪ್ರತಿಯನ್ನು ವಿಶ್ವಾಸದಿಂದ ಕೊಟ್ಟು ಉಪಕಾರಮಾಡಿದವರು ಮೈಸೂರು ರಾಜಾಸ್ಥಾನದ ವಿದ್ವಾಂಸರೂ ಶಾಸನದ ಇಲಾಖೆಯಲ್ಲಿದ್ದ ಪಂಡಿತರೂ ಆದ ಬ್ರಹ್ಮಶ್ರೀ ತೋಗೆರೆ ನಂಜುಂಡಶಾಸ್ತ್ರಿಗಳವರು. ಈ ಪ್ರತಿಯು ಅವರ ಮಾತಾಮಹರಾದ ಲಕ್ಷ್ಮೀನಾರಾಯಣಶಾಸ್ತ್ರಿಗಳೆಂಬ ವಿದ್ವದ್ವರ್ಯರಲ್ಲಿದ್ದುದಂತೆ. ಆ ಲಕ್ಷ್ಮೀನಾರಾಯಣ ಶಾಸ್ತ್ರಿಗಳವರಾದರೋ, ಹಿಂದಿನ ಜಗದ್ಗುರುಗಳಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಜನಕರೂ ಲೋಕವಿಖ್ಯಾತ ಪಂಡಿತರೂ ಆಗಿದ್ದ ಕುಣಿಗಲು ರಾಮಶಾಸ್ತ್ರಿಗಳ ಗುರುಗಳಾದ ತ್ರ್ಯಂಬಕಶಾಸ್ತ್ರಿಗಳೆಂಬವರ ಹಿರಿಯ ಮಕ್ಕಳಾದ ದಾದಾಶಾಸ್ತ್ರಿಗಳೆಂಬ ಘನಪಂಡಿತರಲ್ಲಿ ಶಾಸ್ತ್ರಾಭ್ಯಾಸ ಮಾಡಿದ

ವರು. ಇಂತಹ ಮಹನೀಯರು ಸ್ವಹಸ್ತದಿಂದ ಲಿಖಿಸಿದ "ಪಂಚದಶೀ" ಪ್ರತಿಯು ಪಂಡಿತ ಪರಂಪರೆಗೆ ಸಮ್ಮತವಾದುದಾಗಿರಬೇಕು. ಈ ಪ್ರತಿಯಲ್ಲಿ ಮೂಲಗ್ರಂಥವೂ ರಾಮಕೃಷ್ಣರಚಿತ ವ್ಯಾಖ್ಯೆಯೂ ಎರಡೂ ಇವೆ. ಇದರ ಅಂತ್ಯ ಭಾಗದಲ್ಲಿ :—

ದುಂದುಭ್ಯಬ್ದಾಶ್ವಿನೀಕೃಷ್ಣ ದ್ವಾದಶ್ಯಾಂ ಗುರುವಾಸರೇ ।
ಲಕ್ಷ್ಮೀನಾರಾಯಣೇನಾಯಂ ಲಿಖಿತಃ ಸುಹೃದಾಂ ಮುದೇ ॥

ಎಂದು ಇದೆ. ಈ ಪ್ರತಿಯ ವ್ಯಾಖ್ಯಾನ ಭಾಗದಲ್ಲಿ ಅಚ್ಚಿನ ಪುಸ್ತಕಗಳಲ್ಲಿ ದೊರೆಯದ ಕೆಲವು ಪೀಠಿಕಾ ಶ್ಲೋಕಗಳು ದೊರೆಯುತ್ತವೆ. ಭಾರತೀತೀರ್ಥ ವಿದ್ಯಾರಣ್ಯ ಗುರುಗಳ ಸ್ತುತಿಯು ಮುದ್ರಿತ ಪುಸ್ತಕಗಳಲ್ಲಿರುವಂತೆಯೇ ಇದರಲ್ಲಿಯೂ ಪ್ರತಿ ಪ್ರಕರಣದ ಆದ್ಯಂತಗಳಲ್ಲಿಯೂ ಇದೆ. ಆದರೆ ವ್ಯಾಖ್ಯಾನಾವತರಣಿಕೆಯಲ್ಲಿ ಹದಿಮೂರನೆಯ ಶ್ಲೋಕವಾಗಿ

ಓಮಚ್ಯುತಾಯ ಗುರವೇ ಶಿಷ್ಯಸಂಸಾರ ಹಾರಿಣೇ ।
ಭಕ್ತಕಾರ್ಯೈಕ ದೇಹಾಯ ನಮಸ್ತೇ ಚಿತ್ಸುಖಾತ್ಮನೇ ॥ ೧೩ ॥

ಅಚ್ಯುತಾಶ್ರಮ ಪಾದಾಬ್ಜ ಮಕರಂದ ಜುಷೇ ಸದಾ ।
ನಿರ್ಮಲಾಯ ನಮಸ್ತುಭ್ಯಂ ಗುರವೇ ಭವಹಾರಿಣೇ ॥ ೧೪ ॥

ಎಂದಿದೆ. ಈ ಶ್ಲೋಕಗಳನ್ನು ರಚಿಸಿದವರಾರೋ, ಅವುಗಳಿಂದ ವಂದಿತರಾದ ಅಚ್ಯುತಾಶ್ರಮರು ಯಾರೋ, ಅವರ (ಪಾದಾಬ್ಜ ಮಕರಂದಪಾಯಿಯಾದ) ಶಿಷ್ಯರೂ ಶ್ಲೋಕ ಕರ್ತನ ಗುರುಗಳೂ ಆದ ಮತ್ತೊಬ್ಬ ಮಹನೀಯರು ಯಾರೋ ತಿಳಿಯಲಾಗುವುದಿಲ್ಲ.

ಈ ಶ್ಲೋಕಗಳಾದ ಬಳಿಕ ಮಾತಾ ಪಿತೃ ವಂದನಾ ಶ್ಲೋಕಗಳಿರಡಿವೆ (೧೫–೧೬). ಅವುಗಳಲ್ಲಿ ನಾಮನಿರ್ದೇಶವಿಲ್ಲ; "ಪಿತುಃ" "ಮಾತುಃ" ಎಂದು ಮಾತ್ರ ಇದೆ. ಬಳಿಕ ಪರಮಾತ್ಮ ಸ್ಮರಣೆಯ ಶ್ಲೋಕ (೧೭) ವೊಂದಿದೆ. ಆಮೇಲೆ, ಹದಿನೆಂಟು ಹತ್ತೊಂಬತ್ತನೆಯ ಶ್ಲೋಕಗಳು ಈ ರೀತಿ ಇವೆ :—

ಪದ ವಾಕ್ಯಾರ್ಥ ಬೋಧೇನ ಯೇನ ದೂರೀಕೃತಂ ತಮಃ ।
ತಂ ನಮಾಮಿ ಜಗದ್ವಂದ್ಯಮಖಂಡಾನಂದ ವಿಗ್ರಹಂ ॥ ೧೮ ॥

ದುರ್ವಾದಿ ಮತ ಮಾತಂಗ ಮದವಾರಣ ಕೇಸರೀ ।
ಶಂಕರಸ್ತ್ವವ ತೀರ್ಣೋಽ ಸಾವಖಂಡಾನಂದ ರೂಪಧೃತ್ ॥ ೧೯ ॥

ಈ "ಅಖಂಡಾನಂದ"ರು ಯಾರೋ ಅದೂ ಗೊತ್ತಿಲ್ಲ. ಆಮೇಲೆ ಗಣಪತಿ ಸ್ತುತಿಯೊಂದು ಇದೆ (ಶ್ಲೋಕ ೨೦). ಅನಂತರ ಇತರ (ಮುದ್ರಿತ) ಪ್ರತಿಗಳಲ್ಲಿರುವಂತೆ

ನತ್ವಾ ಶ್ರೀ ಭಾರತೀತೀರ್ಥ ವಿದ್ಯಾರಣ್ಯ ಮುನೀಶ್ವರೌ ।
ಕ್ರಿಯತೇ ಚಿತ್ರದೀಪಸ್ಯ ವ್ಯಾಖ್ಯಾ ತತ್ತ್ವಾರ್ಥ ಬೋಧಿನೀ ॥ ೨೧ ॥

ಎಂಬ ಶ್ಲೋಕವಿದೆ. ಮೇಲಿನ ಅಚ್ಯುತಾಶ್ರಮಿ ಅಖಂಡಾನಂದ ಗುರುಗಳ ಸ್ತೋತ್ರದಿಂದ, ವ್ಯಾಖ್ಯಾನಕರ್ತನಾದ ರಾಮಕೃಷ್ಣಪಂಡಿತನು ಭಾರತೀತೀರ್ಥ ವಿದ್ಯಾರಣ್ಯರ ಸಾಕ್ಷಾಚ್ಛಿಷ್ಯನೆಂಬ ಊಹೆಗೆ ಎಷ್ಟು ಮಾತ್ರ ಬಾಧೆ ಬಂದೀತೋ ವಿಚಾರಮಾಡತಕ್ಕದಾಗಿದೆ.

ಅಥವಾ, ಮೇಲಿನ ಪೀಠಿಕಾ ಶ್ಲೋಕಗಳು ರಾಮಕೃಷ್ಣ ಪಂಡಿತನದಲ್ಲದೆ, ಆತನ ವ್ಯಾಖ್ಯಾನವನ್ನು ನಮ್ಮ ಪ್ರತಿಯಲ್ಲಿ ಲಿಖಿಸಿದ ಲಕ್ಷ್ಮೀನಾರಾಯಣ ಪಂಡಿತರದಾಗಿರಬಹುದೆ? ಪೂರ್ವಿಕರು ಪ್ರಾಚೀನ ಗ್ರಂಥಗಳ (ಕಾಪಿ) ಪ್ರತಿಯನ್ನು ಬರೆದುಕೊಳ್ಳುವಾಗ, ತಮ್ಮ ಇಷ್ಟದೇವತೆ ಇಷ್ಟ ಗುರುಗಳ ಸ್ತೋತ್ರಗಳನ್ನೂ ಬರೆಯುವ ಪದ್ಧತಿಯುಂಟು. ಇದಕ್ಕೆ ದೃಷ್ಟಾಂತವಾಗಿ ನಮ್ಮಲ್ಲಿರುವ ಹಸ್ತಪ್ರತಿಯಲ್ಲಿಯೇ ಲಕ್ಷ್ಮೀನಾರಾಯಣ ಪಂಡಿತರು "ವಿಷಯಾನಂದ"ವೆಂಬ ಹದಿನೈದನೆಯ ಪ್ರಕರಣದ ಆದಿಯಲ್ಲಿ "ಶ್ರೀ ನಾರಸಿಂಹ ಗುರುಭ್ಯೋನಮಃ" ಎಂದೂ, ಅಂತ್ಯದಲ್ಲಿ "ಶ್ರೀ ಮದಾನಂದ ಘನ ಗುರುಚರಣಾರವಿಂದಾಭ್ಯಾಂ ನಮಃ" ಎಂದೂ ಬರೆದಿದ್ದಾರೆ. ಇದರಂತೆಯೇ ಮೇಲಿನ ಅಚ್ಯುತಾಶ್ರಮಿ ಅಖಂಡಾನಂದರುಗಳ ಸ್ತುತಿಯೂ ವ್ಯಾಖ್ಯಾನಕರ್ತನಾದ ರಾಮಕೃಷ್ಣ ಪಂಡಿತನದಾಗದೆ, ಲಕ್ಷ್ಮೀನಾರಾಯಣ ಶಾಸ್ತ್ರಿಗಳೋ, ಅಥವಾ ಅವರ ಪ್ರತಿಗೆ ಮಾತೃಕಾ ಪ್ರತಿಯನ್ನು ಸಿದ್ಧಪಡಿಸಿದ್ದ ಇತರ ಲೇಖಕ ಅಥವಾ ಪಾಠಕರೋ, ಬರೆದುದಾಗಿರಬಹುದೆ?

## ಪ್ರಕರಣಾನುಕ್ರಮ

ಇವೆಲ್ಲಕ್ಕಿಂತ ಮುಖ್ಯವಾಗಿ, ನಮ್ಮಲ್ಲಿರುವ ಪ್ರತಿಯೇ ಗ್ರಂಥ ಕರ್ತೃ ವಿಹಿತವಾದ ಪಾಠವುಳ್ಳುದೆಂದು ತೋರಿಸುವ ಅಂಶವು ಮತ್ತೊಂದಿದೆ. ಇದು ಅತಿಮುಖ್ಯವಾದುದು. ಆದುದರಿಂದ ಅದು ಸಂಶೋಧಕರ ಗಮನಕ್ಕೆ ಪಾತ್ರವಾಗತಕ್ಕುದಾಗಿದೆ. ಅದೇನೆಂದರೆ—ಮೇಲೆ ವ್ಯಾಖ್ಯಾನಾವತರಣಿಕೆಯಿಂದ ಉದಾಹೃತಗಳಾಗಿರುವ ೧೨ ರಿಂದ ೨೧ ರ ವರೆಗಿನ ಪದ್ಯಗಳೆಲ್ಲಕ್ಕಿಂತ ಹಿಂದೆ ಇರುವ ೧ ರಿಂದ ೧೧ರ ವರೆಗಿನ ಶ್ಲೋಕಗಳ ವಿಷಯ. ಮೊತ್ತಮೊದಲು—

ಸ್ವಾತ್ಮಾನಂದ ಸುಧಾಂಭೋಧಿಂ ನತ್ವಾ ಸ್ವಾಜ್ಞಾನ ನಾಶನಂ ।
ಮುದೇ ತಜ್ಜ್ಞಸ್ಯ ಬಾಲಾನಾಂ ಬೋಧಾಯೇದಂ ವಿತನ್ಯತೇ ॥ ೧ ॥

ಸರ್ವ ಕರ್ಮಾಣ್ಯಪಿ ರುಚಿರ್ಯಸ್ಯ ನೋ ವಿಷಯೋ ತಥಾ ।
ನೋದೇತ್ಯನ್ಯೇಷು ಶಾಸ್ತ್ರೇಷು ಸೋऽಧಿಕಾರ್ಯತ್ರನಿರ್ಣಿತಃ ॥ ೨ ॥

ಸಂಸೃತೌ ವಿರತಿರ್ನಿತ್ಯಂ ಕ್ಲಿಶ್ಯನ್ ಭೋಗಾನ್ ಭುನಕ್ತಿಯಃ ।
ಧ್ರುವಂ ಕಿಂ ವಿದ್ಯತೇತ್ಯೇತ್ಥಂ ನಿರ್ಣೀತಾತ್ರಾಧಿಕಾರವಾನ್ ॥ ೩ ॥

ಎಂಬ ಮೂರು ಶ್ಲೋಕಗಳಿವೆ. ಈ ಶ್ಲೋಕಗಳು ಪರಬ್ರಹ್ಮ ನಮಸ್ಕಾರವನ್ನು ಮಾಡಿ, ಗ್ರಂಥೋದ್ದೇಶವು ಬಾಲಬೋಧೆಯೆಂದು ತಿಳಿಸಿ, ಬಳಿಕ ವೇದಾಂತ ಶಾಸ್ತ್ರಾಭ್ಯಾಸಿಗೆ ಇರಬೇಕಾದ ವೈರಾಗ್ಯ ಮೊದಲಾದ ಸಾಧನ ಚತುಷ್ಟಯ ಸಂಪತ್ತನ್ನು ನಿರೂಪಿಸುತ್ತವೆ. ಅನಂತರ ಈ ಕೆಳಗಿನ ಶ್ಲೋಕಗಳು ಗ್ರಂಥದ ರಚನಾಕ್ರಮವನ್ನು ಸ್ಪಷ್ಟಗೊಳಿಸುತ್ತವೆ.

ಅಯಂ ಪಂಚದಶೀನಾಮ ಗ್ರಂಥಃ ಸ್ವಾತ್ಮ ಸುಖಪ್ರದಃ ।
ಪೃಥಕ್ ಪೃಥಕ್ ಪ್ರಕರಣಂ ದಶಪಂಚಾತ್ರ ಕೀರ್ತಿತಂ ॥ ೪ ॥

ತೇಷಾಂ ಭಿನ್ನಾನಿ ನಾಮಾನಿ ತಾನುದ್ದಿಶ್ಯ ಪ್ರದರ್ಶ್ಯತೇ ।
ಪ್ರಥಮಂ ಚಿತ್ರ ದೀಪಾಖ್ಯಂ ತೃಪ್ತಿ ದೀಪಾಭಿಧಂ ತತಃ ॥ ೫ ॥

ತತಃ ಕೂಟಸ್ಥದೀಪಾಖ್ಯಂ ಧ್ಯಾನದೀಪಾಹ್ವಯಂ ತತಃ ।
ತತೋ ನಾಟಕ ದೀಪಾಖ್ಯಂ ಪಂಚಮಂ ಪರಿಕೀರ್ತಿತಂ ॥ ೬ ॥

ಪತ್ಯಕ್ ತತ್ತ್ವ ವಿವೇಕಾಖ್ಯಂ ಷಷ್ಠಂ ಸಮ್ಯಕ್ ನಿರೂಪಿತಂ ।
ಪಂಚಭೂತವಿವೇಕಾಖ್ಯಂ ಸಪ್ತಮಂ ಪರಿಕೀರ್ತಿತಂ ॥ ೭ ॥

ಪಂಚಕೋಶವಿವೇಕಾಖ್ಯಂ ಅಷ್ಟಮಂ ಚೋಕ್ತಮಾದರಾತ್ ।
ತತೋಽದ್ವೈತವಿವೇಕಾಖ್ಯಂ ನವಮಂ ಪರಿಕೀರ್ತಿತಂ ॥ ೮ ॥

ಮಹಾವಾಕ್ಯ ವಿವೇಕಾಖ್ಯಂ ಯೋಗಾನಂದಾಹ್ವಯಂ ತತಃ ।
ಆತ್ಮಾನಂದ ಸ್ತತಃ ಪ್ರೋಕ್ತಸ್ತ್ವದ್ವಯಾನಂದನಾಮಕಃ ॥ ೯ ॥

ವಿದ್ಯಾನಂದ ಸ್ತತಃ ಪ್ರೋಕ್ತಶ್ಚತುರ್ದಶ ಇತೀರಿತಃ ।
ವಿಷಯಾನಂದ ನಾಮಾಖ್ಯಂ ಚರಮಂ ಸಮುದಾಹೃತಂ ॥ ೧೦ ॥

ಯೋಗಾನಂದಾ ತ್ಸಮಾರಭ್ಯ ವಿಷಯಾಂತ ಮುದಾಹೃತಃ ।
ಬ್ರಹ್ಮಾನಂದಾಭಿಧೋಗ್ರಂಥಃ ಪಂಚಪ್ರಕರಣ್ಯೈರ್ವೃತಃ ॥ ೧೧ ॥

ಮೇಲಿನ ಪಂಚದಶೀ ಪಾರಾಯಣಾಧಿಕಾರ ನಿರೂಪಣೆಯೂ, ಈ ಪ್ರಕರಣಾನುಕ್ರಮ ವಿವರಣೆಯೂ ಮೂಲಗ್ರಂಥಕ್ಕೆ ಸೇರಿದುವೋ, ಅಥವಾ ರಾಮಕೃಷ್ಣ ಕೃತ ವ್ಯಾಖ್ಯಾನಕ್ಕೆ ಸೇರಿದುವೋ, ಅಥವಾ ಗ್ರಂಥ ಲೇಖಕ ಲಕ್ಷ್ಮೀನಾರಾಯಣ ಪಂಡಿತರಿಗೋ, ಅಥವಾ ಅವರ ಪ್ರತಿಯ ಮಾತ್ರಕೆಗೋ ಸೇರಿದುವೋ—ಹೀಗೆಯೇ ಸರಿ ಎಂದು ಹೇಳಲು ನಮಗೆ ಆಧಾರವಿಲ್ಲ. ಹೇಗಾದರೂ ಈ ಶ್ಲೋಕಗಳೇನೋ ಪ್ರಾಚೀನವಾದುವೆಂಬುದಕ್ಕೆ ಆಕ್ಷೇಪಣೆಯಿರದು. ನಮ್ಮ ಪ್ರತಿಯ ಕಡೆಯಲ್ಲಿ ಸಮಗ್ರ ಗ್ರಂಥದ ಸಂಖ್ಯಾ ಪರಿಮಿತಿಯನ್ನೂ ಲೇಖಕರು ಹೇಳಿದ್ದಾರೆ:—

| | | | |
|---|---|---|---|
| ೧ನೇಯ ಪ್ರಕರಣ | .. | ೧೦೨೦ | ಶ್ಲೋಕ ಅಥವಾ |
| ೨ನೇಯ ,, | .. | ೧೩೨೦ | ಗ್ರಂಥ |
| ೩ನೇಯ ,, | .. | ೨೪೨ | ,, |
| ೪ನೇಯ ,, | .. | ೪೬೦ | ,, |
| ೫ನೇಯ ,, | .. | ೧೨೫ | ,, |
| ೬ನೇಯ ,, | .. | ೪೪೨ | ,, |
| ೭ನೇಯ ,, | .. | ೩೮೪ | ,, |
| ೮ನೇಯ ,, | .. | ೨೫೩ | ,, |

| | | | |
|---|---|---|---|
| ೯ನೆಯ ಪ್ರಕರಣ | .. | ೨೫ | ಶ್ಲೋಕ ಅಥವಾ |
| ೧೦ನೆಯ ,, | .. | ೫೨ | ಗ್ರಂಥ |
| ೧೧ನೆಯ ,, | .. | ೭೩೬ | ,, |
| ೧೨ನೆಯ ,, | .. | ೪೬೮ | ,, |
| ೧೩ನೆಯ ,, | .. | ೪೬೨ | ,, |
| ೧೪ನೆಯ ,, | .. | ೧೩೦ | ,, |
| ೧೫ನೆಯ ,, | .. | ೭೦ | ,, |
| | ಒಟ್ಟು | ೬೩೮೯ | ಗ್ರಂಥ |

(ಗ್ರಹೈರ್ಭೋಗೈರ್ಗುಣೈ ಷ್ಷಡ್ಭಿಃ ಪ್ರಕೀರ್ತಿತಾ)

ಇದನ್ನೆಲ್ಲಾ ನೋಡಿದರೆ ನಮ್ಮಲ್ಲಿರುವ ಪ್ರತಿಯ ಪ್ರಾಮಾಣ್ಯವು ನಿರಾಬಾಧವಾಗಿರುವಂತೆ ತೋರುತ್ತದೆ.

## ನಿಜವಾದ ಗ್ರಂಥಾರಂಭ

ಮುದ್ರಿತ ಪುಸ್ತಕಗಳಲ್ಲಿಯ ಪ್ರಕರಣಾನುಕ್ರಮವು ಈ ಮೇಲಿನ ಶ್ಲೋಕಗಳಲ್ಲಿ ಹೇಳಿರುವಂತೆ ಇಲ್ಲ. ಪಂಚದಶಿಯು (ಹೆಸರಿನಿಂದಲೇ ವ್ಯಕ್ತವಾಗಿರುವಂತೆ) ಹದಿನೈದು ಪ್ರಕರಣಗಳುಳ್ಳ ಗ್ರಂಥ. ಅದರ ಐದೈದು ಪ್ರಕರಣಗಳು ಒಂದೊಂದು ವಿಭಾಗವಾಗಿ "ಪಂಚಕ"ಗಳೆಂದು ಕರೆಯಲ್ಪಟ್ಟಿವೆ. ಈ ಪಂಚಕಗಳ ಕ್ರಮ ವ್ಯತ್ಯಾಸವು ಈ ಕೆಳಗಿನಂತೆ ಇದೆ:—

| ನಮ್ಮ ಹಸ್ತಲಿಖಿತ ಪ್ರತಿ | ಮುದ್ರಿತ ಪ್ರತಿ* |
|---|---|
| ೧. ದೀಪ ಪಂಚಕ | ವಿವೇಕ ಪಂಚಕ |
| ೨. ವಿವೇಕ ,, | ದೀಪ ,, |
| ೩. ಆನಂದ ,, | ಆನಂದ ,, |

* ನಾವು ನೋಡಿರುವ ಮುದ್ರಿತ ಪ್ರತಿಗಳು ಮೂರು: (೧) ಬೊಂಬಾಯಿ ನಿರ್ಣಯ ಸಾಗರ ಮುದ್ರಾಲಯದ್ದು, ದೇವನಾಗರಿ ಅಕ್ಷರ. (೨) ಬೆಂಗಳೂರಿನ ಶ್ರೀ ಸಹಜಾನಂದ ಮಠದಿಂದ ಪ್ರಕಟವಾದದ್ದು, ಕನ್ನಡ ಅಕ್ಷರ. (೩) ಮದ್ರಾಸಿನಲ್ಲಿ ಪ್ರಕಟವಾದದ್ದು, ತೆಲುಗು ಅಕ್ಷರ.

ಈ ಪ್ರಕರಣ ವ್ಯವಸ್ಥೆಯಲ್ಲಿ ನಮ್ಮ ಹಸ್ತಪ್ರತಿಯದೇ ಯುಕ್ತವಾದು ದೆಂದು ಹೇಳಲು ಮೇಲಿನ ಶ್ಲೋಕಗಳೇ ಅಲ್ಲದೆ ವ್ಯಾಖ್ಯಾನದಲ್ಲಿಯೇ ತಕ್ಕ ಪ್ರಮಾಣವಿದೆ. ಹೇಗೆಂದರೆ, ದೀಪಪಂಚಕದಲ್ಲಿ ಆದಿಯುದಾದ ಚಿತ್ರದೀಪ ಪ್ರಕರಣವು ಹಸ್ತಪ್ರತಿಯಲ್ಲಿ ಮೊದಲನೆಯದಾಗಿ ಮುದ್ರಿತ ಪ್ರತಿಯಲ್ಲಿ ಆರನೆಯದಾಗಿದ್ದರೂ, ಎರಡು ಪ್ರತಿಗಳಲ್ಲಿಯೂ ಅದರ ವ್ಯಾಖ್ಯಾನವು ಈ ಕೆಳಗೆ ಕೊಟ್ಟಿರುವಂತೆ ಗ್ರಂಥಾರಂಭ ಸೂಚಕಗಳಾದ ವಾಕ್ಯಗಳಿಂದ ಉಪಕ್ರಮಿಸುತ್ತದೆ:—

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥
ನತ್ವಾ ಶ್ರೀಭಾರತೀತೀರ್ಥ ವಿದ್ಯಾರಣ್ಯಮುನೀಶ್ವರೌ ।
ಕ್ರಿಯತೇ ಚಿತ್ರದೀಪಸ್ಯ ವ್ಯಾಖ್ಯಾ ತಾತ್ಪರ್ಯಬೋಧಿನೀ ॥

ಚಿಕೀರ್ಷಿತಸ್ಯ ಗ್ರಂಥಸ್ಯ ನಿಷ್ಪ್ರತ್ಯೂಹ ಪರಿಪೂರಣಾಯ ಪರಮಾತ್ಮನೀತಿ ಪದೇನೇಷ್ಟದೇವತಾ ತತ್ತ್ವಾನುಸಂಧಾನ ಲಕ್ಷಣಂ ಮಂಗಳಮಾಚರನ್ನಸ್ಯ ಗ್ರಂಥಸ್ಯ ವೇದಾಂತ ಪ್ರಕರಣತ್ವಾತ್ತದೀಯೈರೇವ ವಿಷಯಾದಿಭಿಸ್ತದ್ವತ್ತಾಸಿದ್ಧಿಂ ಮನಸಿ ನಿಧಾಯ 'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತ' ಇತಿನ್ಯಾಯಮನುಸೃತ್ಯ ಪರಮಾತ್ಮನ್ಯಾರೋಪಿತಸ್ಯ ಜಗತಃ ಸ್ಥಿತಿಪ್ರಕಾರಂ ಸದೃಷ್ಟಾಂತಂ ಪ್ರತಿಜಾನೀತೇ॥ ಯಥೇತಿ—

ಯಥಾ ಚಿತ್ರಪಟೇ ದೃಷ್ಟಮವಸ್ಥಾನಾಂ ಚತುಷ್ಟಯಂ ।
ಪರಮಾತ್ಮನಿ ವಿಜ್ಞೇಯಂ ತಥಾವಸ್ಥಾ ಚತುಷ್ಟಯಂ ॥

"ಬರೆಯಲುದ್ದೇಶಿಸಿರುವ ಗ್ರಂಥವು ನಿರ್ವಿಘ್ನವಾಗಿ ಮುಗಿಯುವುದ ಕ್ಕೋಸ್ಕರ 'ಪರಮಾತ್ಮನಿ' ಎಂಬ ಮಾತಿನಿಂದ ಇಷ್ಟದೇವೋಪಾಸನಾ ರೂಪವಾದ ಮಂಗಳವನ್ನು ಮಾಡಿ, ಈ ಗ್ರಂಥವು ವೇದಾಂತ ಪ್ರಕರಣ ಗಳುಳ್ಳುದಾದಕಾರಣ ಅದರ ವಿಷಯಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು, ಪರಮಾತ್ಮನಲ್ಲಿ ಆರೋಪಿತವಾಗಿರುವ ಜಗತ್ತಿನ ಸ್ಥಿತಿ ಪ್ರಕಾರವನ್ನು ದೃಷ್ಟಾಂತ ಸಹಿತವಾಗಿ ತೋರಿಸುತ್ತಾರೆ,—ಮುಂದಿನ 'ಯಥಾ' ಇತ್ಯಾದಿ ಯಾದ ಶ್ಲೋಕದಿಂದ."

ಇದಲ್ಲದೆ, "ಶುಕ್ಲಾಂಬರಧರಂ" ಇತ್ಯಾದಿಯಾದ ಗಣಪತಿ ಪ್ರಾರ್ಥನೆಯು ಇತರ ಪ್ರಕರಣಗಳ ವ್ಯಾಖ್ಯಾನಾರಂಭದಲ್ಲಿಲ್ಲದೆ (ಮುದ್ರಿತ ಪುಸ್ತಕಗಳಲ್ಲಿ ಆರನೆಯದಾದ) ಈ ಚಿತ್ರದೀಪ ಪ್ರಕರಣದ ಮೊದಲಿನಲ್ಲಿಯೇ ಇರುವುದರಿಂದ ಇದೇ ಗ್ರಂಥಾದಿಯಾಗಿರಬೇಕೆಂದು ಅನುಮಾನಿಸಲಾಗುತ್ತದೆ.

ಹೀಗೆ "ಪಂಚದಶೀ" ಗ್ರಂಥದ ಮುದ್ರಿತ ಪುಸ್ತಕಗಳಲ್ಲಿರುವ ಪ್ರಕರಣ ವ್ಯವಸ್ಥೆಯು ಸರಿಯಲ್ಲವೆಂಬುದಕ್ಕೂ, ನಮ್ಮಲ್ಲಿರುವ ಹಸ್ತಲಿಖಿತ ಪ್ರತಿಯ ಪ್ರಕರಣಾನುಕ್ರಮವೇ ಸರಿಯೆಂಬುದಕ್ಕೂ ಮೂರು ಬಗೆಯ ಆಧಾರಗಳಿವೆ:—

(೧) ನಮ್ಮ ಹಸ್ತಪ್ರತಿಯು ಪಂಡಿತ ಪರಂಪರಾಗತವಾಗಿ ಬಂದಿರುವುದು.

(೨) ಆ ಪ್ರತಿಯಲ್ಲಿಯೇ (ಮೇಲೆ ಕೊಟ್ಟಿರುವ ಶ್ಲೋಕಗಳಲ್ಲಿ) ಪ್ರಕರಣ ವಿಧಾನವನ್ನು ಹೇಳಿರುವುದು.

(೩) ವ್ಯಾಖ್ಯಾನಕಾರನು ದೀಪಪಂಚಕವೇ ಮೊದಲನೆಯದೆಂದೂ ಅದರಲ್ಲಿ ಚಿತ್ರದೀಪವೇ ಗ್ರಂಥಾರಂಭವೆಂದೂ ಸೂಚಿಸಿರುವುದು.

ಈ ರೀತಿ "ಚಿತ್ರದೀಪಪ್ರಕರಣ"ವೇ "ಪಂಚದಶೀ" ಗ್ರಂಥದ ಪ್ರಾರಂಭವೆಂದು ನಮಗೆ ತೋರುತ್ತದೆ. ಈ "ಚಿತ್ರದೀಪ" ಭಾಗದ ಆದಿಯಲ್ಲಿ ಗುರು ಸ್ತುತಿಯಿಲ್ಲ; ಪರಮಾತ್ಮ ಸ್ಮರಣೆ ಮಾತ್ರವಿದೆ. ಆದರೆ ಗುರು ಸ್ತುತಿಯಿರಲೇಬೇಕೆಂಬ ವಿಧಿಯೇನೂ ಇಲ್ಲ. ಶ್ರೀ ಶಂಕರಭಗವತ್ಪಾದಾಚಾರ್ಯರ ಬ್ರಹ್ಮಸೂತ್ರಭಾಷ್ಯದ ಆರಂಭದಲ್ಲಿ ದೇವತಾಸ್ತುತಿ ಗುರುಸ್ತುತಿಗಳಾವುವೂ ಇಲ್ಲ. ಎತ್ತಿಕೊಳ್ಳುತ್ತಲೇ ಅವರು

**ಯುಷ್ಮದಸ್ಮತ್ಪ್ರತ್ಯಯಗೋಚರಯೋಃ ವಿಷಯವಿಷಯಿಣೋಃ ತಮಃ ಪ್ರಕಾಶವದ್ವಿರುದ್ಧ ಸ್ವಭಾವಯೋಃ**

ಎಂಬೀ ರೀತಿಯಲ್ಲಿ ಶಾಸ್ತ್ರ ಪ್ರಸಂಗಕ್ಕೇ ಕೈಹಾಕಿರುವರು. ಹೀಗಿರುವುದರಿಂದ, ಗುರುಸ್ತೋತ್ರವಿಲ್ಲವೆಂಬ ಒಂದು ಕಾರಣದಿಂದಲೇ ಮೇಲಿನ ಸಿದ್ಧಾಂತಕ್ಕೆ ಭಂಗಬರಲಾರದು.

ಗ್ರಂಥದ ಪ್ರಥಮ ಪಂಚಕದಲ್ಲಿ ಮೊದಲನೆಯ ಪ್ರಕರಣವಾದ "ಚಿತ್ರದೀಪ"ವು ಈ ರೀತಿ ಆರಂಭಿಸಿದ್ದರೂ, ಅದರ ತರುವಾಯ ಇರುವ ಎರಡನೆಯ "ತೃಪ್ತಿದೀಪ" ಪ್ರಕರಣದ ವ್ಯಾಖ್ಯಾನಾರಂಭದಲ್ಲಿ ಪುನಃ "ಅಖಂಡಾನಂದ" ಗುರುಸ್ತುತಿಯೂ "ವೇದಾರ್ಥಸ್ಯ ಪ್ರಕಾಶೇನ" ಇತ್ಯಾದಿಯಾದ ವಿದ್ಯಾತೀರ್ಥ ಪ್ರಾರ್ಥನೆಯೂ ಇರುವುವು. ಮತ್ತು ಇಲ್ಲಿ ವ್ಯಾಖ್ಯಾನಕಾರನು, ಮೇಲೆ ಹೇಳಿರುವಂತೆ

ತೃಪ್ತಿದೀಪಾಖ್ಯಂ ಪ್ರಕರಣ ಮಾರಭಮಾಣಃ ಶ್ರೀಭಾರತೀತೀರ್ಥಗುರುಃ

ಎಂದು (ವಿದ್ಯಾರಣ್ಯರ ಹೆಸರನ್ನು ಹೇಳದೆ) ಉಳಿದೊಬ್ಬರ ಹೆಸರನ್ನು ಮಾತ್ರ ಸ್ಮರಿಸಿರುವನು. ಇದರಿಂದ ನಮಗೆ ತೋರುವುದೇನೆಂದರೆ:–ಭಾರತೀತೀರ್ಥರೇ "ಪಂಚದಶೀ" ಗ್ರಂಥವನ್ನು ಉಪಕ್ರಮಿಸಿ ಚಿತ್ರದೀಪ ಮೊದಲಾದ ದೀಪಪಂಚಕವನ್ನು ಬರೆದಿರಬೇಕು. ಆಮೇಲೆ ಅವರು ಸಿದ್ಧಿಹೊಂದಿದ ಕಾರಣದಿಂದಲೋ, ಮತ್ತಾವ ಕಾರಣದಿಂದಲೋ ವಿದ್ಯಾರಣ್ಯರು ಆ ಗ್ರಂಥಕ್ಕೆ ಕೈಹಾಕಿ ಮಿಕ್ಕೆರಡು ಪಂಚಕಗಳನ್ನು ಬರೆದು ಮುಗಿಸಿರಬೇಕು. ಆದುದರಿಂದಲೇ ಹಸ್ತಪ್ರತಿಯಲ್ಲಿ ಎರಡನೆಯ ಪಂಚಕದ ಮೊದಲನೆಯ ಪ್ರಕರಣವೂ ಮುದ್ರಿತ ಪ್ರತಿಯಲ್ಲಿ ಮೊದಲನೆಯ ಪಂಚಕದ ಮೊದಲನೆಯ ಪ್ರಕರಣವೂ ಆಗಿರುವ "ಪ್ರತ್ಯಕ್ತತ್ತ್ವ ವಿವೇಕ"ವು ಗ್ರಂಥಾರಂಭದ ರೀತಿಯಲ್ಲಿ ಗುರು ವಂದನೆಯಿಂದ ಪ್ರಾರಂಭಿಸುತ್ತದೆ:—

ನಮಃ ಶ್ರೀಶಂಕರಾನಂದ ಗುರು ಪಾದಾಂಬು ಜನ್ಮನೇ ।
ಸವಿಲಾಸ ಮಹಾಮೋಹ ಗ್ರಾಹ ಗ್ರಾಸೈಕ ಕರ್ಮಣೇ ॥

[ಮೋಹವೆಂಬ ಮೊಸಳೆಯನ್ನು ನಾಶಪಡಿಸಬಲ್ಲ ಶ್ರೀ ಶಂಕರಾನಂದ ಗುರು ಚರಣಕಮಲಕ್ಕೆ ನಮಸ್ಕಾರವು.]

ಬಹುಶಃ ಈ ವೇಳೆಗೆ ಶಂಕರಾನಂದರವರು ಇನ್ನೂ ದೇಹಧಾರಣೆ ಮಾಡಿದ್ದರೆಂದು ತೋರುತ್ತದೆ. ಒಂದುಬಾರಿ ವಿಘ್ನಕ್ಕೊಳಗಾದ ಗ್ರಂಥವು

ಪುನಃ ಹಾಗಾಗದೆ ಪರಿಪೂರ್ತಿಯಾಗಲೆಂಬುದಕ್ಕಾಗಿ, ಬಹುಶಃ ವಿದ್ಯಾರಣ್ಯರು ಶಂಕರಾನಂದ ಗುರುಗಳ ಅನುಮತಿ ಅನುಗ್ರಹಗಳನ್ನು ಬಯಸಿ ಈ ರೀತಿ ಮಾಡಿರಬಹುದು.

ಭಾರತೀ ತೀರ್ಥರು ಶಂಕರಾನಂದರಿಗಿಂತ ವೃದ್ಧರೆಂಬುದನ್ನು ಹಿಂದೆಯೇ ನೋಡಿರುವೆವು. ಭಾರತೀ ತೀರ್ಥರು ಪರಮ ಪದವನ್ನು ಸೇರಿದುದು ಸುಮಾರು ಕ್ರಿ. ಶ. ೧೩೮೦ರಲ್ಲಿ. ಶಂಕರಾನಂದರು ಸಿದ್ಧಿಹೊಂದಿದುದು ೧೪೧೯ರಲ್ಲಿ. ಇದರಿಂದ ಮೇಲೆ ಸೂಚಿಸಿದ ಊಹೆಯು ಸಮಂಜಸವೆಂದು ಕಾಣುತ್ತದೆ.

## ಗ್ರಂಥ ಪರಿಸಮಾಪ್ತಿ

ಭಾರತೀ ತೀರ್ಥರು ಸಮಾಧಿಹೊಂದಿದ ಕಾಲವು ಇಮ್ಮಡಿ ಹರಿಹರ ರಾಯನ ಆಳಿಕೆಯದು. ಆ ರಾಯನ ಕಾಲದಲ್ಲಿಯೇ ಪಂಚದಶೀ ಗ್ರಂಥ ರಚನೆಯು ಪರಿಸಮಾಪ್ತವಾಯಿತೆನ್ನುವುದಕ್ಕೆ ಕಡೆಯ ಪ್ರಕರಣದ ಕಡೆಯ ಶ್ಲೋಕವು ಸಾಧಕವಾಗಿದೆ.

ಪ್ರೀಯಾದ್ಧರಿಹರೋಽನೇನ ಬ್ರಹ್ಮಾನಂದೇನ ಸರ್ವದಾ ।
ಪಾಯಾಚ್ಚ ಪ್ರಾಣಿನಃ ಸರ್ವಾನ್ ಸ್ವಾಶ್ರಿತಾನ್ ಶುದ್ಧಮಾನಸಾನ್ ॥

[ಈ "ಬ್ರಹ್ಮಾನಂದ"ವೆಂಬ ಗ್ರಂಥದಿಂದ ಹರಿಹರನು ಸರ್ವದಾ ಸುಪ್ರೀತನಾಗಿ ತನ್ನನ್ನಾಶ್ರಯಿಸಿರುವ ಸಕಲ ಶುದ್ಧಮನಸ್ಕರನ್ನೂ ಪರಿಪಾಲಿಸಲಿ.]

ಈ ಶ್ಲೋಕಕ್ಕೆ ಹರಿಹರ ಭಗವಂತನ ಪರವಾಗಿಯೂ ಅರ್ಥ ಮಾಡಬಹುದು; ಹರಿಹರರಾಜನ ಪರವಾಗಿಯೂ ಅರ್ಥ ಮಾಡಬಹುದು. ಎರಡು ವಿಧಗಳಲ್ಲಿಯೂ ಅರ್ಥವು ಉಚಿತವಾಗಿರುವಂತೆ ಪದಗಳು ಜೋಡಣೆಯಾಗಿವೆ. ಆದರೆ ಭಗವಂತನನ್ನು ನಿರ್ದೇಶಿಸಲು ಗ್ರಂಥ ವಿಷಯಾನುಗುಣವಾಗಿ ವೇದಾಂತಾರ್ಥದ್ಯೋತಕಗಳಾಗಿರುವ ಪದಗಳು ಎಷ್ಟೋ ಇರುವಲ್ಲಿ, "ಹರಿಹರ" ಎಂಬ (ತಾವು ಮತ್ತೆಲ್ಲಿಯೂ ದೇವರ ವಿಷಯದಲ್ಲಿ ಉಪಯೋಗಿಸದಿರುವ) ಪದವನ್ನೇ ಬೇಕೆಂದು ಆರಿಸಿ

ಪ್ರಯೋಗಮಾಡಿರುವುದಕ್ಕೆ ವಿಶೇಷ ಕಾರಣವೇನೋ ಒಂದಿರಬೇಕೆಂದು ಸ್ಪಷ್ಟವಾಗಿ ತೋರುತ್ತದೆ.

ಗ್ರಂಥದ ಪರಿಸಮಾಪನೆಯಲ್ಲಿ ಅದನ್ನು ಗುರುವಿಗೂ ದೇವರಿಗೂ (ಇಬ್ಬರಿಗೂ) ಸಹ ಒಂದೇ ಪದದಿಂದ ಅರ್ಪಣೆಮಾಡುವುದು ವಿದ್ಯಾರಣ್ಯರ ಪದ್ಧತಿಯೆಂಬುದನ್ನು "ಅನುಭೂತಿಪ್ರಕಾಶ" ಮೊದಲಾದ ಪ್ರಬಂಧಗಳಲ್ಲಿ ಕಾಣಬಹುದು :—

ಯಾಮಾತ್ಮಬ್ರಾಹ್ಮಣೇ ವಿದ್ಯಾಂ ಕಣ್ವಃ ಪ್ರೋವಾಚ ಸಾ ಸ್ಫುಟಂ।
ವ್ಯಾಖ್ಯಾತಾ ಪ್ರೀಯತಾಂ ತೇನ ವಿದ್ಯಾತೀರ್ಥ ಮಹೇಶ್ವರಃ॥

ಇದರಂತೆಯೇ "ಪಂಚದಶಿ"ಯ ಉಪಸಂಹಾರದಲ್ಲಿ ರಾಜದೈವಗಳ ನ್ನಿಬ್ಬರನ್ನೂ ಸೇರಿಸಿರುವರೆಂಬುದು ನಮ್ಮ ಊಹೆ. ಆದರೆ, ಗುರುವನ್ನು ಪರಮೇಶ್ವರನೊಡನೆ ಸೇರಿಸಿ ಹೇಳುವುದು ಶಾಸ್ತ್ರ ಸಂಪ್ರದಾಯ ಸಮ್ಮತ ವಾಗಿದೆ; ರಾಜನನ್ನೂ ಹಾಗೆಯೇ ದೇವರೊಡನೆ ಸೇರಿಸುವುದು ಉಚಿತವೋ?—ಎಂದರೆ, ಮಾಧವ-ವಿದ್ಯಾರಣ್ಯ ಸ್ವಾಮಿಗಳವರೇ "ಜೈಮಿನೀಯ ನ್ಯಾಯಮಾಲಾವಿಸ್ತರ"ದಲ್ಲಿ ಬುಕ್ಕರಾಜನನ್ನು ಪರಬ್ರಹ್ಮನ ಅಂಶವೆಂದೂ ವಿದ್ಯಾತೀರ್ಥರ ನೆಲೆಮನೆಯೆಂದೂ ವರ್ಣಿಸಿರುವರೆಂಬುದನ್ನು ನಾವು ಜ್ಞಾಪಕಕ್ಕೆ ತಂದುಕೊಳ್ಳಬೇಕು. ಅವರು ಸರ್ವತ್ರ ಬ್ರಹ್ಮಾನುಸಂಧಾನ ಮಾಡುತ್ತಿದ್ದ ಮಹನೀಯರು. ತಮ್ಮ ಪ್ರಬಂಧದಲ್ಲಿ ಹರಿಹರ ಭಗವಂತ ನನ್ನು ಸ್ಮರಿಸುವುದರ ಮೂಲಕ ತಮ್ಮ ಶಿಷ್ಯನಾದ ಹರಿಹರನಿಗೂ ಅದನ್ನು ಅಂಕಿತಮಾಡಿರುವುದರಲ್ಲಿ—ಆತನಿಗೆ ಆಶೀರ್ವಾದ ಮಾಡಿ, ಆತನ ಖ್ಯಾತಿ ಯನ್ನು ಬಲಪಡಿಸಿ, ಆತನ ದೊಡ್ಡಪ್ಪ ಹರಿಹರನಲ್ಲಿಯೂ ತಂದೆ ಬುಕ್ಕನಲ್ಲಿ ಯೂ ಇದ್ದಂತೆ ಆತನಲ್ಲಿಯೂ ವೇದವೇದಾಂತ ವಿಷಯಗಳಲ್ಲಿ ಭಕ್ತಿ ಶ್ರದ್ಧೆ ಗಳು ಹುಟ್ಟುವಂತೆ ಮಾಡುವುದು ಅವರಿಗೆ ಒಂದು ಆಶಯವಾಗಿತ್ತೆಂದು ನಾವು ಊಹಿಸಬಹುದು. ಅದು ದೇಶಧರ್ಮಾಭಿಮಾನಿಗಳಾದವರಿಗೆ ಸ್ವಾಭಾವಿಕವೇ ಅಲ್ಲವೆ ?

ಗ್ರಂಥವು ಭಾರತೀ ತೀರ್ಥರಿಂದ ಪ್ರಾರಂಭಿಸಲ್ಪಟ್ಟುದಾದರೂ, ವಿದ್ಯಾರಣ್ಯರ ಕೈಯಿಂದ ಸಮಾಪ್ತಿಹೊಂದಿ ಪ್ರಕಾಶಕ್ಕೆ ಬಂದುದೇ

"ಪಂಚದಶಿ"ಯು ವಿದ್ಯಾರಣ್ಯ ಕೃತವೆಂಬ (ಅಚ್ಚಾದ ಪುಸ್ತಕಗಳಲ್ಲಿ ಕಾಣಬರುವ) ಜನವಚನಕ್ಕೆ ಕಾರಣವಾಗಿರಬಹುದು.

## ಅನ್ಯೋನ್ಯ ವಿಶ್ವಾಸ

ವಿದ್ಯಾತೀರ್ಥರು ಶಿಷ್ಯರಾದ ವಿದ್ಯಾರಣ್ಯರ ಪ್ರಾರ್ಥನೆಗೆ ವಶರಾಗಿ ನಡೆದುಕೊಳ್ಳುತ್ತಿದ್ದರೆಂದು ಹಿಂದೆ ಸೂಚಿಸಿದೆವಷ್ಟೆ? ಭಾರತೀ ತೀರ್ಥರೂ ಕೂಡ ಹಾಗೆಯೇ ವಿದ್ಯಾರಣ್ಯರ ಮಾತಿನಲ್ಲಿ ವಿಶ್ವಾಸವಿಟ್ಟು ನಡೆಯುತ್ತಿದ್ದಂತೆ ತೋರುತ್ತದೆ. ಅದಕ್ಕೆ ಇಮ್ಮಡಿ ಹರಿಹರನ ಕಾಲದ ಈ ಕೆಳಗಿನ ಶ್ಲೋಕವು ಸಾಕ್ಷಿಯಾಗಿದೆ :—

ವಿದ್ಯಾತೀರ್ಥಾಜ್ಞನಿಮತಿ ಶುಭೇ ಭಾರತೀತೀರ್ಥ ಪದ್ಮೇ ।
ನಿತ್ಯವ್ಯಕ್ತಾದ್ವಯ ಚಿದಮೃತಾನಂದ ಸೌರಭ್ಯಭಾಜಿ ॥
ವಿದ್ಯಾರಣ್ಯ ದ್ಯುಮಣಿ ಮಹಿಮ ಪ್ರಾಪ್ತಲಕ್ಷ್ಮೀ ವಿಕಾಸೇ ।
ಭೂಯೋ ಭೂಯೋ ವಿಹರತಿ ಸುಖೀ ಬುಕ್ಕ ಭೂಪಾಲ ಹಂಸಃ ॥

ಇದರ ಭಾವವೂ ಶೈಲಿಯೂ ಅತಿ ಮಧುರವಾಗಿವೆ:—"ಭಾರತೀ ತೀರ್ಥರೆಂಬ ಕಮಲವು ವಿದ್ಯಾತೀರ್ಥರೆಂಬ ಸರಸ್ಸಿನಲ್ಲಿ ಹುಟ್ಟಿದೆ. ಅದನ್ನು ವಿದ್ಯಾರಣ್ಯರೆಂಬ ಸೂರ್ಯನ ಕಿರಣವು ಅರಳಿಸಿದೆ. ಅದು ಅದ್ವೈತ ಬ್ರಹ್ಮತತ್ತ್ವವೆಂಬ ಮಕರಂದವನ್ನು ಸೂಸುತ್ತಿದೆ. ಅದರಿಂದ ಬುಕ್ಕರಾಜನೆಂಬ ಹಂಸೆಯು ಆನಂದಿಸುತ್ತಿದೆ"—ಎಂದ ಮೇಲೆ, ವಿದ್ಯಾರಣ್ಯರೇ ಭಾರತೀತೀರ್ಥರಿಂದ ಗ್ರಂಥಲೇಖನ ಪ್ರವಚನಾದಿಕಾರ್ಯಗಳನ್ನು ಮಾಡಿಸುತ್ತಿದ್ದರೆಂಬುದು ಸಿದ್ಧವಾಯಿತು.

ಪರಾಶರ-ವ್ಯವಹಾರ-ಕಾಲಮಾಧವೀಯಗಳಲ್ಲಿಯ ಪೀಠಿಕಾಶ್ಲೋಕವೊಂದರಲ್ಲಿ

ಲಬ್ಧಾಮಾಕಲಯನ್ ಪ್ರಭಾವಲಹರೀಂ ಶ್ರೀ ಭಾರತೀತೀರ್ಥತಃ

[ಭಾರತೀ ತೀರ್ಥರವರಿಂದ ವಿವಿಧ ಶಕ್ತಿಗಳನ್ನು ಸಂಪಾದಿಸಿ]
ಎಂದೂ, ಮತ್ತೊಂದು ಶ್ಲೋಕದಲ್ಲಿ

ಸರ್ವೇಷಾಂ ಚ ಪ್ರಥಮ ಸುಖದಂ ಭಾರತೀತೀರ್ಥಮಾಹುಃ ।
ತದ್ಭಾವಾನ್ಮೇ ವಿಪುಲ ಮನಸೋ ನಿರ್ಣಯೇ ಶಕ್ತಿರಸ್ತಿ ॥

[ಎಲ್ಲರಿಗೂ ಸರ್ವೋತ್ಕೃಷ್ಟ ಸುಖವನ್ನು ಕೊಡಬಲ್ಲವರು ಭಾರತೀ ತೀರ್ಥರು. ಅವರನ್ನು ನಾನು ಮನಸ್ಸಿನಲ್ಲಿಟ್ಟುಕೊಂಡಿರುವುದರಿಂದ ಧರ್ಮಸೂಕ್ಷ್ಮನಿರ್ಣಯದಲ್ಲಿ ನನಗೆ ಸಾಮರ್ಥ್ಯವುಂಟು.]

ಎಂದೂ, "ಜೈಮಿನೀಯ ನ್ಯಾಯಮಾಲಾ ವಿಸ್ತರ"ದ ಪೀಠಿಕೆಯಲ್ಲಿ

ಸ ಭವ್ಯಾದ್ಭಾರತೀತೀರ್ಥ ಯತೀಂದ್ರ ಚತುರಾನನಾತ್ ।
ಕೃಪಾಮವ್ಯಾಹತಾಂ ಲಬ್ಧ್ವಾ ಪರಾರ್ಧ್ಯ ಪ್ರತಿಮೋಭವತ್ ॥

[ಆತ (ಮಾಧವ)ನು ಭಾರತೀ ತೀರ್ಥ ಯತಿವರ್ಯರ ಕೃಪೆಗೆ ಪಾತ್ರನಾಗಿ ಅವರ ಪ್ರಸಾದದಿಂದ ಉತ್ತಮತೆಗೆ ಪ್ರಮಾಣರೂಪನಾಗಿದ್ದಾನೆ.] ಎಂದೂ ವಿದ್ಯಾರಣ್ಯರು ಹೇಳಿದ್ದಾರೆ. ಅಂತಹವರ ಬಾಯಿಂದ ಈ ರೀತಿ ಹೊಗಳಿಕೆ ಪಡೆದವರು ಮಹಾ ಮಹನೀಯರಾಗಿದ್ದಿರಬೇಕಲ್ಲವೆ?

———

# ಅನುಬಂಧ

## ಪಂಚದಶೀ ಕರ್ತೃತ್ವ ವಿಚಾರ

"ವೇದಾಂತ ಪಂಚದಶಿ"ಯ ಕರ್ತೃತ್ವದ ವಿಷಯದಲ್ಲಿ ಐತಿಹ್ಯವು ಅನೇಕ ಮುಖವಾಗಿದೆಯೆಂದು ಪ್ರಸಿದ್ಧ ಪಂಡಿತರೂ, ಹಿಂದೂ ತತ್ತ್ವಶಾಸ್ತ್ರ ಲೇಖಕರೂ ಆದ ಪ್ರೊಫೆಸರ್ ರಾಧಾಕೃಷ್ಣಯ್ಯನವರೂ ತಿಳಿಸುತ್ತಾರೆ :—

"Tradition is divided as to the authorship of the *Panchadasi*. Vidyaranya is said to have written the first six chapters and Bharatitirtha the other nine (see Pitambaraswamin's edition, P. 6). Nischaladasa, in his *Vrittiprabhakara* (P. 424), assigns the first ten to Vidyaranya and the other five to Bharatitirtha."

—*Indian Philosophy* By S. RADHAKRISHNAN VOL. II. P. 451 n. (1927).

ನಿಶ್ಚಲದಾಸರೂ ಪೀತಾಂಬರ ಸ್ವಾಮಿಗಳೂ ಪ್ರಕರಣಗಳ ಹಂಚಿಕೆಯ ವಿಷಯದಲ್ಲಿ ಭಿನ್ನಾಭಿಪ್ರಾಯವುಳ್ಳವರಾದರೂ, ಅವರಿಬ್ಬರೂ ಗ್ರಂಥದ ಸಮಗ್ರ ಶರೀರ ರಚನೆಯಲ್ಲಿ ಭಾರತೀತೀರ್ಥ ವಿದ್ಯಾರಣ್ಯರುಗಳಿಬ್ಬರೂ ಸೇರಿದ್ದರೆಂದು ಒಪ್ಪಿರುವಂತೆ ಮೇಲಿನ ವಾಕ್ಯವು ಸ್ಪಷ್ಟವಾಗಿ ತಿಳಿಸುತ್ತದೆ. ಈ ತಿಳಿವಳಿಕೆಯಿಂದ ನಮ್ಮ (೬೮ನೆಯ ಪುಟ) ಸಿದ್ಧಾಂತಕ್ಕೆ ಬಲವೇ ದೊರೆಯುತ್ತದೆ. ಭಾರತೀತೀರ್ಥರು ದೀಪ ಪಂಚಕವೆಂಬ ಐದು ಪ್ರಕರಣಗಳನ್ನೂ, ವಿದ್ಯಾರಣ್ಯರು ವಿವೇಕ ಪಂಚಕ ಆನಂದಪಂಚಕಗಳೆಂಬ ಹತ್ತು ಪ್ರಕರಣಗಳನ್ನೂ ಬರೆದಿರಬೇಕು.

---

# ಶ್ರೀ ಶಂಕರಾನಂದರು

ಶ್ರೀ ಶಂಕರಾನಂದರು—ಅಥವಾ, ಮಠಾಮ್ನಾಯ ರೀತಿಯಲ್ಲಿ ಹೇಳಬೇಕಾದರೆ, "ಶಂಕರಾನಂದ ಸರಸ್ವತೀ" ಸ್ವಾಮಿಗಳವರು—ವಿದ್ಯಾರಣ್ಯರ ಗುರುಗಳಲ್ಲೊಬ್ಬರೆಂಬುದನ್ನೂ, ಇವರೂ ಸಹ ವಿದ್ಯಾತೀರ್ಥರ ಶಿಷ್ಯರೆಂಬುದನ್ನೂ ಹಿಂದೆ ತಿಳಿಸಿದೆಯಷ್ಟೆ (ಪುಟ ೧೧, ೨೯). ಇವರ ಪೂರ್ವಾಶ್ರಮದ ಹೆಸರು ಮಹೇಶನೆಂದು; ಜನ್ಮ ಸ್ಥಲವು ಮಧ್ಯಾರ್ಜುನ*; ತಂದೆ ಬಾಲಚಂದ್ರ ಮಖಿ. ಇವರು ವಿದ್ಯಾತೀರ್ಥ ಸ್ವಾಮಿಗಳವರಿಂದ ಸಂನ್ಯಾಸ ಗ್ರಹಣಮಾಡಿ, ಅವರೊಡನೆ ಹಿಮ ಪರ್ವತಕ್ಕೆ ಹೋಗಿದ್ದರು. ಹತ್ತು ಮಂದಿ ವಿದ್ಯಾತೀರ್ಥ ಶಿಷ್ಯರಲ್ಲಿ ಅವರೊಡನೆ ಯಾತ್ರೆ ಹೋಗಿದ್ದವರು ಶಂಕರಾನಂದರೊಬ್ಬರೇ ಆದ ಕಾರಣದಿಂದಲೂ, ಇವರನ್ನೇ ಕಂಚಿಯಲ್ಲಿಯ ಸ್ವಪೀಠಾಧಿಕಾರಕ್ಕೆ ಅವರು ನಿಯಮಿಸಿದ ಕಾರಣದಿಂದಲೂ, ಇವರು ವಿದ್ಯಾತೀರ್ಥರಿಗೆ ಪ್ರಿಯತಮರಾಗಿದ್ದರೆಂದು ಊಹಿಸಬಹುದು. ಇವರಿಗೆ ವಿದ್ಯಾತೀರ್ಥರಲ್ಲಿ ಎಂತಹ ಭಕ್ತಿಯಿತ್ತೆಂಬುದನ್ನು ಹಿಂದೆಯೇ ನೋಡಿರುವೆವು.

ಗುರುಗಳನ್ನು ಹಿಮಾಲಯ ಪ್ರಾಂತದಲ್ಲಿ ಬಿಟ್ಟು ತಾವೊಬ್ಬರೇ ಹಿಂದಿರುಗಲು ಶಂಕರಾನಂದರು ಇಷ್ಟವಿಲ್ಲದವರಾಗಿದ್ದರೂ, ಗುರ್ವಾಜ್ಞೆಗೆ ಅವರು ತಲೆಬಾಗಿ ಅಲ್ಲಿಂದ ಹೊರಟು ಬಂದು ಕಂಚಿಯನ್ನು ಸೇರಿ, ೫೨ನೆಯ ಸ್ವಾಮಿಗಳಾಗಿ ಮಠಾಧಿಕಾರವನ್ನು ವಹಿಸಿದರು. ಇದರಿಂದ ಇವರ ಸಬ್ರಹ್ಮಚಾರಿಗಳೆಂಟು ಮಂದಿಗೂ ಸಂತೋಷವಾಯಿತು. ಆ ಎಂಟು ಮಂದಿಯನ್ನೂ ಶಂಕರಾನಂದರು, ವಿದ್ಯಾತೀರ್ಥ ಗುರುಗಳ ಅಪ್ಪಣೆಗನುಸಾರವಾಗಿ—ಮಾಧವಾಚಾರ್ಯ(ವಿದ್ಯಾರಣ್ಯ)ರು ಹೇಳಿದ ಮೇರೆಗೆ—ಕರ್ಣಾಟಕ ದೇಶದಲ್ಲಿ ಅದ್ವೈತಮತ ಪ್ರಚಾರಕ್ಕೋಸ್ಕರ, ಎಂಟು ಬೇರೆ ಬೇರೆ ಮಠಗಳಿಗೆ ನಿಯಮಿಸಿ, ತಾವು ಮೂಲ ಮಠವಾದ ಕಾಮಕೋಟಿ ಪೀಠದಿಂದ ಎಲ್ಲವನ್ನೂ ಪರಿಪಾಲನೆ ಮಾಡು

---

* ತಂಜಾವೂರು ಜಿಲ್ಲೆಯಲ್ಲಿ ತಿರುವಿಡೈ ಮರದೂರ್ ಎಂಬ ಸ್ಥಳ.

ತ್ತಿದ್ದರು. ಹೀಗೆ ಅವರು ಒಂಬತ್ತು ಮಠಗಳನ್ನು ಆಳುತ್ತಿದ್ದ ಕಾರಣ ದಿಂದ ಅವರಿಗೆ "ನವಮಠೀನಾಥ" ಎಂಬ ಖ್ಯಾತಿಯುಂಟಾಯಿತು.

ಈ ಅಂಶಗಳು "ಪುಣ್ಯಶ್ಲೋಕಮಂಜರಿ" ಯ ಈ ಕೆಳಗಿನ ಎರಡು ವೃತ್ತಗಳಿಂದ ತಿಳಿದು ಬರುತ್ತವೆ:—

ಶ್ರೀ ಮಧ್ಯಾರ್ಜುನ ಬಾಲಚಂದ್ರಮುಖಿರಾಟ್ಸೂನುರ್ಮಹೇಶಾಹ್ವಯಃ ।
ವಿದ್ಯಾತೀರ್ಥ ಪದಾನ್ನಿಯಮ್ಯ ಸಮಯೇಷ್ವದ್ವೈತಮುದ್ದ್ಯೋತಯನ್ ॥
ಅಧ್ಯಾಸ್ತ ಪ್ರತಿಕಾಮಕೋಟಿ ಶರದೋ ದ್ವಾತ್ರಿಂಶತಂ ದೇಹಿನಾಂ ।
ದ್ವೈತಧ್ವಾಂತ ನಿವಾರಣೋ ನವಮಠೀನಾಥೋ ನವಶ್ಶಂಕರಃ ॥

ಆದಿಶ್ಯಾಷ್ಟ ಯಮೀಶ್ವರಾನ್ ಸಮವಿತುಂ ಕರ್ಣಾಟದೇಶೇಽದ್ವಯಂ ।
ರೋದ್ಧುಂ ಸಾಯಣ ಮಾಧವೋಕ್ತವಿಧಯಾ ವೃದ್ಧಿಂ ಚ ಮಧ್ವಾಧ್ವನಾಂ ॥
ವಿದ್ಯಾತೀರ್ಥಗುರೋ ರಸೋಢವಿರಹೋಽಪ್ಯಾವೃತ್ಯ ಸೀತಾಚಲಾತ್ ।
ತಸ್ಯೋಕ್ತೇರ್ಬಿಭರಾಂ ಬಭೂವ ಸಧುರಾಂ ಶ್ರೀ ಕಾಮಕೋಟೀಮಠೇ ॥

ಇದರಲ್ಲಿ "ಸಾಯಣ ಮಾಧವೋಕ್ತ ವಿಧಯಾ" ಎಂಬ ವಚನವು, ಹಿಂದಿನ ಪ್ರಕರಣದಲ್ಲಿ (ಪುಟ ೩೯, ೫೭) ಹೇಳಿದಂತೆ, ವಿದ್ಯಾರಣ್ಯರೇ ಅಷ್ಟಮಠ ಪ್ರತಿಷ್ಠಾಪನೆಗೆ ಮುಖ್ಯ ಪ್ರೇರೇಪಕರೆಂಬ ಸಂಗತಿಯನ್ನು ಬಲಪಡಿಸುವುದಾಗಿದೆ. ವಿದ್ಯಾತೀರ್ಥ ಭಾರತೀ ತೀರ್ಥರುಗಳಂತೆಯೇ ಶಂಕರಾನಂದರೂ ವಿದ್ಯಾರಣ್ಯರ ಮಾತನ್ನು ಲಾಲಿಸಿ ಪಾಲಿಸುತ್ತಿದ್ದರೆಂದು ತೋರುತ್ತದೆ.

ಶಂಕರಾನಂದರ ಸಮಾಧಿ ಸಮಯವು ಕ್ರಿಸ್ತ ವರ್ಷ ೧೪೧೭ಕ್ಕೆ ಸರಿಯಾದ ದುರ್ಮುಖಿ ಸಂವತ್ಸರದ ವೈಶಾಖ ಶುದ್ಧ ಪಾಡ್ಯಮಿಯೆಂದು "ಪುಣ್ಯಶ್ಲೋಕಮಂಜರಿ" ಯಿಂದ (೧೦೪ನೆಯ ಶ್ಲೋಕ) ತಿಳಿದು ಬರುತ್ತದೆ. ಅವರ ಪೀಠಾಧಿಕಾರ ಕಾಲವು ೩೨ ವರ್ಷಗಳು. ಅವರ ತರುವಾಯ ಕಂಚಿಯ ಪೀಠವನ್ನಾರೋಹಿಸಿದ ಸ್ವಾಮಿಗಳ ಹೆಸರು ಪೂರ್ಣಾನಂದ ಸದಾಶಿವೇಂದ್ರ ಸರಸ್ವತಿಗಳೆಂದು.

ಶಂಕರಾನಂದರು ಕಂಚಿಯ ಪೀಠಕ್ಕೆ ಅಧಿಪತಿಗಳಾಗಿ ಅಲ್ಲಿಯೇ

ನಿಂತ ಕಾರಣದಿಂದ ಶೃಂಗೇರಿಯ ಗುರು ಪರಂಪರೆಯಲ್ಲಿ ಅವರನ್ನು ಸ್ಮರಿಸಲು ಕಾರಣವಿಲ್ಲವಾಯಿತು.

ಶಂಕರಾನಂದರಲ್ಲಿಯೂ ವಿದ್ಯಾರಣ್ಯರಿಗೆ ನಿರತಿಶಯವಾದ ಭಕ್ತಿಯಿತ್ತು. "ವಿವರಣ ಪ್ರಮೇಯ ಸಂಗ್ರಹ" ಗ್ರಂಥದ ಪ್ರಾರಂಭದಲ್ಲಿ ವಿದ್ಯಾರಣ್ಯರು

ಸ್ವಮಾತ್ರಯಾನಂದಯದತ್ರ ಜಂತೂನ್ ।
ಸರ್ವಾತ್ಮಭಾವೇನ ತಥಾಪರತ್ರ ॥
ಯಚ್ಛಂಕರಾನಂದ ಪದಂ ಹೃದಬ್ಜೇ।
ವಿಭ್ರಾಜತೇ ತದ್ಯತಯೋ ವಿಶಂತಿ ॥

[ಜೀವಿಗಳಿಗೆ ಇಹಲೋಕದಲ್ಲಿ ತನ್ನ ಸಣ್ಣ ಸಣ್ಣ ಅಂಶಗಳನ್ನು ತೋರಿಸಿಯೂ, ಪರಲೋಕದಲ್ಲಿ ತನ್ನ ಪರಿಪೂರ್ಣರೂಪವನ್ನು ತೋರಿಸಿಯೂ ಸಂತೋಷವನ್ನುಂಟು ಮಾಡುವ ಪರಬ್ರಹ್ಮ ವಸ್ತು ಯಾವುದುಂಟೋ, ಅದರ ಅವತಾರವಾಗಿ ನಮ್ಮ ಹೃದಯ ಕಮಲದಲ್ಲಿ ವಿರಾಜಮಾನರಾಗಿರುವ ಶಂಕರಾನಂದ ಗುರುಗಳವರ ಸನ್ನಿಧಾನವು ಯತಿಗಳಾದವರಿಗೆ ಲಭಿಸತಕ್ಕುದು.]

ಎಂದು ಸ್ವಗುರು ಪ್ರಶಂಸೆಮಾಡಿದ್ದಾರೆ.

"ವೇದಾಂತ ಪಂಚದಶಿ"ಯ ತತ್ತ್ವವಿವೇಕ ಪ್ರಕರಣದ ಮೊದಲಿನಲ್ಲಿ

ನಮಃ ಶ್ರೀ ಶಂಕರಾನಂದ ಗುರು ಪಾದಾಂಬುಜನ್ಮನೇ ।
ಸವಿಲಾಸ ಮಹಾಮೋಹ ಗ್ರಾಹಗ್ರಾಸೈಕಕರ್ಮಣೇ ॥

[ಮಹಾಮೋಹವೆಂಬ ಮೊಸಳೆಯನ್ನು ನುಂಗಬಲ್ಲುದಾದ ಶಂಕರಾನಂದಗುರು ಚರಣಕಮಲಕ್ಕೆ ನಮಸ್ಕಾರ.]

ಎಂದು ಶಂಕರಾನಂದರು ಸ್ತುತಿಸಲ್ಪಟ್ಟಿದ್ದಾರೆ. ಈ ಗುರುಸ್ತುತಿಯು ವಿದ್ಯಾರಣ್ಯರ ವಾಕ್ಯವೆಂಬ ಅಂಶವನ್ನು ಹಿಂದೆ (ಪುಟ ೬೮-೬೯) ಸ್ಪಷ್ಟಪಡಿಸಿದೆ.

ಶಂಕರಾನಂದರು ಮಹಾ ತಪಸ್ವಿಗಳು ಮಾತ್ರವೇ ಅಲ್ಲದೆ ಉದ್ದಾಮ ಪಂಡಿತರೂ ಧರ್ಮಬೋಧಕರೂ ಆಗಿದ್ದರು. ಅದ್ವೈತ ಮತ ನಿರೂಪಣೆಗಾಗಿ ಅವರು ಬರೆದ ಗ್ರಂಥಗಳು ಅನೇಕಗಳಾಗಿ ಈಗಲೂ ಸಂಮಾನಿತಗಳಾಗಿವೆ.

ಒಂದಾನೊಂದು ಸಂದರ್ಭದಲ್ಲಿ ಅವರು ಶಿವ ವಿಷ್ಣು ಅಭೇದ ವನ್ನು ಪ್ರತ್ಯಕ್ಷಗೊಳಿಸುವುದಕ್ಕಾಗಿ ತಮ್ಮ ಯೋಗ ಸಾಮರ್ಥ್ಯದಿಂದ ಕಂಚಿಯ ವರದರಾಜ ವಿಗ್ರಹವು ಶಿವಾಕಾರವಾಗಿ ಕಾಣಿಸಿಕೊಳ್ಳು ವಂತೆ ಮಾಡಿದರೆಂದು ಕಥೆಯುಂಟು.

ಅನೇಕ ಉಪನಿಷತ್ತುಗಳ "ದೀಪಿಕೆ"ಗಳೂ—ಎಂದರೆ ಶ್ಲೋಕ ರೂಪಗಳಾದ ಸಂಗ್ರಹಗಳೂ, "ಸೂತ್ರದೀಪಿಕೆ" ಯೆಂಬ ಬ್ರಹ್ಮ ಸೂತ್ರಾರ್ಥ ವಿವರಣೆಯೂ, "ಆತ್ಮ ಪುರಾಣ" "ವಿವೇಕಸಾರ"* ಎಂಬ ವೇದಾಂತ ಗ್ರಂಥಗಳೂ, "ಗೀತಾ ತಾತ್ಪರ್ಯ ಬೋಧಿನೀ" ಎಂಬ ಭಗವದ್ಗೀತಾ ವ್ಯಾಖ್ಯಾನವೂ ಶಂಕರಾನಂದ ಕೃತಗಳೆಂದು ಪ್ರಸಿದ್ಧಗಳಾಗಿವೆ.

ಶಂಕರಾನಂದರವರು ತಮಗಿಂತ ಹಿರಿಯರಾಗಿದ್ದ ಭಾರತೀ ತೀರ್ಥ ಸ್ವಾಮಿಗಳವರಲ್ಲಿ ಗುರುಭಾವನೆಯಿಟ್ಟುಕೊಂಡಿದ್ದರೆಂಬುದನ್ನು ಹಿಂದೆ (ಪುಟ ೫೬) ತೋರಿಸಿದೆ. ಅವರು ತಮ್ಮ ಗ್ರಂಥಗಳಲ್ಲಿ ಭಾರತೀ ತೀರ್ಥರನ್ನು ಹೆಚ್ಚಾಗಿ ಸ್ಮರಿಸಿದ್ದಾರೆ. ಭಾರತೀತೀರ್ಥರಿಗೆ ಆನಂದಾತ್ಮ ಸರಸ್ವತೀ ಎಂದೂ ಹೆಸರಿತ್ತೆಂದು ಹಿಂದೆ (ಪುಟ ೫೩) ಹೇಳಿದೆ. ಈ ಹೆಸರಿನಿಂದಲೇ ಅವರನ್ನು "ವಿವೇಕಸಾರ" "ಗೀತಾ ವ್ಯಾಖ್ಯಾನ" ಗಳಲ್ಲಿ ಶಂಕರಾನಂದರು ಧ್ಯಾನಿಸಿದ್ದಾರೆ.

"ವಿವೇಕಸಾರ"ದ ಪ್ರಾರಂಭ ಸಮಾಪನಗಳು ಹೀಗೆ ಇವೆ :—

---

* "ವಿವೇಕಸಾರ"ವು ಇನ್ನೂ ಮುದ್ರಿತವಾಗಿರುವಂತೆ ತೋರುವುದಿಲ್ಲ. ಅದರ ಹಸ್ತ ಪ್ರತಿಯೊಂದು ಮೈಸೂರಿನ ಪ್ರಾಚ್ಯಕೋಶಾಗಾರದಲ್ಲಿದೆ.

ಸತ್ಯಂಜ್ಞಾನಮನಂತಂ ಯತ್ಕೇವಲಾನಂದಮದ್ವಯಂ ।
ನಿಷ್ಕಲಂ ನಿಷ್ಕ್ರಿಯಂ ಶಾಂತಂ ಬ್ರಹ್ಮ ಯತ್ಸಮುಪಾಸ್ಮಹೇ ॥
ಪ್ರಣಿಪತ್ಯ ಶಿವಂ ಸಾಂಬಂ ಗಣನಾಥಂ ಸರಸ್ವತೀಂ ।
ವಿವೇಕಸಾರಂ ವಕ್ಷ್ಯಾಮಿ ಹಿತ ಬು . . . . . . ಕ್ಷತಾಂ ॥

* * * *

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಶ್ರೀಮದಾನಂದಾತ್ಮ ಸರಸ್ವತೀ ಶಿಷ್ಯ ಶ್ರೀ ಶಂಕರಾನಂದ ಸರಸ್ವತೀ ವಿರಚಿತೋ ವಿವೇಕಸಾರಃ ॥

ಗೀತಾ ವ್ಯಾಖ್ಯಾನದಲ್ಲಿ ಹೀಗೆ ಇದೆ :—

ಭಕ್ತ್ಯಾ ಪ್ರಣಮ್ಯ ಸ್ವಗುರುಮಾನಂದಾತ್ಮಸರಸ್ವತೀಂ ।
ಕ್ರಿಯತೇ ಶ್ರೀಮದ್ಭಗವದ್ಗೀತಾತಾತ್ಪರ್ಯಬೋಧಿನೀ ॥

ಶಂಕರಾನಂದರವರ ವಾಕ್ಯಗಳು ತೊಡಕುಗಳಿಲ್ಲದೆ ಸುಲಭವಾಗಿ ಅರ್ಥ ಕೊಡುವವುಗಳಾಗಿ, ತತ್ತ್ವ ಸೂಕ್ಷ್ಮಗಳನ್ನು ವಿಶದವಾಗಿ ಬೋಧಿಸುತ್ತವೆ. ಅವರ ಉಪನಿಷದ್ದೀಪಿಕೆಗಳೂ ಗೀತಾ ವ್ಯಾಖ್ಯಾನವೂ ವೇದಾಂತ ಶಾಸ್ತ್ರಾಭ್ಯಾಸಿಗಳಿಗೆ ಅತ್ಯಂತ ಉಪಕಾರಕಗಳಾಗಿರುವುವು.

---

# ಶ್ರೀಕಂಠನಾಥರು

ಮಾಧವ ಸಹೋದರರ ಗುರು ಮಂಡಲದಲ್ಲಿ ನಾಲ್ಕನೆಯವರು "ಶ್ರೀಕಂಠ" ಅಥವಾ "ಶ್ರೀಕಂಠನಾಥ" ಎಂಬ ಹೆಸರಿನವರು. ಇವರ ವಿಷಯವು ನಮಗೆ ಹೆಚ್ಚಾಗಿ ತಿಳಿಯುವಂತೆ ಇಲ್ಲವಾದರೂ, ಪೂಜ್ಯತೆಯಲ್ಲಿ ಇವರು ಉಳಿದವರಿಗಿಂತ ಕಡಮೆಯಾದವರೇನೂ ಅಲ್ಲವೆಂಬುದು ಅವರ ಪ್ರಖ್ಯಾತ ಶಿಷ್ಯರುಗಳ ಮಾತಿನಿಂದ ಗೊತ್ತಾಗುತ್ತದೆ.

ಮಾಧವ-ವಿದ್ಯಾರಣ್ಯರು "ಪರಾಶರ ಸ್ಮೃತಿವ್ಯಾಖ್ಯೆ"ಯ ಪೀಠಿಕಾ ಶ್ಲೋಕವೊಂದರಲ್ಲಿ ಹೀಗೆ ಹೇಳಿದ್ದಾರೆ:—

ಸೋಽಹಂ ಪ್ರಾಪ್ಯ ವಿವೇಕತೀರ್ಥಪದವೀಮಾಮ್ನಾಯತೀರ್ಥೇ ಪರಂ।
ಮಜ್ಜನ್ ಸಜ್ಜನಸಂಗತೀರ್ಥನಿಪುಣಃ ಸದ್ವೃತ್ತತೀರ್ಥಂ ಶ್ರಯನ್ ॥
ಲಬ್ಧ್ವಾಮಾಕಲಯನ್ ಪ್ರಭಾವಲಹರೀಂ ಶ್ರೀ ಭಾರತೀತೀರ್ಥತಃ ।
ವಿದ್ಯಾತೀರ್ಥಮುಪಾಶ್ರಯನ್ ಹೃದಿ ಭಜೇ **ಶ್ರೀಕಂಠ**ಮವ್ಯಾಹತಂ ॥

[ನಾನು ತರ್ಕ ಮೀಮಾಂಸಾದಿ ವಿಚಾರ ಶಾಸ್ತ್ರಗಳನ್ನು ಅಭ್ಯಾಸಮಾಡಿ, ವೇದ ತೀರ್ಥದಲ್ಲಿ ಮಿಂದು, ಸಾಧು ಸಜ್ಜನರ ಸಹವಾಸವನ್ನು ಬೆಳೆಸಿ, ಸದಾಚಾರವನ್ನು ಅವಲಂಬಿಸಿ, ಶ್ರೀ ಭಾರತೀತೀರ್ಥರ ಪ್ರಸಾದದಿಂದ ಸಾಮರ್ಥ್ಯವನ್ನು ಪಡೆದುಕೊಂಡು, ಶ್ರೀ ವಿದ್ಯಾತೀರ್ಥಸ್ವಾಮಿಗಳವರನ್ನಾಶ್ರಯಿಸಿದವನಾಗಿ, ನಿರಂತರವೂ ಶ್ರೀಕಂಠ ಗುರುವನ್ನು ಧ್ಯಾನಿಸುವವನಾಗಿದ್ದೇನೆ.]

ಇಲ್ಲಿ "ಶ್ರೀಕಂಠ" ಎಂಬ ಪದವು ಇಷ್ಟ ದೈವವಾದ ಮಹೇಶ್ವರನ ವಿಷಯದಲ್ಲಿ ಮಾತ್ರವೇ ಉಪಯುಕ್ತವಾಗಿದೆಯೆಂದೂ, ಗುರು ಸ್ಮರಣೆಯು ಅದರ ಉದ್ದೇಶವಲ್ಲವೆಂದೂ ವಾದಿಸಲಾಗದು. ದೈವ ವಿಷಯ ಗುರುವಿಷಯಗಳೆರಡರಲ್ಲಿಯೂ ಅಭೇದವನ್ನು ಭಾವಿಸಿ, ಒಂದೇ ಪದದಿಂದ ಆ ಭಾವವನ್ನು ಸೂಚಿಸುವುದು ವಿದ್ಯಾರಣ್ಯರ ಪದ್ಧತಿಯೆಂಬುದನ್ನು ಹಿಂದೆ ವಿದ್ಯಾತೀರ್ಥ ಪ್ರಕರಣದಲ್ಲಿ ನೋಡಿದ್ದೇವೆ.—(ಪುಟ ೩೧, ೩೨, ೩೪).

ಶ್ರೀಕಂಠನಾಮಕ ಗುರುಗಳೊಬ್ಬರು ಸಾಯಣರಿಗೆ ಇದ್ದರೆಂಬುದು ಕಂಚಿಯ ವರದರಾಜ (ಅರುಳಾಳ ಪೆರುಮಾಳ್) ದೇವಾಲಯದ ಗೋಡೆಯ ಮೇಲಿರುವ ಒಂದು ಶಿಲಾಶಾಸನದಿಂದ ನಿರ್ವಿವಾದವಾಗಿ ಸ್ಪಷ್ಟಪಟ್ಟಿದೆ. ಆ ಶಾಸನವು ಗ್ರಂಥಾಕ್ಷರದ್ದಾಗಿ, ಅದರ ಸ್ವಲ್ಪ ಭಾಗ ನಷ್ಟವಾಗಿದೆ. ಅದು ಈ ರೀತಿ ಇದೆ:—

॥ ಶ್ರೀಮಾಯೀ ಜನನೀ ಪಿತಾ ತವ ಮುನಿರ್ಬೋಧಾಯ[ನೋ] ಮಾಯಣೋ । [ಜ್ಯೇ]ಷ್ಠೋ [ಮಾಯಣ]............ ಭೂಷ್ಣುರನುಜಃ ಶ್ರೀಭೋಗನಾಥಃ ಕವಿಃ ॥ ಸ್ವಾ [ಮೀ] [ಸಂ]ಗ[ಮ]ಭೂಪ [ತಿಃ ಕ] . . [ರ] ಶ್ರೀ [ಕಂ] ಠನಾಥೋ ಗುರು ಭಾರದ್ವಾಜ[ಕು]ಲೇಶ ಸಾ[ಯ]ಣ ಗುಣೈ [ಸ್ತ್ವ]ತ್ತ ಸ್ತ್ವಮೇವಾ[ಧಿಕಃ] ॥ ”

*—Epigraphia Indica, Vol. III, No. 19 (1894-95), P. 118.*

ಇಲ್ಲಿ [ ] ಚೌಕ ಚಿಹ್ನೆಗಳ ನಡುವೆ ಕೊಟ್ಟಿರುವ ಅಕ್ಷರಗಳು ಶಾಸನದಲ್ಲಿ ಅಸ್ಪಷ್ಟಗಳಾಗಿರುವವುಗಳು. ಶಾಸನವನ್ನು ಶೋಧಿಸಿ ಪ್ರಕಟಪಡಿಸಿದವರು * ಆ ಅಕ್ಷರಗಳನ್ನು ತಾವೇ ಊಹಿಸಿ ಈ ಮೇಲೆ ಕಂಡಂತೆ ಕೊಟ್ಟಿದ್ದಾರೆ. ನಾವು ಆ ಶ್ಲೋಕವನ್ನು ಈ ಕೆಳಗೆ ಕಾಣುವಂತೆ ಪೂರ್ತಿಗೊಳಿಸುವುದಕ್ಕೆ ಯಾವ ಬಾಧಕವೂ ತೋರುವುದಿಲ್ಲ.

**ಶ್ರೀಮಾಯೀ ಜನನೀ ಪಿತಾ ತವ ಮುನಿರ್ಬೋಧಾಯನೋ ಮಾಯಣೋ ।**
**ಜ್ಯೇಷ್ಠೋ ಮಾಧವಭಟ್ಟಭೂಷ್ಣುರನುಜಃ ಶ್ರೀಭೋಗನಾಥಃ ಕವಿಃ ॥**
**ಸ್ವಾಮೀ ಸಂಗಮಭೂಪತಿಃ ಕವಿವರಶ್ಶ್ರೀಕಂಠನಾಥೋ ಗುರುಃ ।**
**ಭಾರದ್ವಾಜಕುಲೇಶ ಸಾಯಣ ಗುಣೈಸ್ತ್ವತ್ತ ಸ್ತ್ವಮೇವಾಧಿಕಃ ॥**

[ಎಲೈ ಸಾಯಣಾರ್ಯ, ನಿನ್ನ ತಾಯಿ ಶ್ರೀಮತಿ ; ನಿನ್ನ ತಂದೆ ಬೋಧಾಯನ ಸೂತ್ರದ ಮಾಯಣ ಮುನಿ ; ನಿನ್ನ ಅಣ್ಣ ಮಾಧವ ಭಟ್ಟನು ; ನಿನ್ನ ತಮ್ಮ ಭೋಗನಾಥ ಕವಿ ; ನಿನ್ನ ಸ್ವಾಮಿ ಸಂಗಮ

* Dr. Hultzsch & Mr. V. Venkayya.

ರಾಜ ; ನಿನ್ನ ಗುರು ಶ್ರೀಕಂಠನಾಥನು ; ನಿನ್ನ ಕುಲ ಭರದ್ವಾಜ ಋಷಿಯದು. ಹೀಗಿರಲಾಗಿ, ನಿನಗಿಂತ ದೊಡ್ಡವರಾರು ?]

ಈ ವಾಕ್ಯದಿಂದ ಶ್ರೀಕಂಠನಾಥರು ಆ ಕಾಲದ ಪ್ರಶಸ್ತ ಪುರುಷ ಪಂಕ್ತಿಯಲ್ಲಿ ಗಣ್ಯರಾಗಿದ್ದವರೆಂಬುದೂ ಸ್ಪಷ್ಟವಾಗುತ್ತದೆ.

ಈ ಶಾಸನವು ಬಹುಶಃ ಸಾಯಣಾಚಾರ್ಯರು ನೆಲ್ಲೂರು ಪ್ರಾಂತದಲ್ಲಿ, ಮೊದಲನೆಯ ಹರಿಹರರಾಜನ ಮೊದಲನೆಯ ತಮ್ಮನಾದ ಕಂಪಣ್ಣನ ಮಗ ಸಂಗಮರಾಜನಿಗೆ ಮಂತ್ರಿಯಾಗಿ, ಇದ್ದ ಕಾಲದಲ್ಲಿ—ಎಂದರೆ ಕ್ರಿಸ್ತ ವರ್ಷ ೧೩೫೬ ರ ಸಮೀಪ ಸಮಯದಲ್ಲಿ —ಬರೆದುದಾಗಿರಬೇಕು. ಆ ವರ್ಷ ಶ್ರೀಕಂಠನಾಥರು ಬದುಕಿದ್ದರು.

ಸೋದರರಲ್ಲಿ ಕಿರಿಯವನಾದ ಭೋಗನಾಥನಂತೂ ಶ್ರೀಕಂಠ ಗುರುವನ್ನು ಕಂಠೋಕ್ತವಾಗಿ ಧ್ಯಾನಿಸಿದ್ದಾನೆ. ಆತನ "ಮಹಾಗಣಪತಿ ಸ್ತವ"ದ ಈ ಪದ್ಯವನ್ನು ಸಾಯಣಾಚಾರ್ಯರು ತಮ್ಮ "ಅಲಂಕಾರ ಸುಧಾನಿಧಿ" ಯಲ್ಲಿ ಉದಾಹರಿಸಿದ್ದಾರೆ :—

ಮಂದಾರಶ್ಚ ತರುಃ ಪರೇಪಿ ತರವೋ ಮೇರುಶ್ಚ ಶೈಲಃ ಪರೇ ।
ಪ್ಯಾಃ ಶೈಲಾಃ ಕಮಲಾಗೃಹಸ್ಥಶಯನಂ ಚಾಬ್ಧಿಃ ಪರೇಪ್ಯಬ್ಧಯಃ॥
ಶ್ರೀಕಂಠಶ್ಚ ಗುರುಃ ಪರೇಪಿ ಗುರವೋ ಲೋಕತ್ರಯೇಪ್ಯದ್ಭುತಂ।
ಭಕ್ತಾಧೀನ ಭವಾಂಶ್ಚ ದೈವತಮಹೋ ಸರ್ವೇಪ್ಯಮೀ ದೇವತಾಃ॥

**[ಎಲೈ ಗಣಪತಿಯೇ ! ಕಲ್ಪವೃಕ್ಷವೂ ಇದೆ, ಇತರ ಮರಗಳೂ ಇವೆ ; ಮೇರುಪರ್ವತವೂ ಇದೆ, ಇತರ ಪರ್ವತಗಳೂ ಇವೆ ; ವಿಷ್ಣುವು ಮಲಗುವ (ಕ್ಷೀರ) ಸಮುದ್ರವೂ ಇದೆ, ಇತರ ಸಮುದ್ರಗಳೂ ಇವೆ ; (ನಮ್ಮ) ಶ್ರೀಕಂಠ ಗುರುಗಳೂ ಇದ್ದಾರೆ, ಇತರ ಗುರುಗಳೂ ಇದ್ದಾರೆ ; ಆಹಾ, ಮೂರು ಲೋಕಗಳಲ್ಲಿಯೂ ಇದಲ್ಲವೆ ಅದ್ಭುತ ! ಭಕ್ತಪರಾಧೀನನಾದ ನೀನೂ ದೇವತೆ, ಇತರ ದೇವರುಗಳೂ ದೇವತೆಗಳು !]**

ಹೀಗೆ "ಶ್ರೀಕಂಠ" ಎಂಬ ಹೆಸರಿನ ಗುರುಗಳೊಬ್ಬರು ಮಾಧವ ಸೋದರರು ಮೂವರಿಗೂ ಇದ್ದಂತೆ ತೋರುತ್ತದೆ. ವಿದ್ಯಾ

ತೀರ್ಥರಾದರೋ ಮಾಧವ ಸಾಯಣರಿಗಿಬ್ಬರಿಗೆ ಮಾತ್ರವೇ ಗುರುಗಳಾಗಿಯೂ, ಭಾರತೀತೀರ್ಥ ಶಂಕರಾನಂದರುಗಳು ಮಾಧವ (ವಿದ್ಯಾರಣ್ಯ)ರೊಬ್ಬರಿಗೇ ಗುರುಗಳಾಗಿಯೂ ಇದ್ದಂತೆ ಇದುವರೆಗೂ ಕಾಣಬಂದಿದೆ.

ಶ್ರೀಕಂಠಗುರುಗಳ ಸ್ಥಲ ಕುಲಗಳ ವಿವರವನ್ನಾಗಲಿ, ಅವರ ಆಶ್ರಮ ವೃತ್ತಿಗಳ ವಿವರವನ್ನಾಗಲಿ ತಿಳಿಸುವ ಲೇಖನಗಳಾವುವೂ ನಮಗೆ ದೊರೆತಿಲ್ಲ. ಅವರು ಮಹಾ ಪಂಡಿತರೂ ಬೋಧಕರೂ ಮಹಿಮಾವಂತರೂ ಆಗಿದ್ದರೆಂದು ಭೋಗನಾಥನು ಬರೆದ ಬಿಟ್ರರ ಗುಂಟೆಯ ತಾಮ್ರ ಶಾಸನದಿಂದ ತಿಳಿದುಬರುತ್ತದೆ. ಅಲ್ಲಿ ಆತನು—

ಶ್ರೀಮಾನ್ ಸನ್ನಿಧಿಮಾದಧತ್ ಪಶುಪತಿಃ ಶ್ರೀಕಂಠನಾಥಾತ್ಮನಾ॥

[ಶ್ರೀಮತ್ಪಶುಪತಿಯಾದ ಪರಮೇಶ್ವರನೇ ಶ್ರೀಕಂಠನಾಥ ರೂಪದಲ್ಲಿ ಅವತಾರ ಮಾಡಿದ್ದಾನೆ.]

ಎಂದು ಹೇಳಿದ್ದಾನೆ.

ಶ್ರೀಕಂಠನಾಥರು ಶೈವಮತ ಪಾರಂಗತರಾಗಿದ್ದರೆಂದೂ, ಅದರ ರಹಸ್ಯಗಳನ್ನು ಅವರು ಸಾಯಣಾಚಾರ್ಯರ ರಾಜನಾದ ಸಂಗಮನಿಗೆ ಬೋಧಿಸಿದರೆಂದೂ, ಅವರು ಕಟಾಕ್ಷಮಾತ್ರದಿಂದ ಮೋಕ್ಷವನ್ನು ಸಂಪಾದಿಸಿ ಕೊಡಬಲ್ಲಂಥ ಮಹಾತ್ಮರಾಗಿದ್ದರೆಂದೂ, ಅವರ ಅಪೇಕ್ಷೆಯ ಮೇರೆಗೆ ಸಂಗಮರಾಜನು ಪಾಕವಿಷಯದ (ನೆಲ್ಲೂರು ಜಿಲ್ಲೆಯ) "ಬಿಟ್ರರಗುಂಟೆ" ಎಂಬ ಗ್ರಾಮಕ್ಕೆ ಶ್ರೀಕಂಠಪುರವೆಂದು ಹೆಸರುಕೊಟ್ಟು, ಅದನ್ನು ತನ್ನ ತಂದೆಗೆ ಪರಲೋಕದಲ್ಲಿ ಸದ್ಗತಿ ಪ್ರಾಪ್ತಿಯಾಗುವುದಕ್ಕೋಸ್ಕರ ಶಕ ೧೨೭೮ಕ್ಕೆ (ಕ್ರಿಸ್ತವರ್ಷ ೧೩೫೬) ಸರಿಯಾದ ದುರ್ಮುಖಿ ಸಂವತ್ಸರದ ಜ್ಯೇಷ್ಠ ಬಹುಳ ಅಮಾವಾಸ್ಯೆಯ ದಿನ ಬ್ರಾಹ್ಮಣರಿಗೆ ದಾನಮಾಡಿದನೆಂದೂ ಆ ಶಾಸನ*ದಿಂದ ತಿಳಿಯಬರುತ್ತದೆ.

---

* "ಎಪಿಗ್ರಾಫಿಯ ಇಂಡಿಕ," ಸಂಪುಟ ೩, (ಕ್ರಿ. ೧೮೯೪–೯೫) ಪುಟ ೨೧.

ಅದರ ಕೆಲವು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ :—

ಅಸ್ತಿ ಪ್ರಸ್ಫೂರ್ಯಮಾನಪ್ರಬಳನಿಜಭುಜಾಖರ್ವ ಗರ್ವಾಸುರೋಧಿ ।
ಸ್ವಾಧೀನೋದಾರಸಾರಸ್ಥಗಿತರಿಪುನೃಪೋದ್ದಾಮ ಸಂಗ್ರಾಮಶಕ್ತಿಃ ॥
ರಾಜಾ ರಾಜನ್ಯಕೋಟಿಪ್ರಣತಿಪರಿಲುಠನ್ ಮೌಳಿಮಾಣಿಕ್ಯರೋಚೀ ।
ರಾಜೀ ನೀರಾಜಮಾನ ಸ್ಫುರದುರುಚರಣಾಂಭೋರುಹ
**ಸ್ಸಂಗಮೇಂದ್ರಃ** ॥

ತಸ್ಮಾದುದಭವನ್ ಪಂಚ ತನಯಾಶ್ಶೌರ್ಯಶಾಲಿನಃ ।
ಕಲ್ಪಾವನಿರುಹಾಃ **ಪೂರ್ವಂ** ಕಲಶಾಂಬುನಿಧೇರಿವ ॥
ಆದೌ **ಹರಿಹರ**ಕ್ಷ್ಮಾಭೃದಥ ಕಂಪಮಹೀಪತಿಃ ।
ತತೋ **ಬುಕ್ಕ**ಮಹೀಪಾಲಃ ಪಶ್ಚಾ**ನ್ಮಾರಪಮುದ್ದಪೌ** ॥
ತತ್ರ ರಾಜಾ **ಹರಿಹರೋ** ಧರಣೀಮಶಿಷಚ್ಚಿರಂ ।
ಸುತ್ರಾಮಸದೃಶೋ ಯೇನ ಸುರತ್ರಾಣಃ ಪರಾಜಿತಃ ॥
ತಸ್ಯಾನುಜಶ್ಚಿರಮಶಾದ್ಧಾತ್ರೀಂ **ಕಂಪಣ**ಭೂಪತಿಃ ।
ಯಾಥಾರ್ಥ್ಯಮಭಯನ್ನಾಮ ಯಸ್ಯ ಕಂಪಯಿತುರ್ದ್ವಿಷಾಂ ॥
ಜಯಂತ ಇವ ಜಂಭಾರೇಃ ಪ್ರದ್ಯುಮ್ನ ಇವ ಶಾರ್ಙ್ಗಿಣಃ ।
ತನಯಸ್ಸಮಭೂದ್ವೀರಃ ತಸ್ಯ **ಸಂಗಮ**ಭೂಧರಃ ॥ . . . . .

ಶ್ರೀಮಾನ್ ಪ್ರಾಕ್ಪ್ರತ್ಯಗಬ್ಧಿದ್ವಿತಯಪರಿವೃಢಸ್ಸೈಷಭಾಷಾತಿಲಂಘಿ ।
ಕ್ಷ್ಮಿದುಕ್ಷ್ಮಾಭೃದ್ಭುಜಂಗಪ್ರತಿಭಟಧರಣೀಪಾಲಸೇನಾವಿಭಾಡಃ ॥
ಮಾದ್ಯಂನಾಗಾಶಮತ್ರ್ಯಾಧಿಪಗಜಘಟಾಪಂಚವಕ್ತ್ರೋಭಿಯಾತೀ ।
ತ್ಯುದ್ಘುಷ್ಯಂತೇ ಯದೀಯಾಃ ಸ್ಫುಟಮಿಹ ಬಿರುದಾಃ ಸಂತತಂ
ವಂದಿವೃಂದೈಃ ॥

ಇತ್ಥಂ ಸರ್ವಗುಣೋಪರಂಜನಕಲಾಮೀದೃಗ್ವಿಧಾಮೀಯುಷ ।
ಸ್ತಸ್ಯ ಕ್ಷೋಣಿಪತೇರಪಾರಯಶಸಸ್ತತ್ತ್ವೋಪದೇಶಕ್ರಿಯಾಂ ॥
ಕರ್ತುಂ ಕಾಮಪಿ ವಾಸನಾಮುಪನಯನ್ಕಾರುಣ್ಯ ವಾರಾಂನಿಧಿಃ ।
ಶ್ರೀಮಾನ್ ಸನ್ನಿಧಿಮಾದಧತ್ಪಶುಪತಿಃ **ಶ್ರೀಕಂಠನಾಥಾತ್ಮನಾ** ॥
ಮಾಹೇಶ್ವರಾಣಾಂ ತತ್ತ್ವಾನಾಂ ಮಾನ್ಯೇ ಯಸ್ಮಿನ್ ಪ್ರದರ್ಶಕೇ ।
ಪ್ರಾಚಾಮದರ್ಶಿ ನಾಥಾನಾಂ ಪ್ರಾಯೇಣ ನವತಾ ಭುವಿ ॥

ಯತ್ಪಾದಾಸತಿಮಾತ್ರೇಣ ಯತೀನಾಂ ಮುಕ್ತಿರಂತಿಕೇ ।
ಕ್ರಿಯತೇ ತಪಸಾ ಕಿಂತು ಕೇವಲಂ ಕಾಯಶೋಷಣಂ ॥
ಕೈವಲ್ಯಪದವೀದ್ವಾರಕವಾಟೋದ್ಘಾಟಕರ್ಮಣಿ ।
ಕಟಾಕ್ಷಾಃ ಕುಂಚಿಕಾ ಯಸ್ಯ ಕಾಂಕ್ಷತಾಂ ತತ್ರ ನಿರ್ವೃತಿಂ ॥
ಸ ಕದಾಚಿತ್ಪ್ರಿಯಂ ಶಿಷ್ಯಂ ಸಂಗಮೇಂದ್ರಮುಪಸ್ಥಿತಂ ।
ಸ್ವದಿಶದ್ದೇಶಿಕೋ ದೃಷ್ಟ್ವಾ ನಿರ್ಭರಪ್ರೇಮಗರ್ಭಯಾ ॥
ಅಗ್ರಹಾರಂ ಕಮಪ್ಯತ್ರ ತ್ವಯಾ ದಾಪಯಿತುಂ ಮಮ ।
ಪ್ರೀತಿರಸ್ತಿ ತತಃ ಕಶ್ಚಿದ್ಗ್ರಾಮೋ ರಾಜನ್ ಪ್ರದೀಯತಾಂ ॥
ಇತಿ ತಸ್ಯ ಗುರೋರಾಜ್ಞಾಮೀಶಿತಾ ಧರಣೀಭೃತಾಂ ।
ಅಗ್ರಹೀದಂಜಲಿಗ್ರಥ್ನಂ ನವನಮ್ರೇಣ ಮೌಳಿನಾ ॥

**ಪಾಕಾಖ್ಯೋ** ವಿಷಯೋಸ್ತ್ಯಪಾರಮಹಿಮಾ ಪ್ರಾಚಃ ಪಯೋಧೇ ಸ್ತಟೇ । ತಸ್ಮಿನ್ವಿ**ಕ್ರಮಸಿಂಹ**ಮಿತ್ಯಪಿ **ಪು**ರಂ ಧತ್ತೇ ಲಲಾಮ ಶ್ರಿಯಂ ॥ ತಸ್ಯಾಪ್ಯುತ್ತರತೋ ತ್ರಿಯೋಜನಮಿತಾದ್ದೇಶಾತ್ಸ್ಫುರತ್ಯುಜ್ಜ್ವಲೋ। ಗ್ರಾಮೋ **ಬಿಟ್ಟರಕುಂಟೆ** ಮಿತ್ಯಮುಮದಾದ್ರಾಜಾ ಗುರೋಃ ಪ್ರೀತಯೇ ॥

ಶಾಕಾಬ್ದೇ ನಾಗಶೈಲದ್ಯುಮಣಿಪರಿಮಿತೇ ದುರ್ಮುಖಾಬ್ದೇ ತೃತೀಯೇ । ಮಾಸಿ ಶ್ರೀಸಂಗಮೇಂದ್ರೋ ಗುರುಹಿತನಿರತಸ್ಸಂಗಮೇ ಚಂದ್ರಭಾನ್ವೋಃ ॥ ಪ್ರಾದಾತ್ಪ್ರತ್ಯಬ್ದಕಾಲೇ ನಿಜಪಿತುರಮರತ್ವಾಪ್ತಯೇ **ಬಿಟ್ರಗುಂಟೆ** । ಗ್ರಾಮಂ ತ್ರಿಂಶನ್ಮಿತಾಭ್ಯಃ ಶ್ರುತಿಪಥನಿರತಾಭ್ಯೋ ಮಹೀದೇವತಾಭ್ಯಃ ॥

**ಬಿಟ್ಟರಗುಂಟೆ** ಮಿತೀಹ ಪ್ರಥಿತಾಪರನಾಮಶಾಲಿನಸ್ತಸ್ಯ । ಪ್ರಕಟಯತಿ ಸ್ಮ ಯಮೀಂದ್ರಪ್ರಾಯಃ **ಶ್ರೀಕಂಠಪುರಮಿತಿ** ಪ್ರಖ್ಯಾಂ ॥

. . . . . . . . .

ಇತಿ **ಭೋಗನಾಥ**ಸುಧಿಯಾ ಸಂಗಮಭೂಪಾಲನರ್ಮ ಸಚಿವೇನ । **ಶ್ರೀಕಂಠಪುರ**ಸಮೃದ್ಧ್ಯೈ ಶಾಸನಪತ್ರೇಷು ವಿಲಿಖಿತಾಃ ಶ್ಲೋಕಾಃ ॥

---

# ಸಾಯಣಾಚಾರ್ಯರು

## ವೇದಭಾಷ್ಯಾದಿ ಕೃತಿಗಳು

---

ಭೋಗನಾಥ ಕವಿ

**ಆ ದೇವರಾಯ*** ಭೂಪನ।
ಯಾದವ ವಂಶಪ್ರದೀಪ ನನ್ವಯದೊಳ್ ಸಂ॥
ದಾದಿ ಪ್ರಧಾನರೀ ಧರೆ।
ಗಾದರ್ **ಮಾದರಸ ಸಾಯಣಾ**ಖ್ಯರ್ ಮುಖ್ಯರ್॥ ೧ ॥

ತೋಡದ ಭಾವಿಯಿಲ್ಲ ಮರೆಕಟ್ಟದ ಪೇರ್ಗೆರೆಯಿಲ್ಲ ಲೀಲೆಯಿಂ।
ಮಾಡದ ದೇವತಾಭವನಮಿಲ್ಲೊಲವಿಂ ಬಿಡದಗ್ರಹಾರಮಿ॥
ಲ್ಲಾಡಲದೇನೊ ಭೂಭವನ ಬುಂಭುಕಮಾದುದು ಕೀರ್ತಿ ಭಾಪು ನಾ।
ಡಾಡಿಯ ಸಯ್ಪು **ಮಾದರಸ ಸಾಯಣ**ರೆಂಬ ಮಹಾಪ್ರಧಾನರಾ॥ **೨** ॥

ಅವರಂ ಬಲಭದ್ರಾಚ್ಯುತ।
ರಿವರೆನೆ ಜನವವರ ತಂಗಿ **ಸಿಂಗಲೆ** ಭುವನ॥
ಸ್ತವನೀಯ ಚರಿತೆ ಸಂತತ।
ಮವನೀತಳದೊಳ್ ಸುಭದ್ರೆಯೆನಿಪುದು ಪಿರಿದೇಂ॥ **೩** ॥

ಕ್ರಮದಿಂ **ಲಕ್ಷ್ಮೀಧರ** ಚೆ।
ನ್ನಮಂತ್ರಿ ಬುಕ್ಕಣ್ಣ ಮಾಧವಂ ಪೆರ್ಗಡೆಯೆಂ॥
ದಮರ್ದಿರೆ ನಾಮಂ ನೆಗಳ್ದರ್।
ಸಮುಪಿಸಿ **ಸಿಂಗಾಂಬಿಕಾ** ಪವಿತ್ರೋದರದೊಳ್॥ **೪** ॥

—S. I. Inscriptions, No. 267, A.R. No. 38 of 1889.

---

* ದೇವರಾಯನು ಮೊದಲನೆಯ ಬುಕ್ಕರಾಯನ ಮೊಮ್ಮಗ. ಈ ದೇವರಾಯನು ಕ್ರಿಸ್ತವರ್ಷ ೧೪೦೬ರಲ್ಲಿ ಪಟ್ಟಾಭಿಷಿಕ್ತನಾದವನು. ಈ ದೊರೆಯ ಪೂರ್ವಿಕರೂ, ಪ್ರಕೃತದ ಶಾಸನಕಾರಕನಾದ ಲಕ್ಷ್ಮೀಧರಮಂತ್ರಿಯ ಪೂರ್ವಿಕರೂ ವಂಶಪಾರಂಪರ್ಯದಿಂದ ಕ್ರಮವಾಗಿ ರಾಜ ಮಂತ್ರಿಗಳಾಗಿದ್ದವರೆಂದು ಈ ಪದ್ಯವು ತಿಳಿಸುತ್ತದೆ.

# ಸಾಯಣಾಚಾರ್ಯರು

ಮಾಧವಾರ್ಯೋ ಮಾಧವಾರ್ಯಃ ಸಾಯಣಃ ಸಾಯಣಃ ಪರಂ |
ಭೋಗನಾಥೋ ಭೋಗನಾಥಃ ಪ್ರಥತೇ ಭುವನತ್ರಯೇ ||

—ಅಲಂಕಾರ ಸುಧಾನಿಧಿಃ

ಮಾಧವಾಚಾರ್ಯ (ವಿದ್ಯಾರಣ್ಯ), ಸಾಯಣಾಚಾರ್ಯ, ಭೋಗನಾಥ—ಈ ಮೂವರೂ ಸಹೋದರರೆಂಬ ಸಂಗತಿಯನ್ನು ಹಿಂದೆ ಸಪ್ರಮಾಣವಾಗಿ ತಿಳಿಸಿದೆ. ಅವರು ಹುಟ್ಟು ಕನ್ನಡಿಗರೆಂಬಂಶವೂ ಈಗ ನಿರ್ವಿವಾದವಾಗಿದೆ. ಅವರ ಪ್ರವರ ವಿವರಗಳನ್ನು ಮಾಧವ-ವಿದ್ಯಾರಣ್ಯ ಚರಿತ್ರೆಯಲ್ಲಿ ನೋಡಬಹುದು.

ಸಾಯಣಭೋಗನಾಥರುಗಳ ಜೀವಿತಕಾಲಾವಧಿಗಳನ್ನು ನಿಷ್ಕರ್ಷೆಯಾಗಿ ತಿಳಿಸುವ ಲೇಖನಗಳು ಯಾವುವೂ ಇದುವರೆಗೆ ದೊರೆತಿಲ್ಲ.

ಅವರು ಮೂವರೂ ಕಂಚಿಯಲ್ಲಿ ವಿದ್ಯಾತೀರ್ಥರೆಂಬ ಎರಡನೆಯ ಹೆಸರುಳ್ಳ ಸರ್ವಜ್ಞ ವಿಷ್ಣುಭಟ್ಟರ ಬಳಿಯೂ ಶ್ರೀಕಂಠನಾಥ ಉಪಾಧ್ಯಾಯರ ಬಳಿಯೂ ವಿವಿಧ ಶಾಸ್ತ್ರಗಳನ್ನಭ್ಯಾಸಮಾಡಿರಬಹುದೆಂದು ಊಹಿಸಲು ಕಾರಣಗಳನ್ನು ಹಿಂದೆ ತೋರಿಸಿದೆ. ಸಾಯಣಾಚಾರ್ಯರು ಸ್ವಕೃತಿಯಾದ ವೇದಭಾಷ್ಯದಲ್ಲಿ ವಿದ್ಯಾತೀರ್ಥರನ್ನು ಪದೇ ಪದೇ ವಂದಿಸಿರುವುದರಿಂದ ಆ ಸ್ವಾಮಿಗಳವರು, ಮಾಧವ-ವಿದ್ಯಾರಣ್ಯರಿಗೆ ಆಗಿದ್ದಂತೆ, ಇವರಿಗೂ ಉಪದೇಶ ಕೊಟ್ಟ ಇಷ್ಟಗುರುವಾಗಿದ್ದರೆಂದು ನಾವು ಭಾವಿಸಬಹುದು.

ಮಾಧವ-ವಿದ್ಯಾರಣ್ಯರು ರಾಜಕೀಯ ಪ್ರಪಂಚದಲ್ಲಿಯೂ, ಧಾರ್ಮಿಕ ಪ್ರಪಂಚದಲ್ಲಿಯೂ ಮಹೋನ್ನತ ಪದವಿಯನ್ನಡರಿದ ಬಳಿಕ, ಸಾಯಣರಿಗೂ ತಮ್ಮ ಪ್ರತಿಭೆ ಪಾಂಡಿತ್ಯಗಳನ್ನು ಲೋಕಸೇವೆಗಾಗಿ ವಿನಿಯೋಗಿಸುವ ಅವಕಾಶ ದೊರೆಯಿತು. ಶೂರರಾದ ಅರಸುಮಕ್ಕಳೊಡನೆ ಲೌಕಿಕದಕ್ಷರಾದ ವಿದ್ವಾಂಸರನ್ನು ಜೊತೆಗೊಳಿಸಿ, ರಾಜ್ಯಕಾರ್ಯಕ್ಕೆ ನಿಯಂತ್ರಿಸುವುದು ವಿದ್ಯಾರಣ್ಯರ ಪದ್ಧತಿಯಾಗಿ

7

ತ್ತೆಂದು ಹಿಂದೆ ಹೇಳಿದೆಯಲ್ಲವೆ? ಅದಕ್ಕನುಸಾರವಾಗಿ ಸಾಯಣರೂ ರಾಜ್ಯಾಧಿಕಾರಭಾರವನ್ನು ವಹಿಸಬೇಕಾಯಿತು. ಅಣ್ಣಂದಿರು ಸಾರಥ್ಯವನ್ನು ಕೈಕೊಂಡಿದ್ದ ಮಹಾರಥದ ನೊಗಕ್ಕೆ ಈ ತಮ್ಮಂದಿರೂ ಹೆಗಲು ಕೊಟ್ಟು ನಿಂತು, ರಾಜಕೀಯ ಕ್ಷೇತ್ರ ಸಾರಸ್ವತ ಕ್ಷೇತ್ರಗಳೆರಡರಲ್ಲಿಯೂ ಅನ್ಯಾದೃಶವಾದ ಮಹಾಕಾರ್ಯಗಳನ್ನು ಸಾಧಿಸಿದರು.

ಸಾಯಣ ಪ್ರಣೀತಗಳೆಂದು ನಮಗೆ ತಿಳಿದುಬಂದಿರುವ ಗ್ರಂಥಗಳು ಎಂಟು :—

೧. ಸುಭಾಷಿತ ಸುಧಾನಿಧಿ
೨. ಯಜ್ಞತಂತ್ರ ಸುಧಾನಿಧಿ
೩. ಪ್ರಾಯಶ್ಚಿತ್ತ ಸುಧಾನಿಧಿ
೪. ಆಯುರ್ವೇದ ಸುಧಾನಿಧಿ
೫. ಅಲಂಕಾರ ಸುಧಾನಿಧಿ
೬. ಧಾತುವೃತ್ತಿ
೭. ಪುರುಷಾರ್ಥ ಸುಧಾನಿಧಿ
೮. ವೇದಾರ್ಥಪ್ರಕಾಶ

ಇವೆಲ್ಲವೂ ಸಂಸ್ಕೃತ ಭಾಷೆಯಲ್ಲಿವೆ. ಇವುಗಳ ಸ್ವರೂಪ ವಿವರಗಳನ್ನು ಮುಂದೆ ನೋಡಬಹುದು.

ಸಾಯಣಾಚಾರ್ಯರು ವಿಜಯನಗರ ಸಾಮ್ರಾಜ್ಯದ ನಾಲ್ಕು ಮಂದಿ ರಾಜರುಗಳ ಬಳಿ ಮಂತ್ರಿಯಾಗಿದ್ದಂತೆ ತೋರುತ್ತದೆ. ಅವರು ಕ್ರಮವಾಗಿ ಯಾರು ಯಾರೆಂದರೆ :—

(೧) ನೆಲ್ಲೂರು ಪ್ರಾಂತದಲ್ಲಿ ಉಪರಾಜ, ಎಂದರೆ ರಾಜಪ್ರತಿನಿಧಿ(ವೈಸ್‌ರಾಯ್), ಅಥವಾ ಮಂಡಲೇಶ್ವರನಾಗಿದ್ದ ಕಂಪರಾಜ, ಅಥವಾ ಕಂಪಣ್ಣ. ಈತನು ವಿಜಯನಗರದ ಮೊದಲನೆಯ ದೊರೆ ಹರಿಹರರಾಯನಿಗೆ ತಮ್ಮ; ಎರಡನೆಯ ದೊರೆ ಬುಕ್ಕರಾಯನಿಗೆ ಅಣ್ಣ.

ಈತನ ಪ್ರಭುತ್ವಕಾಲವನ್ನು ಸುಮಾರು ಕ್ರಿಸ್ತ ವರ್ಷ ೧೩೪೦ ರಿಂದ ೧೩೫೪ ರ ಹಿಂದಿನ ವರೆಗೂ ಎಂದು ಹೇಳಬಹುದು.

(೨) ಈ ಕಂಪಣ್ಣನ ತರುವಾಯ ಅದೇ ಪ್ರಾಂತದಲ್ಲಿ ಆತನ ಅಧಿಕಾರಕ್ಕೆ ಬಂದ ಆತನ ಮಗ ಇಮ್ಮಡಿ ಸಂಗಮರಾಜ. ಈತನ ಪ್ರಭುತ್ವಕಾಲ ಕ್ರಿಸ್ತ ವರ್ಷ ೧೩೫೪ ರ ಈಚೆಸಿಂದ.

(೩) ಆ ಬಳಿಕ ವಿಜಯನಗರದ ಎರಡನೆಯ ದೊರೆ (ಮೇಲೆ ಹೇಳಿರುವ) ಬುಕ್ಕರಾಯ. ಈತನ ಪ್ರಭುತ್ವಕಾಲ ಕ್ರಿಸ್ತ ವರ್ಷ ೧೩೫೪ ರಿಂದ ೧೩೭೬ ರ ವರೆಗೆ.

(೪) ಅನಂತರ ಈತನ ಮಗ ಇಮ್ಮಡಿ ಹರಿಹರರಾಯ. ಈತನ ಪ್ರಭುತ್ವಕಾಲ ೧೩೭೬ ರಿಂದ ೧೪೦೪ ರ ವರೆಗೆ.

ಈ ನಾಲ್ವರಲ್ಲಿ ಮೊದಲನೆಯವನಾದ ಕಂಪರಾಜನ ಕಾಲದಲ್ಲಿ ವಿಜಯನಗರ ರಾಜ್ಯವು ಇನ್ನೂ ಬಾಲ್ಯದಶೆಯಲ್ಲಿತ್ತು. ಆಗಲೇ ಸಾಯಣರು ಗ್ರಂಥಲೇಖನಕ್ಕೆ ಉಪಕ್ರಮ ಮಾಡಿದ್ದರು. ಅವರ "ಸುಭಾಷಿತ" ಸುಧಾನಿಧಿಯು ಮುಖ್ಯವಾಗಿ "ವೀರ ಶ್ರೀ ಕಂಪ ರಾಜ" ನಿಗಾಗಿ ರಚಿತವಾದಂತೆ ಆ ಗ್ರಂಥದಲ್ಲಿ ಹೇಳಿದೆ. ಈ ಗ್ರಂಥವು ಸಾಯಣರ ಮೊದಮೊದಲನೆಯ ಕೃತಿಗಳಲ್ಲಿ ಒಂದು.

ಕಂಪರಾಜನು ತನ್ನ ಅಣ್ಣನಾದ ಮೊದಲನೆಯ ಹರಿಹರರಾಯನು ಬದುಕಿದ್ದಾಗಲೇ ಮೃತಿಯೊಂದಿರಬೇಕು. ಹಾಗಾಗದೆ, ಹರಿಹರನು ಕಾಲಾಧೀನನಾದಾಗ ಕಂಪಣ್ಣನು ಬದುಕಿದ್ದಿದ್ದರೆ, ಈತನೇ ಉಳಿದವ ರಲ್ಲಿ ಹಿರಿಯವನಾಗಿದ್ದ ಕಾರಣ, ಸಿಂಹಾಸನವು ಈತನಿಗೇ ದೊರೆಯ ಬೇಕಾಗಿತ್ತು; ಬುಕ್ಕರಾಜನು ಅದಕ್ಕೆ ಅಧಿಕಾರಿಯಾಗುತ್ತಿರಲಿಲ್ಲ. ಕಂಪಣ್ಣನು ಪೂರ್ವ ವಯಸ್ಸಿನಲ್ಲಿಯೇ ಮೃತನಾಗಿರಬೇಕೆಂದು ಊಹಿ ಸಲು ಇನ್ನೂ ಒಂದು ಕಾರಣವಿದೆ. ಆತನು ಸಾಯುವ ಕಾಲದಲ್ಲಿ ಆತನ ಮಗ ಇಮ್ಮಡಿ ಸಂಗಮನು ಇನ್ನೂ ಶಿಶುವಾಗಿದ್ದನೆಂದು "ಅಲಂಕಾರ ಸುಧಾನಿಧಿ"ಯಲ್ಲಿ ಸೂಚಿತವಾಗಿದೆ:—

ಸಂಗಮೇಂದ್ರ ನರೇಂದ್ರ ತ್ವಯ್ಯಕೃತಾಸ್ತ್ರಪರಿಗ್ರಹೇ |
ವಿಧಾಯೋರ್ವೀಧುರಮಗಾತ್ ಸ್ವಾರಾಜ್ಯಂ ಕಂಪಣಃ ಕಥಂ ||

[ಎಲೈ ಸಂಗಮರಾಜ, ನೀನು ಶಸ್ತ್ರಾಸ್ತ್ರ ಧಾರಣೆಮಾಡಬಲ್ಲವನಾಗುವುದಕ್ಕೆ ಮುಂಚೆಯೇ ಕಂಪಣ್ಣನು ನಿನ್ನಮೇಲೆ ಈ ರಾಜ್ಯದ ಭಾರವನ್ನು ಹೊರಿಸಿ ತಾನು ಸ್ವರ್ಗಕ್ಕೆ ಹೊರಟು ಹೋಗಿರುವುದು ಹೇಗೆ ? ]

ಹೀಗೆ ತಂದೆಯನ್ನು ಕಳೆದುಕೊಂಡು ಬಾಲನಾಗಿದ್ದ ಸಂಗಮ ಯುವರಾಜನಿಗೆ ವಿದ್ಯೆ ಬುದ್ಧಿಗಳನ್ನು ಕಲಿಸಿ, ಆತನನ್ನು ರಾಜ್ಯಾರ್ಹ ನನ್ನಾಗಿ ಮಾಡುವುದಕ್ಕೂ, ಆತನು ಹಾಗೆ ಅರ್ಹನಾಗುವವರೆಗೂ ಆತನ ಪ್ರತಿನಿಧಿ(ರೀಜಂಟ್) ಯಾಗಿದ್ದುಕೊಂಡು ರಾಜ್ಯ ಕಾರ್ಯ ಗಳನ್ನು ನಡೆಯಿಸುವುದಕ್ಕೂ ಸಹ, ಬುಕ್ಕಮಹಾರಾಜನು ಸಾಯಣಾ ಚಾರ್ಯರನ್ನೇ ನಿಯಮಿಸಿದನೆಂದು ತೋರುತ್ತದೆ. ಸಾಯಣರ ಆಗಿನ ಕರ್ತವ್ಯಗಳಲ್ಲಿ ಯುದ್ಧ ಪ್ರಸಂಗವೂ ಒಂದಾಗಿತ್ತು. ಇದರಿಂದಲೂ ಅವರು ಹಿಂತೆಗೆದವರಲ್ಲ.

" ಸಂಗ್ರಾಮೇಷು ಸವಿಾಕ್ಷ್ಯ ಸಂಗಮಪತೇಸ್ಸೇನಾಪತಿಂ ಸಾಯಣಂ"—ಎಂದು "ಅಲಂಕಾರ ಸುಧಾನಿಧಿ " ಯಲ್ಲಿ ಹೇಳಿದೆ.

ಹೀಗೆ ನಾನಾ ರಾಜ್ಯಕಾರ್ಯಗಳಲ್ಲಿ ಪ್ರವೃತ್ತರಾಗಿದ್ದರೂ ಅವರು ಲೇಖಣಿಯನ್ನು ಒತ್ತಟ್ಟಿಗಿಟ್ಟಿರಲಿಲ್ಲ. "ಆಯುರ್ವೇದ ಸುಧಾ ನಿಧಿ " " ಅಲಂಕಾರ ಸುಧಾನಿಧಿ " " ಯಜ್ಞತಂತ್ರ ಸುಧಾನಿಧಿ " "ಪ್ರಾಯಶ್ಚಿತ್ತ ಸುಧಾನಿಧಿ " "ಧಾತುವೃತ್ತಿ "—ಈ ಗ್ರಂಥಗಳನ್ನು ಅವರು ಸಂಗಮರಾಜನ ಆಸ್ಥಾನದಲ್ಲಿದ್ದ ಕಾಲದಲ್ಲಿ ಬರೆದಂತೆ ಅವುಗಳ ಪೀಠಿಕಾ ಶ್ಲೋಕಗಳಿಂದ ಬೋಧೆಯಾಗುತ್ತದೆ.

ಸಂಗಮರಾಜನು ಪ್ರಬುದ್ಧನಾಗಿ ಸ್ವಾತಂತ್ರ್ಯಾರ್ಹನಾದ ತರು ವಾಯ ಸಾಯಣರು, ಪ್ರಾಯಶಃ ವಾರ್ಧಕ್ಯದ ಕಾರಣದಿಂದಲೂ, ತಮ್ಮ ಸಾರಸ್ವತ ಸೇವೆಗೆ ಹೆಚ್ಚು ಕಾಲಾವಕಾಶ ಬೇಕೆಂಬ ಕಾರಣ ದಿಂದಲೂ, ಆತನ ಸಾಚಿವ್ಯದಿಂದ ವಿಶ್ರಾಂತರಾಗಿ, ವಿಜಯನಗರ

ಮಹಾರಾಜಧಾನಿಗೆ ಬಂದು, ಬುಕ್ಕ ಚಕ್ರವರ್ತಿಯ ಆಸ್ಥಾನದಲ್ಲಿ, ಅಣ್ಣಂದಿರ ಸಾನ್ನಿಧ್ಯದಲ್ಲಿ ನೆಲಸಿದರೆಂದು ತೋರುತ್ತದೆ. "ಪುರುಷಾರ್ಥ ಸುಧಾನಿಧಿ"ಯೂ ಜಗದ್ವಿಖ್ಯಾತವಾದ "ವೇದಾರ್ಥ ಪ್ರಕಾಶ"ದ ಬಹುಭಾಗವೂ ಬುಕ್ಕರಾಜನ ಆಶ್ರಯದಲ್ಲಿ ಆತನ ಕೋರಿಕೆಯ ಮೇರೆಗೆ ವಿರಚಿತವಾದುವು.

ಆತನ ಅನಂತರ ಇಮ್ಮಡಿ ಹರಿಹರನ ಕಾಲದಲ್ಲಿಯೂ ಸಾಯಣಾಚಾರ್ಯರ ವೈದುಷ್ಯ ಪ್ರವಾಹವು ಲೋಕ ಕಲ್ಯಾಣಕ್ಕಾಗಿ ಎಂದಿನಂತೆ ಹರಿಯುತ್ತಿತ್ತು. ಶತಪಥ ಬ್ರಾಹ್ಮಣ, ತೈತ್ತಿರೀಯ ಬ್ರಾಹ್ಮಣ, ಯಜುರ್ವೇದ ಬ್ರಾಹ್ಮಣ—ಈ ಭಾಗಗಳ ಭಾಷ್ಯವು ಈ ಕಾಲದ್ದು.*

ಕ್ರಿಸ್ತ ವರ್ಷ ೧೩೭೭–೭೮ರಲ್ಲಿ ಸಾಯಣಾಚಾರ್ಯರು ಮೈಸೂರು ಸಂಸ್ಥಾನದಲ್ಲಿ, ಈಗ ಮೈಸೂರು ಹಾಸನ ಜಿಲ್ಲೆಗಳಾಗಿರುವ ಪ್ರಾಂತದಲ್ಲಿ, ಸಂಚಾರ ಮಾಡುತ್ತಿದ್ದಂತೆ ತೋರುತ್ತದೆ. ಇಮ್ಮಡಿ ಹರಿಹರರಾಜನು ಶಕ ೧೨೯೮ರ (ಕ್ರಿ. ವ. ೧೩೭೬–೭) ಅನಂತರದ ನಳ ಸಂವತ್ಸರ ಫಾಲ್ಗುಣ ಬಹುಳ ಪ್ರತಿಪತ್ ಭೌಮವಾರದಂದು ಶಿವಸಾಯುಜ್ಯವನ್ನು ಪಡೆದ ತನ್ನ ತಂದೆ (ಸ್ವಪಿತುಃ) ಬುಕ್ಕರಾಜನಿಗೆ "ಪಾಪಕ್ಷಯ ದ್ವಾರಾ ಪರಮೇಶ್ವರ ಪ್ರಸಾದಸಿದ್ಧಿ"ಯೂ "ನಿರತಿಶಯ ಸುಕೃತಸಿದ್ಧಿ"ಯೂ ಆಗಬೇಕೆಂದು, ಹೋಸಣ (ಹೊಯ್ಸಳ)ದೇಶದ "ಕಬಾಹು ವಿಷಯ" (ಪ್ರಾಂತ) ದೊಳಗಣ ಬಾಚೆಯ ಹಳ್ಳಿಯನ್ನು ಸುತ್ತುಮುತ್ತಲಿನ ೧೩ ಗ್ರಾಮಗಳ ಸಮೇತ (ಇನ್ನು ಬೇರೆ ಕೆಲವು ಉಪಗ್ರಾಮಗಳನ್ನೂ ಸೇರಿಸಿ) ಒಂದು ಅಗ್ರಹಾರವನ್ನಾಗಿ ಮಾಡಿ,ಅದಕ್ಕೆ "ಇಮ್ಮಡಿಬುಕ್ಕರಾಜಪುರ"ಎಂದು ಹೆಸರಿಟ್ಟು, ಅದನ್ನು ೬೦ ವೃತ್ತಿಗಳಾಗಿ ವಿಂಗಡಿಸಿ, ನಾನಾ ಗೋತ್ರಗಳ ಬ್ರಾಹ್ಮಣರಿಗೆ ದಾನಮಾಡಿದನು. ಇದು ಬುಕ್ಕರಾಯ ನಿರ್ಯಾಣದ ಕೆಲವು ದಿನಗಳ ಅಥವಾ ತಿಂಗಳುಗಳ ಒಳಗಾಗಿಯೇ ನಡೆದ ಧರ್ಮ. ಆ ಬಾಚೆಯಹಳ್ಳಿ (ಅಗ್ರಹಾರ ಬಾಚಹಳ್ಳಿ) ಕೃಷ್ಣರಾಜ ಪೇಟೆಯ ತಾಲ್ಲೂ

* R. N. *Indian Antiquary*, Vol. XLV (1916), page 22.

ಕಿಸಲ್ಪಿದೆ. ಅದರ ವೃತ್ತಿಗಳನ್ನು ದಾನವಾಗಿ ಪಡೆದವರಲ್ಲಿ ಸಾಯಣಾಚಾರ್ಯರೇ ಮೊದಲನೆಯವರು; ಅವರ ಮಗ ವೇದಾಧ್ಯಯನ ಪಂಡಿತನಾದ ಶಿಂಗಣ್ಣನು ಎರಡನೆಯವನು. (ಸಾಯಣರ ಮಕ್ಕಳ ವಿಚಾರವನ್ನು ಮುಂದೆ ಕಾಣಬಹುದು).

"ಅತ್ರ ವೃತ್ತಿಮತಾಂ ಬ್ರಾಹ್ಮಣಾನಾಂ ಗೋತ್ರನಾಮಾನಿ ಲಿಖ್ಯಂತೇ ॥ ತತ್ರಾದೌ ಭಾರದ್ವಾಜಗೋತ್ರೋ ಯಜುಶ್ಶಾಖಾಧ್ಯಾಯೀ ಸಾಯಣಾಚಾರ್ಯಃ । ತತ್ತನಯಃ ಶಿಂಗಣಃ ॥*

ಅನಂತರ ಕ್ರಿಸ್ತವರ್ಷ ೧೩೭೮ರಲ್ಲಿ—ಎಂದರೆ ಶಕ ೧೩೦೦ನೆಯ ಕಾಳಯುಕ್ತಿ ಮಾರ್ಗಶಿರ ಪೌರ್ಣಮಿ ಶನಿವಾರ ಚಂದ್ರಗ್ರಹಣ ವೇಳೆಯಲ್ಲಿ—ಇಮ್ಮಡಿ ಹರಿಹರರಾಜನು ಹೌಸಣ (ಹೊಯ್ಸಳ) ದೇಶದ ಜಂಬೂರನ್ನು ತನ್ನ ತಾಯಿಯ ಹೆಸರಿನಿಂದ ಜೊಸ್ನಲಾಪುರವೆಂದು ಕರೆದು, ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಅದನ್ನು ಆ ರಾಜನ ಉಪಮಂತ್ರಿ (ಅಥವಾ ಮಂಡಲೇಶ್ವರ) ಮುದ್ದದಂಡೇಶನು ೩೬ ವೃತ್ತಿಗಳಾಗಿ ವಿಭಾಗಿಸಿದನು. ಈ ವೃತ್ತಿಗಳನ್ನು ಸ್ವೀಕರಿಸಿದವರಲ್ಲಿ ಮೊದಲನೆಯವರ ಹೆಸರು—"ಶ್ರೀಮಾನ್ ಬೌಧಾಯನೋ ಭಾರದ್ವಾಜಃ ಸಾಯಣಾಚಾರ್ಯಃ." ಆದರೆ ಸಾಯಣರು ಅದನ್ನು ಸ್ವಂತಕ್ಕೆ ಇಟ್ಟುಕೊಳ್ಳಲಿಲ್ಲ; ರಾಮಚಂದ್ರಭಟ್ಟರೆಂಬವರಿಗೆ ಕೊಟ್ಟುಬಿಟ್ಟರು.

"ಅನೇನ ಚೈಷಾ ವೃತ್ತಿಃ ವಿಶ್ವಾಮಿತ್ರಗೋತ್ರಾಯ ಆಪಸ್ತಂಬಾಯ ರಾಮಚಂದ್ರಭಟ್ಟಾಯ ಪ್ರದತ್ತಾ"

ಇಲ್ಲಿಂದ ೯ ವರ್ಷಗಳ ಆಚೆಗೆ—ಕ್ರಿಸ್ತವರ್ಷ ೧೩೮೭ರಲ್ಲಿ—ಎಂದರೆ ಮಾಧವ–ವಿದ್ಯಾರಣ್ಯರು ಬ್ರಹ್ಮಭೂತರಾದ ಒಂದು ವರ್ಷದ

---

* Page 42, Mysore Archaeological Reports for 1914-15. ಈ ತಾಮ್ರಶಾಸನದಲ್ಲಿರುವ ಇನ್ನು ಕೆಲವು ಹೆಸರುಗಳಿಂದ ಭ್ರಾಂತಿಯುಂಟಾಗ ಬಹುದಾದ ವಿಚಾರವನ್ನು ಅನುಬಂಧದಲ್ಲಿ ಸ್ಫುಟಪಡಿಸಿದೆ.

ಮೇಲೆ, ಸಾಯಣಾಚಾರ್ಯರು ಭೌತಿಕ ಕಳೇಬರವನ್ನು ತೊರೆದಿರ ಬಹುದೆಂದು ಒಬ್ಬ ಪಾಶ್ಚಾತ್ಯ ಪಂಡಿತರು ಊಹಿಸಿದ್ದಾರೆ.*

ಹೀಗೆ ಸಾಯಣಾಚಾರ್ಯರು ದೀರ್ಘಾಯುವಾಗಿಯೂ ದೃಢ ಕಾಯರಾಗಿಯೂ ಸಂತತೋದ್ಯೋಗಿಗಳಾಗಿಯೂ ಇದ್ದರೆಂದು ತಿಳಿಯಬರುತ್ತದೆ. ಇತರ ವಿಷಯಗಳಲ್ಲಿಯೂ ಅವರು ಅನುಪಮ ಭಾಗ್ಯಶಾಲಿಗಳಾಗಿದ್ದರು. ಶಾಸ್ತ್ರ ಶಸ್ತ್ರಗಳೆರಡೂ ಅವರಿಗೆ ಕೈವಶ ವಾಗಿದ್ದಂತೆಯೇ ಪುನಸ್ಸಮಾಧಾನಕ್ಕೆ ಬೇಕಾದ ಸಂಸಾರಾನು ಕೂಲವೂ ಅವರ ಪಾಲಿಗೆ ಬಂದಿತ್ತು.

ಅವರಿಗೆ ಕಂಪಣ್ಣ, ಮಾಯಣ್ಣ, ಶಿಂಗಣ್ಣ—ಎಂಬ ಮೂವರು ಗಂಡುಮಕ್ಕಳಿದ್ದರು. ಇವರು ವಿದ್ವಾಂಸರಾಗಿ, ಸಂತಾನಸಂಪತ್ತು ಳ್ಳವರಾಗಿದ್ದರು. ಸಾಯಣರ ಮನೆಯು ಸದಾಚಾರ ಸತ್ಕರ್ಮನಿಷ್ಠೆ ಗಳಿಂದ ನಿರ್ಮಲವಾಗಿ, ಪಾಠ ಪ್ರವಚನಗಳಿಂದ ಯಶಸ್ವಿಯಾಗಿ, ದಾನ ಧರ್ಮಗಳಿಂದ ಸಂತೋಷಾಸ್ಪದವಾಗಿತ್ತು. ಅವರ ರೂಪವು ದರ್ಶ ನೀಯವಾಗಿತ್ತು. ಅವರು ವೈದಿಕರಾಗಿದ್ದರೂ ಶುಷ್ಕ ಚರಿತರಾಗದೆ, ಸರಸ ವಿನೋದಗಳಲ್ಲಿ ಇಷ್ಟವುಳ್ಳವರಾಗಿದ್ದರು. ಹೀಗೆ ಪಾಂಡಿತ್ಯ, ಪ್ರಜ್ಞೆ, ರಾಜ್ಯಪದವಿ, ಲೌಕಿಕಸಾಮರ್ಥ್ಯ, ಬಾಂಧವ್ಯ ಸಂಪತ್ತು, ಲೋಕಸೇವಾಸಕ್ತಿ, ಶಿಷ್ಟಸಂಪ್ರದಾಯ ವರ್ತನೆ, ಕಾವ್ಯಕಲಾಭಿ ಮಾನ—ಈ ಲಕ್ಷಣಗಳೆಲ್ಲವೂ ಒಂದೆಡೆ ಸೇರಿರುವುದು ಅತಿಶಯ ವಲ್ಲವೆ? ಇಂತಹ ಮಹದ್ದಶೆಯು ಸಾಯಣರದಾಗಿತ್ತೆಂದು "ಅಲಂಕಾರ ಸುಧಾನಿಧಿ"ಯಲ್ಲಿರುವ ಅವರನ್ನು ಕುರಿತ ಪದ್ಯಗಳಿಂದ ತೋರಿಬರುತ್ತದೆ.

ಆ ಪದ್ಯಗಳನ್ನಿಲ್ಲಿ ಕೊಡುವುದಕ್ಕೆ ಮುಂಚೆ, ಅವುಗಳಿಗೆ ಚರಿತ್ರ ಕಾರರು ಕಟ್ಟಬಹುದಾದ ಬೆಲೆಯೆಷ್ಟು?—ಎಂಬ ಪ್ರಶ್ನೆಗೆ ಸಮಾ ಧಾನ ಹೇಳಬೇಕಾಗಿದೆ. ಅಲಂಕಾರ ಶಾಸ್ತ್ರವನ್ನು ಕುರಿತು ಗ್ರಂಥ

* Aufrecht, *Indian Antiquary*, Feb. 1916, Vol. XLV., page 24. Also *Epi. Ind.* Vol. III. p 24.

ಬರೆಯುವವರು ತಮ್ಮ ಗ್ರಂಥ ಸಂದರ್ಭಗಳಿಗೆ ತಕ್ಕ ಎಲ್ಲ ಸಲ್ಲಕ್ಷಣ ಗಳನ್ನೂ ತಮ್ಮ ಅಭಿಮಾನಕ್ಕೆ ಪಾತ್ರನಾದ ಗ್ರಂಥನಾಯಕನಲ್ಲಿ ಆರೋಪಣೆ ಮಾಡಿ, ಆತನನ್ನು ಇಂದ್ರನೆಂದೂ ಚಂದ್ರನೆಂದೂ ವರ್ಣಿ ಸುವುದು ಪುರಾತನ ಸಂಪ್ರದಾಯ. ಹೀಗಿರಲಾಗಿ, ಕಾವ್ಯೋದಾಹರಣೆ ಗಳಲ್ಲಿರುವ ಸಂಗತಿಗಳನ್ನು ವಾಸ್ತವಾಂಶಗಳೆಂದು ನಂಬುವುದು ಹೇಗೆ?

ಇಷ್ಟೇ ಅಲ್ಲದೆ "ಅಲಂಕಾರ ಸುಧಾನಿಧಿ"ಯು ಸಾಯಣ ಕೃತವೇ* ಎಂದು ಆ ಗ್ರಂಥದ ಉಪಸಂಹಾರ ವಾಕ್ಯದಿಂದ ತಿಳಿದು ಬರುತ್ತದೆ. ಅದರಲ್ಲಿಯ ಸಾಯಣ ವಿಷಯಕ ಪದ್ಯಗಳು ಒಂದು ವೇಳೆ ಅವರ ಸ್ವಕಲ್ಪನಾ ಕಲ್ಪಿತಗಳಲ್ಲದಿದ್ದರೂ, ಅವರ ತಮ್ಮ ಭೋಗನಾ ಥನ "ಉದಾಹರಣಪದ್ಯಮಾಲಿಕೆ" ಯಿಂದ ಉದ್ಧೃತವಾದವುಗಳಾಗಿರ ಬೇಕು. ಉತ್ಪ್ರೇಕ್ಷೆ ಅತಿಶಯೋಕ್ತಿಗಳು ಸಾಮಾನ್ಯ ಕವಿಗಳಿಗೇ ಅನಿ ಷಿದ್ಧವಾಗಿರುವಾಗ, ತಮ್ಮನು ಅಣ್ಣನ ವಿಷಯದಲ್ಲಿ ಬರೆಯುವಾಗ ಅವು ಧಾರಾಳವಾಗಿ ಹರಿದು ಬರುವುದು ಸ್ವಾಭಾವಿಕವೇ ಅಲ್ಲವೆ?

ಈ ಪ್ರಶ್ನೆಗಳಿಗೆ ನಮ್ಮ ಸಮಾಧಾನವು ಈರೀತಿಯಾಗಿರುತ್ತದೆ:— ಈ ಸಾಯಣ ವಿಷಯಕ ಪದ್ಯಗಳಲ್ಲಿ ನಮ್ಮ ನಂಬಿಕೆಗೆ ಕಷ್ಟವಾದಂಥಾ ಅದ್ಭುತ ಸಂಗತಿಗಳೇನೂ ಕಾಣುವುದಿಲ್ಲ. ಅವು ವರ್ಣಿಸಿರುವಂಥಾ ಮಹಾ ಲಕ್ಷಣಸಂಪನ್ನರಾದವರು ಜಗತ್ತಿನ ಚರಿತ್ರೆಯಲ್ಲಿ ಬೇರೆ ಯಾರೂ ಇಲ್ಲದೆ ಇಲ್ಲ. ಅಂಥವರು ವಿರಳವೇ ಹೊರತು ಅಸಂಭವ ವಲ್ಲ. ಕವಿತ್ವ ಮಾಡುವುದಕ್ಕೆ ಬೇಕಾದ ಪ್ರತಿಭೆ ಪಾಂಡಿತ್ಯಗಳನ್ನು ಪಡೆದವರು ಅನೃತವಾದದಿಂದ ಲೋಕವಂಚನೆ ಮಾಡುವಷ್ಟು ಅಧ ರ್ಮಿಗಳಾಗಿದ್ದಾರೆಂದು ಸಂಶಯಪಡಲು ಯಾವ ಕಾರಣವೂ ಇಲ್ಲ. ಸುಳ್ಳಾದುದನ್ನು ದಿಟವೆನಿಸುವುದೂ ದಿಟವಾದುದನ್ನು ಸುಳ್ಳೆನಿಸು ವುದೂ ಕವಿಯ ಕೆಲಸವಲ್ಲ. ವಾಸ್ತವವಾಗಿರತಕ್ಕ ದಿಟ ಸಟೆಗಳನ್ನು

---

* ಕರ್ತೃತ್ವದ ವಿಚಾರವನ್ನು ಮುಂದೆ ನೋಡಬಹುದು.

ಮನಸ್ಸಿಗೆ ಹಿಡಿಯುವ ರೀತಿಯಲ್ಲಿ ತಿಳಿಯಪಡಿಸುವುದು ಆತನ ಕೆಲಸ. ಈ ಕೆಲಸದಲ್ಲಿ ಉತ್ಪ್ರೇಕ್ಷಾದಿ ಅಲಂಕಾರಗಳು ಉತ್ತಮ ಕವಿಗೆ ಸಾಧಕಗಳೇ ಹೊರತು ಬಾಧಕಗಳಲ್ಲ. ವರ್ಣನೆಯು ಕವಿಯ ಸ್ವಂತ ಕೃತಿಯೇ ಹೊರತು ವರ್ಣಿತ ವಿಷಯವು ಆತನ ಸ್ವಂತವಾಗಿರಬೇಕಾದುದಿಲ್ಲ. ''ಸಾಯಣ''ರೆಂಬವರು ಕೇವಲ ಕಾಲ್ಪನಿಕ ವ್ಯಕ್ತಿಯಾಗಿ, ಪ್ರತ್ಯಕ್ಷರೂಪರಲ್ಲದೆ ಇದ್ದಿದ್ದರೆ, ಆಗ ಕವಿಯು ಅವರ ಗುಣಗಳನ್ನೂ ಇಷ್ಟಬಂದಂತೆ ಕಲ್ಪಿಸಿಕೊಳ್ಳಬಹುದಾಗಿತ್ತು. ಆದರೆ ಅವರು ಸಾಕ್ಷಾತ್ತಾಗಿ ಜೀವಿಸುತ್ತಿದ್ದಾಗ, ಅದೂ ಅಂಥಾ ಪ್ರಾಜ್ಞರ ತಿಳಿವಳಿಕೆಯಲ್ಲಿ, ಅವರನ್ನೇ ಕುರಿತು ಮಿಥ್ಯಾ ಭಾಷಣ ಮಾಡಿದ್ದಿದ್ದರೆ, ಆ ಕೇವಲ ಮಿಥ್ಯೆಯನ್ನು ಪ್ರಕಟಪಡಿಸಲು ಅವರು ಸರ್ವಥಾ ಅನುಜ್ಞೆಕೊಡುತ್ತಿರಲಿಲ್ಲ. ವರ್ಣನಾಂಗಗಳಾದ ಉತ್ಪ್ರೇಕ್ಷೆ ಮೊದಲಾದ ಅಲಂಕಾರಗಳ ''ರೀತಿ''ಯಾದರೋ, ಪುರಾತನವಾದ ಕವಿಸಮಯಕ್ಕೆ ಸೇರಿದುದು. ಕಣ್ಣನ್ನು ಕಮಲಕ್ಕೆ ಹೋಲಿಸುವುದೂ, ಉದಾರಿಯನ್ನು ಕರ್ಣನೆಂದು ಕರೆವುದೂ, ಬಹುಜನಕ್ಕೆ ತಿಳಿದುದನ್ನು ತ್ರಿಲೋಕವಿಖ್ಯಾತವೆನ್ನುವುದೂ ಪ್ರಾಚೀನ ಸಂಪ್ರದಾಯ. ಈಗ ನಮ್ಮ ಮುಂದಿರುವ ಪದ್ಯಗಳ ವರ್ಣನ ರೀತಿಯು ಈ ಪೂರ್ವಪದ್ಧತಿಯನ್ನನುಸರಿಸಿದೆ. ಅವುಗಳ ಒಟ್ಟಿನ ಭಾವವನ್ನು ನಾವು ಗ್ರಹಿಸಬೇಕೇ ಹೊರತು, ಅವುಗಳ ಕೇವಲ ಶಬ್ದಾರ್ಥವನ್ನು ನೋಡತಕ್ಕುದಲ್ಲ. ಈ ಪದ್ಯಗಳಲ್ಲಿ ಕಾವ್ಯಮರ್ಯಾದೆಯನ್ನನುಸರಿಸಿ ಬರುವ ಅಲಂಕಾರಗಳನ್ನೂ, ಕಾವ್ಯಸಹಜವಾದ ವರ್ಣನೆಯ ಧೋರಣೆಯನ್ನೂ ಬಿಟ್ಟು, ಅವುಗಳ ಮುಖ್ಯತಾತ್ಪರ್ಯವನ್ನು ನೋಡಿದರೆ, ಅದು ಯಥಾರ್ಥವಲ್ಲವೆಂದು ಸಂದೇಹಪಡಿಸುವ ಅಸಂಭವಾಂಶವು ಅದರಲ್ಲೇನೂ ಕಾಣಬರುವುದಿಲ್ಲ. ಸಾಯಣರೇ ಆ ಪದ್ಯಗಳನ್ನು ನೋಡಿ ಅನುಜ್ಞೆಕೊಟ್ಟಿರುವುದರಿಂದ ಅವು ಅಬದ್ಧಕಂತೆಗಳೇನೂ ಅಲ್ಲವೆಂದು ನಾವು ನಂಬಬಹುದು.

ಇಷ್ಟು ಪೀಠಿಕೆ ಹೇಳಿ, ''ಅಲಂಕಾರ ಸುಧಾನಿಧಿ''*ಯಲ್ಲಿರುವ

* ''ಅಲಂಕಾರ ಸುಧಾನಿಧಿ''ಯು ಇನ್ನೂ ಅಚ್ಚಾಗಿಲ್ಲ. ನಾವು ನೋಡಿರು

ಸಾಯಣರ ಗುಣಕಥನೆಯನ್ನು ಇಲ್ಲಿ ಕೊಡುವೆವು :—

## — ಯುವರಾಜಶಿಕ್ಷೆ —

ಸಾಯಣರು ಕಂಪಣರಾಜಕುಮಾರನಾದ ಸಂಗಮ ಯುವರಾಜನಿಗೆ ಗುರುವಾಗಿದ್ದರಲ್ಲವೆ? ಆ ಪದವಿಯ ಕರ್ತವ್ಯವನ್ನು ಅವರು ನೆರವೇರಿಸಿದ ಬಗೆಯು ಈ ಪದ್ಯಗಳಿಂದ ಸೂಚಿತವಾಗುತ್ತದೆ:—

ಲೋಕೋದ್ವೇಗಕರದ್ವಿಷದ್ವಿಹತಯೇಪ್ರಾಬೋಧಯಸ್ತ್ವಂಪ್ರಭೋ।
ಪಾರ್ಥಂ ಪ್ರಾಗಧುನಾಪ್ಯಪಾರ್ಥಸುಮನಃಕಾರ್ಪಣ್ಯವಿಚ್ಛಿತ್ತಯೇ ॥
ಬಾಲ್ಯೇಽಪಿ ಪ್ರತಿಬೋಧಯಸ್ಯವಹಿತಂ ಶ್ರೀಸಂಗಮಕ್ಷ್ಮಾಪತಿಂ।
ಬೋಧೈಕಾಸ್ಪದ ಸಾಯಣಾರ್ಯ ಭಗವದ್ವ್ಯಾಸಾವತಾರ ಸ್ವಯಂ ॥

[ಭಗವಂತನಾದ ವ್ಯಾಸನ ಅವತಾರವೇ ಆದ ಎಲೈ ಸಾಯಣಾರ್ಯನೆ, ಹಿಂದಿನ ಅವತಾರದಲ್ಲಿ ನೀನು ಲೋಕಕಂಟಕರಾದ ಶತ್ರುಗಳನ್ನು ನಾಶಪಡಿಸುವುದಕ್ಕೋಸ್ಕರ ಪಾರ್ಥನನ್ನು ಎಚ್ಚರಗೊಳಿಸಿದೆ; ಈಗಲಾದರೋ (ಪಾರ್ಥನಲ್ಲದ) ಸತ್ಪುರುಷರ ಕಾರ್ಪಣ್ಯವನ್ನು (ತಪ್ಪುತಿಳಿವಳಿಕೆಯನ್ನು) ಹೋಗಲಾಡಿಸುವುದಕ್ಕಾಗಿ ಸಂಗಮರಾಜನಿಗೆ ಬಾಲ್ಯದಲ್ಲಿಯೇ ಎಚ್ಚರಿಕೆ ಕೊಡುತ್ತಿದ್ದೀಯೆ. ಜ್ಞಾನಕ್ಕೆ ನೀನೇ ತವರುಮನೆ.]

ಆನ್ವೀಕ್ಷಕ್ಯಾಮಧಿಕವಿಹೃತೌ ಹರ್ಷಶೋಕವ್ಯುದಾಸೇ।
ಮಾರ್ಗೋಲ್ಲೇಖಂ ವಿದಧತಿ ನೃಣಾಂ ಮಾನವೇ ಧರ್ಮಶಾಸ್ತ್ರೇ॥
ಸಮ್ಯಕ್ ಶಿಕ್ಷಾಂ ಸಚಿವ ಗಮಿತಃ ಶೈಶವೇ ಸಾಯಣಾರ್ಯ।
ಪ್ರೌಢಿಂ ಗಾಢಾಂ ಪ್ರಕಟಯತಿ ತೇ ಸಂಗಮೇಂದ್ರಃ ಪ್ರಯೋಗೇ॥

[ಎಲೆ ಸಾಯಣಾರ್ಯ, ನ್ಯಾಯಶಾಸ್ತ್ರದಲ್ಲಿಯೂ, ವಿಹಾರ ಉಪಚಾರಗಳನ್ನೂ ಸಂತೋಷ ದುಃಖಗಳನ್ನೂ ಹದ್ದಿನಲ್ಲಿಡುವ ಮನೋನಿಗ್ರಹಾಭ್ಯಾಸದಲ್ಲಿಯೂ, ಮನ್ವಾದಿ ಮಹರ್ಷಿಗಳ ಧರ್ಮಶಾಸ್ತ್ರದ ಹಾದಿಯನ್ನು ಪ್ರಜೆಗಳಿಗೆ ತೋರಿಸಿಕೊಡುವು

---

ವುದು ಅದರ ಹಸ್ತಲಿಖಿತ ಪ್ರತಿ. ಅದರಲ್ಲಿ ಲೋಪಗಳೂ ಸ್ಖಾಲಿತ್ಯಗಳೂ ಹೇರಳವಾಗಿವೆ. ಅವು ಪ್ರಕೃತ ಇಲ್ಲಿ ನಮ್ಮ ಅನುಲೇಖನದಲ್ಲಿ ಪ್ರತಿಬಿಂಬಿಸಿದ್ದರೆ ಅದು ಆಶ್ಚರ್ಯವಲ್ಲ.

ದರಲ್ಲಿಯೂ ಸಹ ಸಂಗಮರಾಜನು ನಿನ್ನಿಂದ ಚೆನ್ನಾಗಿ ಶಿಕ್ಷೆ ಪಡೆದು, ಈಗ ಆ ಸಂಸ್ಕಾರದ ಉತ್ತಮ ಪ್ರೌಢಿಮೆಯನ್ನು ತನ್ನ ನಡೆವಳಿಕೆಯಲ್ಲಿ ತೋರಿಸುತ್ತಿದ್ದಾನೆ.]

## — ರಾಜ್ಯಪಾಲನೆ —

ರಾಜಕುಮಾರ ಸಂಗಮನು ಬಾಲ್ಯದಲ್ಲಿದ್ದಾಗ ಸಾಯಣಾಚಾರ್ಯರು ಸ್ವತಃ ರಾಜ್ಯಭಾರವನ್ನು ನಿರ್ವಹಿಸಿದರಷ್ಟೆ? ಅವರ ಆಗಿನ ವಿಚಕ್ಷಣೆಯನ್ನು ಈ ಕೆಳಗಿನ ಪದ್ಯಗಳು ತಿಳಿಸುತ್ತವೆ:—

ಲಕ್ಷ್ಮೀಸ್ತೇ ಮಂತ್ರಶೌರ್ಯಾಭ್ಯಾಂ ಅಹಿತೇಭ್ಯಸ್ಸಮಾಹಿತಾ ॥
ಆಹೃತಾ ತ್ಯಾಗಭೋಗಾಭ್ಯಾಂ ಅದ್ಭುತಂ ಸಾಯಣಪ್ರಭೋ ॥

[ಎಲೆ ಸಾಯಣಪ್ರಭುವೆ, ನಿನ್ನ ಮಂತ್ರಾಲೋಚನೆಯೂ, ಶೌರ್ಯವೂ ಶತ್ರುಗಳ ಬಳಿಯಿದ್ದ ಲಕ್ಷ್ಮಿಯನ್ನು ಎಳೆದು ತಂದುವು. ಆದರೆ ದಾನಧರ್ಮಗಳೂ ಲೋಕೋಪಯೋಗವೂ ಆಕೆಯನ್ನು ಅಪಹರಿಸಿದುವು. ಇದೇನದ್ಭುತ!]

ಮುಕ್ತಕಂಪಮನುಕಂಪಯನ್ಮಹೀಂ।
ಕಂಪರಾಜರಜನೀಶಪಾಲಿತಾಂ ॥
ಮಂಡಲೇಷು ಕೃತಚಾರುಮಂಡನ।
ಸ್ಸಾಯಣೋ ಜಯತಿ ಮಾಯಣಾತ್ಮಜಃ ॥

[ಕಂಪರಾಜನು ತೊರೆದು ಬಿಟ್ಟ ಈ ರಾಜ್ಯದ ವಿಷಯದಲ್ಲಿ ಮಾಯಣನ ಮಗ ಸಾಯಣನು ಕನಿಕರಪಟ್ಟು ಅದರ ಭಯವನ್ನು ಹೋಗಲಾಡಿಸಿ, ಅದರ ನಾನಾ ಪ್ರಾಂತಗಳಲ್ಲಿ ಕೀರ್ತಿವಂತನಾಗಿ ಜಯಶಾಲಿಯಾಗಿದ್ದಾನೆ.]

ಸಾಯಣಸಚಿವಾಯತ್ತಂ ಸಂಗಮರಾಜಸ್ಯ ಪಶ್ಯ ರಾಜ್ಯಮಿದಂ ।
ವಿದ್ಯಾವಿನೋದರಸಿಕೈಃ ವಿದ್ವದ್ಭಿರ್ಬಹುಮತಾಭೋಗಂ ॥

ಅತ್ರ ವಿದ್ಯಾವಿನೋದರಸಿಕಾನಾಂ ವಿದುಷಾಂ ಬಹುಮಾನನೀಯಾಭೋಗತ್ವೇನ ಸಚಿವಾಯತ್ತತ್ವೇನ ಚ ರಾಜ್ಯಸಿರಾತಂಕತ್ವಂ । ತೇನ ಚ ರಾಜ್ಞೋ ಸಿಶ್ಶೇಷಕ್ಷಪಿತವಿಮತತ್ವಂ। ತೇನ ಚ ಸಚಿವನ್ಯಸ್ತಭಾರಸ್ಯ ರಾಜ್ಞೋ ವ್ಯಾಪಾರಾಂತರ ವೈಧುರ್ಯಂ ನಾಟ್ಯದರ್ಶ

ನಾದಿವಿನೋದರಸಿಕತ್ವಂ । ತೇಸ ಚ ರಸಿಕಾನಾಂ ಆಶ್ರಯಣೀಯತ್ವಂ ಆಶ್ರಿತಾನಾಂ ವಿಪದ್ವಾರ್ತಾನಭಿಜ್ಞತ್ವಂ ಅಧಿಸಂಪತ್ಪ್ರಾಪ್ತಿಶ್ಚ ವ್ಯಜ್ಯತೇ ॥

[ವಿದ್ಯಾ ವಿನೋದ ರಸಿಕತೆಗಳುಳ್ಳ ಪಂಡಿತರಿಗೆ ಬಹುಮಾನಸಂತೋಷಗಳನ್ನುಂಟುಮಾಡುವುದಾಗಿಯೂ, ಸಾಯಣಮಂತ್ರಿಯ ಆಳಿಕೆಗೊಳಪಟ್ಟುದಾಗಿಯೂ ಇರುವ ಈ ಸಂಗಮರಾಜನ ರಾಜ್ಯವನ್ನು ನೋಡು.

ಈ ಪದ್ಯದ ರೀತಿಯಿಂದ—ರಾಜ್ಯವು ಮಂತ್ರಿಯ ಆಳಿಕೆಯಲ್ಲಿದ್ದಕಾರಣ ನಿರುಪದ್ರವವಾಗಿತ್ತೆಂಬುದೂ, ಶತ್ರುಗಳು ನಿಶ್ಶೇಷವಾಗಿದ್ದರೆಂಬುದೂ, ಹೀಗೆ ರಾಜನಿಗೆ ಇತರ ಕ್ಲೇಶಗಳಿಲ್ಲದಿದ್ದುದರಿಂದ ಆತನು ಕಾವ್ಯ ನಾಟಕಾದಿಗಳಲ್ಲಿ ಆಸಕ್ತನಾಗಿರಲು ಅವಕಾಶವಿತ್ತೆಂಬುದೂ, ಇದರಿಂದ ಸರಸಿಗಳಾದ ವಿದ್ವಾಂಸರಿಗೆ ರಾಜಾಶ್ರಯ ದೊರೆತು ಅದರಿಂದ ಅವರು ಅಭಿವರ್ಧಿಸುತ್ತಿದ್ದರೆಂಬುದೂ ಕೂಡ ಸೂಚನೆಯಾಗುತ್ತದೆ.]

ಸತ್ಯಂ ಮಹೀಂ ಭವತಿ ಶಾಸತಿ ಸಾಯಣಾರ್ಯೇ ।
ಸಂಪ್ರಾಪ್ತಭೋಗಸುಖಿನಃ ಸಕಲಾಶ್ಚ ಲೋಕಾಃ ॥
ತದ್ವೈರಿಣಸ್ತದಪಿ ಶೈಲವನಾಂತರೇಷು ।
ಶುಷ್ಯಂತ್ಯಮಂದಮುಖನಿಃಶ್ವಸಿತಾಃ ಕ್ಷುಧಾರ್ತಾಃ ॥

[ಎಲೆ ಸಾಯಣವಿಭುವೆ, ನೀನು ಭೂಮಿಯನ್ನು ಆಳುತ್ತಿರಲಾಗಿ ಪ್ರಜೆಗಳೆಲ್ಲರೂ ಇಷ್ಟಭೋಗಗಳನ್ನು ಪಡೆದು ಸುಖಿಸುತ್ತಿದ್ದಾರೆ. ಅವರ ವೈರಿಗಳಾದರೋ, ಬೆಟ್ಟಕಾಡುಗಳಲ್ಲಿ ಹಸಿದು ಕಂಗೆಟ್ಟು ಉಸಿರಿಲ್ಲದೆ ಒಣಗುತ್ತಿದ್ದಾರೆ. ಇದು ಸತ್ಯ.]

## —ಶೌರ್ಯ—

ಸಾಯಣರು ಪೂಜ್ಯವಾದ ಉಪಾಧ್ಯಾಯ ಪೀಠದಲ್ಲಿಯೂ ಸುರಕ್ಷಿತವಾದ ಮಂತ್ರಾಲೋಚನ ಮಂದಿರದಲ್ಲಿಯೂ ಮಾತ್ರವೇ ಕುಳಿತಿದ್ದವರಲ್ಲ. ಅವರು ಸೇನಾನಾಯಕರಾಗಿ ಹೊರಟು ಯುದ್ಧಮಾಡಿ ರಾಜ್ಯ ಸಂರಕ್ಷಣೆ ಮಾಡಬೇಕಾಗಿತ್ತು; ಅಷ್ಟೇ ಅಲ್ಲ, ಅವರು ರಾಜ್ಯ ವಿಸ್ತರಣೆಯನ್ನೂ ಮಾಡಿದರು. ಅವರ ದಂಡಯಾತ್ರೆಯ ಕೋಲಾಹಲವೆಂತಹುದೆಂದರೆ:—

ಗರ್ಜದ್ದುರ್ಜಯ ಗಂಧ ಸಿಂಧುರ ಘಟಾ
ಸಂಘಟ್ಟ ಸಷ್ಟಾಷ್ಟದಿ ।
ಕ್ಕ್ರುದ್ಧಸ್ಸಾಂಗ್ರ ತುರಂಗ ಹೇಷಿತರವೈ
ಗರ್ರಸ್ತಾಸ್ಯ ಘೋಷೋದಯಃ ॥
ಧಾಟೀವೋಟನ ಲಂಪಟೋದ್ಭಟ
ಭಟ ವ್ಯಾಧೂತ ಧೂಳೀ ಭರ ।
ಚ್ಛನ್ನ ವ್ಯೋಮ ಪಥೋ ವಿಸರ್ಜಿಗಮಿಷ
ತ್ಯುರ್ವೀಜಯೇ ಸಾಯಣಃ ॥

[ಸಾಯಣರು ದಿಗ್ವಿಜಯಕ್ಕೆ ಹೊರಟಿರಲು, ಮದ್ದಾನೆಗಳ ಗರ್ಜನೆಯಿಂದಲೂ ವೇಗದ ರಭಸದಿಂದಲೂ ಎಂಟು ದಿಕ್ಕುಗಳೂ ನಡುಗಿ, ಕುದುರೆಗಳ ಕೆನೆತದಲ್ಲಿ ಮಿಕ್ಕ ಸದ್ದುಗಳೆಲ್ಲವೂ ಅಣಗಿ, ಅವುಗಳ ಗೊರಸಿನಿಂದಲೂ ಭಟರ ಪಾದಾಘಾತದಿಂದಲೂ ಎದ್ದ ಧೂಳು ಆಕಾಶಮಾರ್ಗವನ್ನೆಲ್ಲಾ ಮುಚ್ಚಿಬಿಡುತ್ತಿತ್ತು.]

ಭೋಭೋಸ್ಸಾಯಣಮಂತ್ರಿಶಾಸನಮಿದಂ
ಭೂಮೌ ಸಮುದ್ಘುಷ್ಯತಾಮ್ ।
ಯೇ ಯೇ ಸ್ವಾಮಿನಿ ಸಂಗಮಕ್ಷಿತಿಪತೌ
ಸೇವಾನಭಿಜ್ಞಾ ನೃಪಾಃ ॥ . . . . .

[ಎಲವೆಲವೊ! ಸಂಗಮ ಸಾರ್ವಭೌಮನ ಸೇವೆಯನ್ನು ಯಾವ ಯಾವ ರಾಜರು ಇನ್ನೂ ಅರಿಯರೋ ಅವರಿಗಾಗಿ ಸಾಯಣ ಮಂತ್ರಿಯ ಈ ಆಜ್ಞೆಯು ಪ್ರಕಟ ಪಡಲಿ . . . .]

ಶೌರ್ಯೋಚ್ಛೃಂಖಲ ಸಂಗಮೇಶ್ವರ ಮಹಾ
ಸಾಮ್ರಾಜ್ಯ ಸಂಪಾದನ ।
ಪ್ರೋದ್ಯತ್ಸಾಯಣ ಮಂತ್ರಿಪರ್ಯ ರಭಸ
ಕ್ಷುಣ್ಣ ಕ್ಷಮಾ ಸಂಪದಾಂ ॥
ಗೂಢಂ ಕಾನನಗಹ್ವರೇಷು ಚರತಾ
ಮಸ್ಮಾಕ ಮತ್ಯುನ್ನತೈ ।

ರೇಭಿಃ ಕಿಂ ಘನಗರ್ಜಿತೈರ್ಮದಗಜೈಃ
ಕಿಂ ವಾ ಸಹೇಷೈರ್ಹಯೈಃ ॥

[ಶೌರ್ಯದಿಂದ ನಿರುಂಕುಶನಾಗಿರುವ ಸಂಗಮರಾಜನಿಗೆ ಸಾಮ್ರಾಜ್ಯ ಸಂಪಾದನೆ ಮಾಡಿಕೊಡುವುದರಲ್ಲಿ ಉದ್ಯುಕ್ತನಾದ ಸಾಯಣ ಮಂತ್ರಿಶ್ರೇಷ್ಠನ ರಭಸದ ದೆಸೆಯಿಂದ ರಾಜ್ಯವನ್ನೂ ಸಂಪತ್ತುಗಳನ್ನೂ ಕಳೆದುಕೊಂಡು, ಕಾಡುಗಳಲ್ಲಿಯೂ ಗುಹೆಗಳಲ್ಲಿಯೂ ರಹಸ್ಯವಾಗಿ ಓಡಾಡುತ್ತಿರುವ ನಮ್ಮಗಳಿಗೆ ಮೇಘದಂತೆ ಗರ್ಜಿಸುವ ಈ ದೊಡ್ಡ ದೊಡ್ಡ ಮದ್ದಾನೆಗಳಿಂದೇನು? ಕೆನೆದಾಡುವ ಈ ಕುದುರೆಗಳಿಂದ ತಾನೆ ಏನು?]

ಅಮುಂ ಶಮಿತ ಶಾತ್ರವ ಸ್ಥಿರ ಭುಜಾಪಲೇಪೋದಯಂ।
ಸಮೀಕ್ಷ್ಯ ಯುಧಿ ಸಾಯಣಂ ಸಮಧಿಕೋ ಭವೇದ್ವಿಸ್ಮಯಃ॥
ನಖಾಗ್ರಹತವೈರಿಣೋ ನರಹರೇರ್ಹರಸ್ಯಾಥವಾ ।
ನವಾಂಬುಜದಳೋಲ್ಲಸನ್ನಯನಮಾತ್ರದಗ್ಧದ್ವಿಷಃ ॥

[ಶತ್ರುಗಳ ಭುಜಬಲವನ್ನಡಗಿಸಿದ ಸಾಯಣನನ್ನು ಯುದ್ಧರಂಗದಲ್ಲಿ ಕಂಡಾಗ ಈತನೇನು ಉಗುರಿನಿಂದ ವೈರಿಯನ್ನು ಕೊಂದ ನರಸಿಂಹನೋ, ಅಥವಾ ಕಣ್ಣು ನೋಟದಿಂದಲೇ ವೈರಿಯನ್ನು ಸುಟ್ಟ ಈಶ್ವರನೋ ಎಂಬ ವಿಸ್ಮಯವು ಉಂಟಾಗುತ್ತದೆ.]

ಜಗದ್ವೀರಸ್ಯ ಜಾಗರ್ತಿ ಕೃಪಾಣಃ ಸಾಯಣಪ್ರಭೋಃ ।
ಕಿಮಿತ್ಯೇತೇ ವೃಥಾಟೋಪಾ ಗರ್ಜಂತಿ ಪರಿಪಂಥಿನಃ ॥

[ಲೋಕೈಕವೀರನಾದ ಸಾಯಣದೇವನ ಕತ್ತಿ ಎಚ್ಚರಗೊಂಡಿರುವಾಗ, ಶತ್ರುಗಳ ಆಟೋಪ ಗರ್ಜನೆಗಳೇನು ಕೆಲಸಕ್ಕೆ ಬಂದಾವು ? ]

ಆಕರ್ಣ್ಯ ಯಾತ್ರಾಪಟಹ ಪ್ರಣಾದಾ
ನಪೋಢನಿದ್ರೈಸ್ತವ ಸಾಯಣಾರ್ಯ ।
ಅರಣ್ಯಸಿಂಹೈರರಿಭೂಪತೀನಾಮಾಹನ್ಯತೇ
ಚಿತ್ರಗತೋಪಿ ಹಸ್ತೀ ॥

[ಎಲೈ ಸಾಯಣನೆ, ನಿದ್ದೆಯಿಂದೆಬ್ಬಿಸುವ ನಿನ್ನ ದಿಗ್ವಿಜಯದ ಭೇರೀಧ್ವನಿಯನ್ನು ಕೇಳಿದ ಸಿಂಹಗಳು ಅರಣ್ಯದಿಂದ ಬಂದು, ಶತ್ರುರಾಜರ ಅರಮನೆಗಳಿಗೆ ನುಗ್ಗಿ, ಅಲ್ಲಿ ಗೋಡೆಗಳ ಮೇಲೆ ಬರೆದಿರುವ ಚಿತ್ರದ ಆನೆಗಳನ್ನು ಕೂಡ ಅಪ್ಪಳಿಸುತ್ತವೆ.]

ಸಂಗಮ ಸಾಯಣರು ಯುದ್ಧಮಾಡಿ ಗೆದ್ದ ದೊರೆಗಳಲ್ಲಿ ಇಬ್ಬರ ಹೆಸರುಗಳು ಇಲ್ಲಿ ಪ್ರಸ್ತಾವಿತವಾಗಿವೆ:—

ದಿಷ್ಟ್ಯಾ ದೈಷ್ಟಿಕಭಾವ ಸಂಭೃತ ಮಹಾಸಂಪದ್ವಿಶೇಷೋದಯಂ।
ಜಿತ್ವಾ ಚಂಪನರೇಂದ್ರಮೂರ್ಜಿತಯಶಃ ಪ್ರತ್ಯಾಗತಸ್ಸಾಯಣಃ॥

[ಅದೃಷ್ಟ ವಿಶೇಷದಿಂದ ಮಹಾ ಸಂಪತ್ತನ್ನು ಪಡೆದಿದ್ದ ಚಂಪ ನರಪತಿಯನ್ನು ಸಾಯಣನು ಜಯಿಸಿ, ತನ್ನ ಕೀರ್ತಿಯನ್ನು ಹೆಚ್ಚಿಸಿಕೊಂಡು ಹಿಂದಿರುಗಿದನು.]

ಈ ಚಂಪರಾಜನಾರೋ ಹೇಳುವುದು ಕಷ್ಟ. ಉತ್ತರ ಆರ್ಕಾಟು ಜಿಲ್ಲೆಯ ತಿರುಪಳ್ಳಂ ಎಂಬ ಸ್ಥಳದಲ್ಲಿ ಶಕ ಸಂವತ್ಸರ ೧೨೩೬ (ಕ್ರಿಸ್ತಾಬ್ದ ೧೩೧೪) ರ ಸುಮಾರಿನಲ್ಲಿ ವೀರ ಚಂಪನೆಂಬ ಚೋಳರಾಜನೊಬ್ಬ ನಿದ್ದನೆಂದು ತಿಳಿಯಬಂದಿದೆ. ಸಾಯಣ ಪರಾಜಿತನಾದ ಚಂಪನು ಈ ವೀರಚಂಪನ ಮೊಮ್ಮಗನಾಗಿದ್ದಿರಬಹುದು.*

ಮತ್ತೊಬ್ಬ ಸೋತ ದೊರೆ ಗರುಡನಗರದಾತನು :—

ಶ್ರೀಮತ್ಸಂಗಮಭೂಮಿಪಾಲ ಭವತಸ್ಸಂಗ್ರಾಮಲೀಲಾವಿಧೌ।
ಸಾಕ್ಷಾದಾಸ್ಥಿತಪುಣ್ಯಕೋಟಿಶಿಖರಸ್ಸಾಕ್ಷೀ ಹಿರಣ್ಯಾಂತಕಃ॥

ಈ ಪದ್ಯದ ಸಂಸ್ಕೃತ ವಿವರಣೆಯಲ್ಲಿ ಪದ್ಯದ ಸಂಗತಿಯು "ಗರುಡನಗರ ಸಮರ"ವೆಂದು ಹೇಳಿದೆ. ಈ ಪದ್ಯವೂ ಅದರ ವ್ಯಾಖ್ಯಾನವೂ ಅಸಮಗ್ರವಾಗಿವೆ. ಆದಕಾರಣ ಗರುಡನಗರವೆಂಬುದಾವುದೋ ತಿಳಿಯುವುದು ಕಷ್ಟ.

## —ರೂಪರಸಿಕತೆಗಳು—

ಇನ್ನು ಸಾಯಣರ ರೂಪ ರಸಿಕತೆಗಳನ್ನು ನೋಡೋಣ :—

ಅವಿಸ್ಮಿತಾನನಸರೋರುಹಮಾಯತಾಕ್ಷಂ ।
ಮಾಜಾನುಲಂಬಭುಜಮಪ್ರತಿಮಾನರೂಪಂ ॥
ಆಲೋಕ್ಯ ಸಾಯಣ ಭವಂತಮಮಂದಕಾಂತಿ ।
ಮಕ್ಷ್ಣೋರುಪೈತಿ ಫಲಮಾಯತಯೋರ್ಮೃಗಾಕ್ಷೀ ॥

* Mr. R. Narasimhacharya in the *Indian Antiquary* for February 1916, Vol. XLV, page 23-24.

[ಎಲೌ ಸಖಿಯೆ, ನಗುಮೊಗವುಳ್ಳವನೂ, ಅಗಲವಾದ ಕಣ್ಣುಳ್ಳವನೂ, ಆಜಾನುಬಾಹುವಾದವನೂ, ಅನುಪಮವಾದ ಸೌಂದರ್ಯವುಳ್ಳವನೂ, ವಿಶೇಷವಾದ ಬೆಡಗುಳ್ಳವನೂ ಆದ ಈ ಸಾಯಣನನ್ನು ನೋಡಿ ನನ್ನ ಅರಳಿದ ಕಣ್ಣುಗಳು ಸಾರ್ಥಕ ವಾದುವು.]

ಬಾಲೇ ವಲ್ಲಭಸಾಯಣಸ್ಯ ವಿಜಯಪ್ರಸ್ಥಾನವಾರ್ತಾ ಶ್ರುತಾ।
ವಕ್ತವ್ಯಂ ಸಖಿ ತಸ್ಯ ಯಾನಸಮಯಃ ಪ್ರಸ್ತಾವನೀಯೋ ನ ಮೇ॥
ಪ್ರಸ್ತಾವೇ ಸತಿ ಕಿಂ ಭವಿಷ್ಯತಿ ತದೇತ್ಯೇತನ್ನ ವಿಜ್ಞಾಯತೇ ।
ಯಾತ್ರಾಯಾಂ ವಿಜಯೋಽಸ್ತು ಯಾತು ಸುಮನಾಃ
ಸ್ವಾಪಾವಕಾಶೇ ಮಮ ॥

[ಸಂವಾದ :—"ಎಲೌ ಸಖಿ, ಪ್ರಿಯನಾದ ಸಾಯಣನು ದಿಗ್ವಿಜಯಕ್ಕಾಗಿ ಹೊರಡುವನೆಂದು ಕೇಳಿದೆ ; ಅದು ಯಾವಾಗ?" "ಅದನ್ನು ನಾನು ಹೇಳುವುದಕ್ಕಾಗದು." "ಹೇಳಿದರೆ ಏನಾದೀತು ?" "ಅದು ನನಗೆ ತಿಳಿಯದು." "ನನಗಂತೂ ಇನ್ನು ನಿದ್ದೆಗೆ ಅವಕಾಶವಾಯಿತು ; ಆತನು ಸಂತೋಷದಿಂದ ಹೋಗಿ ಯುದ್ಧದಲ್ಲಿ ಜಯಶಾಲಿಯಾಗಿ ಹಿಂದಿರುಗಿ ಬರಲಿ."]

ಶುದ್ಧಾಂತವಾಮನಯನಾಸು ಶುಚಿಸ್ಮಿತಾಸು ।
ವಾರಾಂಗನಾಸ್ವಪಿ ವಿಧತ್ಸ್ವ ವಿಹಾರವಾಂಛಾಂ ||
ಆರ್ಯೋಽಪಿ ಸನ್ ಸಚಿವಸಾಯಣಮತ್ಸಖೀಂ ತ್ವಂ ।
ಸ್ವಪ್ನೇಷು ಖೇದಯಸಿ ಸನ್ನಿಹಿತೋ ಮುಧೈವ ॥

[ಎಲೆ ಸಾಯಣ, ನೀನು ನಿನ್ನ ಅಂತಃಪುರದಲ್ಲಿರುವ ತಿಳಿನಗುವಿನ ಸುಂದರಿಯರಲ್ಲಿ ವಿಹರಿಸಲು ಮನಸ್ಸುಮಾಡು ; ವಾರ ನಾರಿಯರಲ್ಲಿ ಬೇಕಾದರೂ ಮನಸ್ಸು ಮಾಡು. ಆರ್ಯನಾದ ನೀನು ನನ್ನ ಸ್ನೇಹಿತೆಯ ಬಳಿಗೆ ಏಕೆ ಸ್ವಪ್ನದಲ್ಲಿ ಬಂದು ವೃಥಾ ಅವಳಿಗೆ ವ್ಯಥೆಯನ್ನುಂಟುಮಾಡುತ್ತಿರುವೆ ?]

ಕಿಮಯಂ ವಸಂತ ಸಮಯಃ
ಕಿಂ ವಾ ಸೋಮಃ ಕಿಮಂಗವಾನ್ಮದನಃ ।
ಸಾಯಣನಾಮಾ ಸಚಿವಃ
ಸತ್ಯಂ ಸಖಿ ನೈವ ಕೇವಲೋ ಮನುಜಃ ॥

[ಎಲೌ ಸಖಿ, ಸಾಯಣನೆಂಬ ಮಂತ್ರಿ ಯಾರು? ವಸಂತ ಋತುಪುರುಷನೋ ಅಥವಾ ಶರೀರಿಯಾದ ಮನ್ಮಥನೋ? ಈತನು ಬರಿಯ ಮನುಷ್ಯನೇನೋ ಅಲ್ಲ, ಇದು ದಿಟ.]

ಸೋಽಯಂ ಸಾಯಣ ಇತ್ಯಶೇಷಭುವನಪ್ರಖ್ಯಾತ ಪುಣ್ಯೋದಯಃ ।
ಶೃಂಗಾರಃ ಕಿಮು ಮೂರ್ತಿಮಾನ್ ವಿವಶಯನ್ ವಿಶ್ವಂ ಸ್ಮರೋ ವಾ
ವಿಭುಃ ॥

[ಸಮಸ್ತ ಲೋಕದಲ್ಲಿಯೂ ಪ್ರಸಿದ್ಧನಾದ ಈ ಪುಣ್ಯವಂತ ಸಾಯಣನು ಏನು ಮೂರ್ತೀಭವಿಸಿದ ಶೃಂಗಾರವೋ, ಅಥವಾ ಲೋಕವನ್ನು ವಶಪಡಿಸಿಕೊಳ್ಳುವುದಕ್ಕೆಂದು ಬಂದ ಮನ್ಮಥನೋ!]

ಆಯೋಧನೇಷ್ವಹಿತಕುಂತಕೃಪಾಣಬಾಣೈ ।
ರಾಹನ್ಯಮಾನಮಪಿ ಯನ್ನ ವಿಭಿನ್ನಮಾಸೀತ್ ।
ತಸ್ಯೈವ ಸಾಯಣಪತೇರ್ಹೃದಯಂ ವಿಲಗ್ನಂ ।
ತನ್ವ್ಯಾಸ್ತ್ವಪಾಯತಿಮತಾ ನಯನಾಂಚಲೇನ ॥

[ಏನಿದು, ಎಲೆ ತನ್ವೀ, ಯುದ್ಧದಲ್ಲಿ ಶತ್ರುಗಳ ಕುಂತ ಕತ್ತಿ ಬಾಣಗಳಿಂದ ಪೆಟ್ಟು ತಿಂದೂ ಒಡೆಯದೆ ಇರುವ ಈ ಸಾಯಣಹೃದಯವು ನಿನ್ನ ಕಡೆಗಣ್ಣಿಂದ ಕರಗುತ್ತಿದೆ!]

ಯಂ ತತ್ತ್ವಾರ್ಥಬುಭುತ್ಸಯೈವ ಯತಯೋ ಪ್ರಾಶ್ರಿತ್ಯ ವಿಜ್ಞಾನಿನಂ ।
ವರ್ತಂತೇ ಪರಮಾತ್ಮಬೋಧಸುಖಿನಸ್ಸೋಽಯಂ ವಿಭುಸ್ಸಾಯಣಃ ।
ಕಾಂತಃ ಕಿಂ ಪ್ರತಿಪಾದ್ಯತಾಂ ಪ್ರಿಯತಮಾಸಂಭೋಗಲೀಲಾಪರಃ ।
ಶೃಂಗಾರೀ ಕಿಮು ಕಾಮತಃ ಕೃತಮತಿಃ ಸಂಗೀತಸಾಹಿತ್ಯಯೋಃ ॥

[ಯತಿಗಳು ತತ್ತ್ವರಹಸ್ಯಗಳನ್ನು ತಿಳಿದುಕೊಳ್ಳುವುದಕ್ಕಾಗಿ ಯಾವಾತನನ್ನು ಆಶ್ರಯಿಸಿ ಆತ್ಮಜ್ಞಾನದಿಂದ ಸಂತುಷ್ಟರಾಗುತ್ತಾರೆಯೋ ಅಂಥಾ ಈ ಸಾಯಣ ಪ್ರಭುವು ಪ್ರೇಮಿಯೆ, ಭೋಗವಿಲಾಸಗಳಲ್ಲಿ ಆಸಕ್ತಿಯುಳ್ಳವನೆ, ಸರಸಿಯೆ, ಸಂಗೀತ ಸಾಹಿತ್ಯಗಳಲ್ಲಿ ಅಭಿರುಚಿಯುಳ್ಳವನೆ? ಇದನ್ನು ಹೇಳೋಣವಾಗಲಿ]

ಈ ಬಗೆಯ ಶೃಂಗಾರರಸ ಪ್ರಧಾನವಾದ ಸಾಯಣಪ್ರಶಂಸಾ ಪದ್ಯಗಳು "ಅಲಂಕಾರಸುಧಾನಿಧಿ"ಯಲ್ಲಿ ಹತ್ತಾರಿವೆ. ಆದರೆ ಅದರಿಂದ ಸಾಯಣರು ವಿಷಯಸುಖ ಲಂಪಟರಾಗಿದ್ದವರೆಂದು ನಾವು ಭಾವಿಸಲಾಗದು. ಅವರು ಸ್ಫುರದ್ರೂಪವುಳ್ಳವರೂ, ರಸಿಕರೂ, ಸಂಗೀತಾದಿ ಲಲಿತಕಲಾಪ್ರಿಯರೂ ಆಗಿದ್ದಾಗ್ಯೂ, ಗಾರ್ಹಸ್ಥ್ಯವ್ರತದಿಂದ ಅವರು ತಪ್ಪಿದವರೆಷ್ಟುಮಾತ್ರವೂ ಅಲ್ಲವೆಂದು ಅನೇಕ ಪದ್ಯಗಳು ಸ್ಪಷ್ಟವಾಗಿ ಹೇಳುತ್ತವೆ.—

ತಸ್ಮಿನ್ ಗತೇ ಯೌವನಚಿತ್ತಚೋರೇ ।
ತನ್ಮಾರ್ಗಮೇವಾಲಿ ಸವಿಕ್ಷಸೇ ತ್ವಂ ।
ಅನೇನ ಮುಗ್ಧೇ ವಿಹರಿಷ್ಯಸೇ ಕಿಂ ।
ಸ್ವದಾರನಿಷ್ಠೋ ನನು ಸಾಯಣೋಯಂ ॥

[ಎಲೌ ಮುಗ್ಧೆ, ನಿನ್ನ ಪ್ರಾಯದ ಮನಸ್ಸನ್ನು ಆತನು ಕದ್ದೊಯ್ದನೆಂದು ಆತನ ದಾರಿಯನ್ನೇ ನೋಡುತ್ತಿರುವೆ. ಅದರಿಂದ ನೀನು ಸುಖಪಡುವಂತಾಗುವುದೆ? ಆ ಸಾಯಣನು ತನ್ನ ಪತ್ನಿಯಲ್ಲಿಯೇ ಅನುರಕ್ತನಾದವನಲ್ಲವೆ?]

ರಂಭೇ ಕಿಂನ್ವಿದಮದ್ಭುತಂ ನವವಧೂವೇಷಗ್ರಹಾರಂಭಣಂ ।
ದೃಷ್ಟಂ ಕಿನ್ನು ತಿಲೋತ್ತಮೇ ನಗಣಯತ್ಯಸ್ಮಾನ್ ಸದಾ ಸಾಯಣಃ ।
ಏನಂ ವಂಚಯಿತುಂ ರಣಾಂಗಣಗತಂ ವೇಷೋಯಮಂಗೀಕೃತಃ ।
ಸಾಧ್ವೇತತ್ಸಮನುಷ್ಠಿತಂ ಸಖಿ ತದಪ್ಯೇಷಃ ಸ್ವದಾರೈಕಧೀಃ ॥

[ಇದು ರಂಭೆ—ತಿಲೋತ್ತಮೆಯರ ಸಂವಾದ :

ತಿಲೋತ್ತಮೆ :—ಎಲೆ ರಂಭೆ, ಇದೇನು ಹೊಸ ಮದುವಣಗಿತ್ತಿಯ ವೇಷವನ್ನು ಹಾಕಿಕೊಳ್ಳಲಾರಂಭಿಸಿರುವೆ?

ರಂಭೆ :—ತಿಲೋತ್ತಮೆ, ಆ ಸಾಯಣನು ನಮ್ಮನ್ನು ಯಾವಾಗಲೂ ಲೆಕ್ಕಕ್ಕೆ ತೆಗೆದುಕೊಳ್ಳುವುದೇ ಇಲ್ಲವಲ್ಲ! ಅದನ್ನು ನೀನು ನೋಡಿಲ್ಲವೇ? ಈಗ ಯುದ್ಧಾಂಗಣಕ್ಕೆ ಹೋಗಿರುವ ಆತನ ಬಳಿಗೆ ಹೋಗಿ ಅಲ್ಲಿಯಾದರೂ ಆತನನ್ನು ವಂಚಿಸುವುದಕ್ಕೆಂದು ಈ ನನ್ನ ವೇಷ.

ತಿಲೋತ್ತಮೆ :—ಸಖಿ, ಇದೇನೋ ಸರಿ; ಆದರೆ ಆತನು ತನ್ನ ಹೆಂಡತಿಯೊಬ್ಬಳಲ್ಲೇ ಮನಸ್ಸಿಟ್ಟರತಕ್ಕವನು.]

ಹಾಗಾದರೆ ರಸಿಕರಾದ ಸಾಯಣಾಚಾರ್ಯರು ತಮ್ಮ ಭಾರ್ಯೆಯ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿದ್ದರು? ಇಲ್ಲಿ ನೋಡೋಣ:—

ಸಮರವಿಜಯವೃದ್ಧೌ ಸಂಗಮೇಂದ್ರೇಣ ದತ್ತಾಂ ।
ಕಲಯ ಮಣಿವಿಭೂಷಾಂ ಕಾತರೇ ಕಂಠಪಾಶೇ ।
ಕಿಮಿಹ ಮಲಿನವಾಸಾಃ ಕ್ಷೌಮಮೇತದ್ಗೃಹಾಣೇ ।
ತ್ಯನುನಯತಿ ಸರೋಷಾಂ ಪ್ರೇಯಸೀಂ ಸಾಯಣಾರ್ಯಃ ॥

[ನಮಗೆ ಯುದ್ಧದಲ್ಲಿ ಜಯಪ್ರಾಪ್ತಿಯಾದಾಗ ಸಂಗಮರಾಜನು ಸಂತೋಷದಿಂದ ಕೊಟ್ಟ ರತ್ನಹಾರವನ್ನು ಕೊರಳಲ್ಲಿ ಧರಿಸಿಕೋ; ಆ ಮಾಸಿದ ಬಟ್ಟೆಯೇಕೆ? ಈ ದುಕೂಲವನ್ನುಟ್ಟುಕೋ—ಹೀಗೆಂದು ಹೇಳುತ್ತಾ ಸಾಯಣಾಚಾರ್ಯರು ತಮ್ಮ ಕೋಪಗೊಂಡ ಹೆಂಡತಿಯನ್ನು ಸಮಾಧಾನಪಡಿಸುತ್ತಿದ್ದರು.]

## —ಗೃಹಚಿತ್ರ—

ಅವರ ದಿನಚರ್ಯೆ ಹೇಗಿತ್ತು?

ಮಾತರ್ಮಾನಯ ಪಾದಪದ್ಮರಜಸಾ ಮೌಳೀ ಮಮಾಶ್ಲಿಷ್ಯತಾಂ।
ತಾತ ತ್ವಂ ಚ ಸಮೇಧಯಾಲಕಗತಾಂ ಪ್ರೀತಿಂ ನಖಜ್ಯೋತ್ಸ್ನಯಾ।
ಅಂಬ ತ್ವಂ ಕಪಿಲೇ ಗೃಹಾಣ ಯವಸಗ್ರಾಸಾನ್ಮಮಾರ್ಘ್ಯಾನುಗಾನ್।
ಇತ್ಯಾರಾಧಯತೀಶ್ವರಂ ಗುರುಜನಂ ಗಾಂ ಚಾನ್ವಹಂ ಸಾಯಣಃ ॥

[ತಾಯೆ, ನಿನ್ನ ಪಾದಧೂಳಿಯು ನನ್ನ ತಲೆಯನ್ನಪ್ಪಿಕೊಳ್ಳಲಿ; ತಂದೆ, ನಿನ್ನ ಪಾದಾಂಗುಷ್ಠದ ಉಗುರಿನ ಬೆಳಕು ನನ್ನ ಮುಂಗೂದಲನ್ನು ಪ್ರೀತಿಯಿಂದ ಬೆಳಗಲಿ. ಅಮ್ಮ ಗೋದೇವಿ, ಈ ನನ್ನ ಅರ್ಘ್ಯಪೂರ್ವಕವಾದ ಜವೆಯನ್ನದ ತುತ್ತನ್ನು ಸ್ವೀಕರಿಸು—ಹೀಗೆಂಬ ರೀತಿಯಲ್ಲಿ ಸಾಯಣನು ಪ್ರತಿದಿನವೂ ದೇವರನ್ನೂ, ಗುರುಜನರನ್ನೂ, ಗೋಮಾತೆಯನ್ನೂ ಆರಾಧಿಸುತ್ತಾನೆ.]

ಸಾಯಣರು ವ್ರತ ಯಾಗಗಳನ್ನೂ ಮಾಡುತ್ತಿದ್ದರು:—

"ಶ್ರೀಸಾಯಣೇನ ಸತತಂ ಸವನಕ್ರಿಯಾಭಿಃ "

ಈ ಅರ್ಥದ ವಾಕ್ಯಗಳು ಅನೇಕವಾಗಿವೆ.

ಸಾಯಣಾಚಾರ್ಯರ ಗೃಹಸುಖಗಳೆಂತಹುವು?

ವತ್ಸ ವ್ಯಂಜಯ ಕಂಪಣ ವ್ಯಸನಿನಃ ಸಂಗೀತಶಾಸ್ತ್ರೇ ತವ ।
ಪ್ರೌಢಿಂ ಮಾಯಣ ಗದ್ಯಪದ್ಯರಚನಾಪಾಂಡಿತ್ಯಮುನ್ಮುದ್ರಯ ।
ಶಿಕ್ಷಾಂ ದರ್ಶಯ ಶಿಂಗಣ ಕ್ರಮಜಟಾಚರ್ಚಾಸು ವೇದೇಷ್ವಿತಿ ।
ಸ್ವಾನ್ ಪುತ್ರಾನುಪಲಾಲಯನ್ ಗೃಹಗತಸ್ಸಂಮೋದತೇ ಸಾಯಣಃ॥

[ಸಾಯಣನು ಮನೆಗೆ ಬಂದ ಬಳಿಕ ತನ್ನ ಕುಮಾರರನ್ನು ಕುರಿತು—ಕಂಪಣ್ಣ, ಸಂಗೀತಶಾಸ್ತ್ರಕ್ಕೆ ಮನಸ್ಸು ತೆತ್ತಿರುವ ನೀನು ಈಗ ನಿನ್ನ ಗಾನಪ್ರೌಢಿಮೆಯನ್ನು ಪ್ರಕಟಗೊಳಿಸು; ಮಾಯಣ್ಣ, ನೀನೀಗ ನಿನ್ನ ಕವಿತ್ವಕುಶಲತೆಯನ್ನು ಪ್ರಕಾಶಪಡಿಸು, ಶಿಂಗಣ್ಣ, ಘನಜಟೆಗಳ ಕ್ರಮದಲ್ಲಿ ವೇದಗಾನಮಾಡಿ ನಿನ್ನ ಅಧ್ಯಯನ ನಿಪುಣತೆಯನ್ನು ತೋರಿಸು—ಹೀಗೆಂದು ಹೇಳಿ (ಅವರವರ ವಿದ್ಯಾಪ್ರದರ್ಶನದಲ್ಲಿ) ಅವರನ್ನು ಪ್ರೋತ್ಸಾಹಪಡಿಸುತ್ತಾ ತಾನು ಸಂತೋಷಪಡುತ್ತಿರುವನು.]

ಕ್ವಚಿದ್ವ್ಯಾಖ್ಯಾತೄಣಾಂ ವಿವಿಧಪದವಾಕ್ಯಾದಿಪದವೀ ।
ವಿಮರ್ಶಃ ಕಾವ್ಯಾನಾಂ ಕ್ವಚನ ಸರಸಾನಾಂ ವಿರಚಿತಂ ।
ಕ್ವಚಿದ್ವೀಣಾವಾದವ್ಯಸನಿ ಶಿಶುಶಿಕ್ಷಾವಿಲಸಿತಂ ।
ಕಥಂ ವಾಚಾಂ ಭೂಮಿರ್ಭವತಿ ಭವನಂ ಸಾಯಣವಿಭೋಃ ॥

[ಒಂದು ಕಡೆ ಶಾಸ್ತ್ರಾರ್ಥಗಳನ್ನು ಹೇಳುವವರ ವಾಕ್ಯಧೋರಣೆ; ಇನ್ನೊಂದು ಕಡೆ ಸರಸ ಕವಿತೆಗಳ ರಚನೆಯ ವಾಕ್ಪ್ರವಾಹ; ಮತ್ತೊಂದು ಕಡೆ ವೀಣೆಯನ್ನಭ್ಯಾಸ ಮಾಡುತ್ತಿರುವ ಮಕ್ಕಳ ಮಧುರ ಧ್ವನಿ —ಹೀಗಿರುವ ಸಾಯಣಗೃಹವನ್ನು ಮಾತಿನಿಂದ ವರ್ಣನೆ ಮಾಡುವುದು ಹೇಗಾದೀತು?]

ಸಾಯಣರು ತಮ್ಮ ಸಾರಸ್ವತ ಸಮಾರಂಭಕ್ಕಾಗಿ ನಾನಾ ದೇಶಗಳಿಂದ ನೂರಾರು ಮಂದಿ ಘನ ವಿದ್ವಾಂಸರನ್ನು ಕರೆಯಿಸಿದ್ದಿರಬೇಕು. ತಮ್ಮ ಕಾಲವನ್ನು ವಿಶೇಷವಾಗಿ ಅವರುಗಳ ಗೋಷ್ಠಿಯಲ್ಲಿ ಶಾಸ್ತ್ರಾರ್ಥ ವಿಚಾರಣೆಗೆ ವಿನಿಯೋಗಿಸಿ, ಅವರನ್ನು ವಿವಿಧ ಪ್ರಬಂಧ

ಸಿರ್ವತಿಗೆ ಪ್ರೇರಣೆಗೊಳಿಸಿ ಪ್ರೋತ್ಸಾಹಿಸಿ ತಿದ್ದುತ್ತಿದ್ದುದರಿಂದಲೇ ಅಲ್ಲವೆ ಆ ಕಾಲದಲ್ಲಿ ಆರ್ಯವಿದ್ಯಾ ಧರ್ಮಗಳು ಅಷ್ಟು ಮಹತ್ತರವಾಗಿ ಪುನರುಜ್ಜೀವಿಸುವಂತೆ ಆದುದು? ಆ ವಿದ್ವತ್ಪರಿಷತ್ತಿನ ಮಹಿಮೆಯ ಕಲ್ಪನೆಯು ಈ ಕೆಳಗಿನ ಪದ್ಯದಿಂದ ನಮ್ಮ ಮನಸ್ಸಿಗೆ ಬರುತ್ತದೆ:—

ಗಂಗಾಯಾಂ ನಿವಸಂತಿ ಯೇ ಮುನಿವರಾಃ ಶ್ರೀಸಾಯಣಾರ್ಯ
ಪ್ರಭೋ।
ತೇಽಪಿ ತ್ವತ್ಕ ಸಭಾಸ್ಥಿತೈರ್ವಿದಧತೇ ಸ್ಪರ್ಧಾಂ ನ ಪುಣ್ಯಾಧಿಕೈಃ ॥
ಏತೇ ತೇ ದ್ವಿಜಪುಂಗವಾಸ್ತ್ರಿಚತುರಾನ್ವೇದಾನ್ ಷಡಂಗಾನ್ವಿತಾನ್।
ವ್ಯಾಖ್ಯಾತುಂ ಪ್ರಭವಃ ಪೃಥಕ್ ಪೃಥಗಿತೋ ವೇದಾಂತ ವಿದ್ಯಾ ಅಪಿ॥

[ಎಲೈ ಸಾಯಣಪ್ರಭುವೆ, ಗಂಗಾತೀರದಲ್ಲಿ ತಪಸ್ಸು ಮಾಡುತ್ತಿರುವ ಮುನಿಶ್ರೇಷ್ಠರು ಕೂಡ ನಿನ್ನ ಸಭೆಯಲ್ಲಿರುವ ಪುಣ್ಯಶೀಲರಾದ ಬ್ರಾಹ್ಮಣೋತ್ತಮರೊಡನೆ ಸಂಥಮಾಡಲಾರರು. ಈ ಬ್ರಾಹ್ಮಣರು ಆ ಮುನಿಗಳಿಂದಲೇ ವೇದಾಂತವನ್ನು ಕಲಿತವರಾದಾಗ್ಗೂ, ತಾವು ಒಬ್ಬೊಬ್ಬರೇ ಬೇರೆಬೇರೆಯಾಗಿ ಮೂರು ನಾಲ್ಕು ವೇದಗಳಿಗೂ ಷಡಂಗ ಸಮೇತವಾಗಿ ವ್ಯಾಖ್ಯಾನ ಬರೆಯಲು ಅಧಿಕಾರಿಗಳಾಗಿರುತ್ತಾರೆ.]

ಸಾಯಣರು ದೀನರಕ್ಷಕರೂ ಪರೋಪಕಾರ ನಿರತರೂ ಆಗಿದ್ದರು:—

ದೀನಾನಾಮುಭಯಾರ್ಥಿನಾಂ ಚ ಶರಣಂ
ಶ್ರೀಸಾಯಣಾರ್ಯಾತ್ಪರೇ ॥ ....

[ದಿಕ್ಕಿಲ್ಲದವರಿಗೂ ಅಭಯವನ್ನು ಬೇಡುವವರಿಗೂ ಸಾಯಣರು ಗತಿಯಾಗಿದ್ದರು .......]

ಯುದ್ಧೇಷ್ವಾಯುಧಸಾದರಿರ್ಪಿತರಣೇ
ಕ್ಷೋಣೀತಲಂ ವಿಪ್ರಸಾತ್ ।
ರಾಮೇಣ ದ್ವಿಜಪುಂಗವೇನ ರಚಿತಂ
ಶ್ರೀಸಾಯಣಾರ್ಯೇಣ ಚ ॥

[ಪರಶುರಾಮನು ಯುದ್ಧದಲ್ಲಿ ಶತ್ರುಗಳನ್ನು ಆಯುಧಕ್ಕೆ ವಶರನ್ನಾಗಿ ಮಾಡಿಕೊಂಡನು; ದಾನದಲ್ಲಿ ಭೂಮಿಯನ್ನು ಬ್ರಾಹ್ಮಣರಿಗೆ ವಶವನ್ನಾಗಿ ಮಾಡಿದನು; ಶ್ರೀ ಸಾಯಣಾಚಾರ್ಯರೂ ಹಾಗೆಯೇ ಮಾಡಿರುವರು.]

"ಧಾತುವೃತ್ತಿ" ಪೀಠಿಕೆಯಲ್ಲಿಯ ಒಂದು ಶ್ಲೋಕವೂ ಇದೇ ಅರ್ಥವನ್ನು ಕೊಡುತ್ತದೆ:—

ಯೇನ ನಿರ್ವಾಯತೇ ನಿತ್ಯಂ ಧನ್ಯೈರಾಯೋಧನೈರಪಿ।
ಶ್ರೇಯಸೇ ಯಶಸೇ ದಾನಂ ವಿದುಷಾಂ ವಿದ್ವಿಷಾಮಪಿ॥

[ಸಾಯಣನಿಂದ ಪ್ರತಿನಿತ್ಯವೂ ಕ್ರಮವಾಗಿ ಶ್ರೇಯಸ್ಸಿಗಾಗಿಯೂ, ಯಶಸ್ಸಿಗಾಗಿಯೂ, ವಿದ್ವಾಂಸರಿಗೂ ವಿದ್ವೇಷಿಗಳಿಗೂ, ದ್ರವ್ಯರೂಪದಲ್ಲಿಯೂ ಯುದ್ಧರೂಪದಲ್ಲಿಯೂ ದಾನಮಾಡಲ್ಪಡುತ್ತದೆ.]

ಹೀಗೆ ನಾನಾ ಬಗೆಯಲ್ಲಿ ನೋಡಿದರೂ ಅಸಾಧಾರಣವಾದ ಶುಭಲಕ್ಷಣ ಸಮ್ಮೇಳನದಿಂದ ಯೋಗಶಾಲಿಯಾಗಿದ್ದ ಸಾಯಣಾಚಾರ್ಯರನ್ನು ಕವಿಗಳು ಮಾತ್ರವೇ ಅಲ್ಲದೆ ಸಾಮಾನ್ಯ ಜನರೂ ಈ ಕೆಳಗಿನ ಪದ್ಯಗಳಂತೆ ಪ್ರಶಂಸಿಸುತ್ತಿದ್ದುದರಲ್ಲಿ ಆಶ್ಚರ್ಯವೇನಿದೆ?

ಮೇರುಣಾ ಸದೃಶಂ ರೂಪಂ ಸತ್ಯಂ ಸಾಯಣಮಂತ್ರಿಣಃ ।
ತವ ರೂಪಾನುರೂಪಾಚಾರ ಆಚಾರ ಇವ ತೇ ಯಶಃ ॥

ಪಾವಕಸ್ಯ ಯಥಾ ತೇಜಃ ಪ್ರಸಾದಃ ಶಶಿನೋ ಯಥಾ ।
ತಥಾ ತವಾಪಿ ಮನ್ಯನ್ತೇ ಸಾಯಣಾರ್ಯ ಮನೀಷಿಣಃ ॥

ತ್ಯಾಗೇ ಭೋಗೇ ತಥಾಚಾರೇಷ್ವಾಹವೇಷು ಹವೇಷು ಚ ।
ಸಾಯಣಾರ್ಯಸಮೋ ಲೋಕೇ ಸಾಯಣಾರ್ಯೋ ನ ಸಂಶಯಃ॥

[ಸಾಯಣ ಮಂತ್ರಿಯದು ಮೇರುಪರ್ವತದಂಥ ರೂಪ; ಆ ರೂಪಕ್ಕೆ ತಕ್ಕ ನಡೆವಳಿಕೆ; ಆ ನಡೆವಳಿಕೆಗೆ ತಕ್ಕ ಕೀರ್ತಿ.

ಎಲೈ ಸಾಯಣಾರ್ಯ, ಯಜ್ಞೇಶ್ವರನ ತೇಜಸ್ಸೂ ಚಂದ್ರನ ತಂಬೆಳಕೂ ಇರುವಂತೆ ನಿನ್ನ ಪ್ರಭಾವವು ಇರುವುದೆಂದು ವಿವೇಕಶಾಲಿಗಳು ತಿಳಿದಿದ್ದಾರೆ.

ತ್ಯಾಗದಲ್ಲಿಯೂ, ಭೋಗದಲ್ಲಿಯೂ, ನಡತೆಯಲ್ಲಿಯೂ, ಯುದ್ಧದಲ್ಲಿಯೂ ಯಾಗಾನುಷ್ಠಾನದಲ್ಲಿಯೂ ಸಹ ಈ ಲೋಕದಲ್ಲಿ ಸಾಯಣಾರ್ಯರಿಗೆ ಸಮನಾದವರು ಸಾಯಣಾರ್ಯರೊಬ್ಬರಲ್ಲದೆ ಬೇರೆ ಯಾರೂ ಇಲ್ಲ.]

## ಆ ಕಾಲದ ಸಾರಸ್ವತ ಸಹಕಾರ

ಇನ್ನು ಸಾಯಣ ಕೃತಗಳೆಂದೆನ್ನಿಸಿಕೊಂಡಿರುವ ಗ್ರಂಥಗಳನ್ನು ಕುರಿತು ಸಂಕ್ಷೇಪವಾಗಿ ಪ್ರಸ್ತಾವಿಸಬಹುದು. ಈ ಭಾಗದಲ್ಲಿ ಮೊದಲು ಆಗಬೇಕಾದ ವಿಚಾರವು ಆ ಗ್ರಂಥಗಳ ಕರ್ತೃತ್ವವನ್ನು ಕುರಿತುದು (ಹಿಂದೆ ಪುಟ ೮೭, ೯೨ನ್ನು ನೋಡಿರಿ).

ಮಾಧವ ಸಾಯಣ ನಾಮಾಂಕಿತವಾಗಿ ನಮಗೆ ಬಂದಿರುವ ವಿಪುಲ ಗ್ರಂಥ ರಾಶಿಯಲ್ಲಿ ಪ್ರತಿಯೊಂದೂ ಸಮಗ್ರವಾಗಿ ಮಾಧವ-ವಿದ್ಯಾರಣ್ಯರ, ಅಥವಾ ಸಾಯಣಾಚಾರ್ಯರ, ಸ್ವಂತ ಕೈಯಿಂದಲೇ ನಿರ್ಮಿತವಾದುದೆಂದು ನಾವು ಭಾವಿಸಬೇಕಾದುದಿಲ್ಲ. ಅವರಿಬ್ಬರೂ ಅಪ್ರತಿಮ ಪಂಡಿತರು ಹೌದು ; ಅದ್ಭುತ ಲೇಖನ ಸಾಮರ್ಥ್ಯವುಳ್ಳವರೂ ಹೌದು ; ಕೆಲವು ಪ್ರಸಿದ್ಧ ಗ್ರಂಥಗಳು ಆದ್ಯಂತವಾಗಿಯೂ, ಇನ್ನು ಕೆಲವು ಅಷ್ಟಿಷ್ಟು ಭಾಗವಾಗಿಯಾದರೂ, ಅವರುಗಳ ಸ್ವಹಸ್ತ ಲೇಖನಗಳೇ ಎಂಬುದೂ ಒಪ್ಪಬಹುದಾದುದೇ ಸರಿ. ಆದರೆ ಮತ್ತೆ ಕೆಲವು ಗ್ರಂಥಗಳು ಅವರ ಹೆಸರುಗಳಿಂದ ಪ್ರಸಿದ್ಧಗಳಾಗಿದ್ದರೂ, ಅವು ಸಂಪೂರ್ಣವಾಗಲ್ಲದಿದ್ದರೆ ಬಹುಭಾಗದಲ್ಲಾದರೂ ಇತರರ ಕೈಕೆಲಸವಾಗಿದ್ದಿರಬೇಕೆಂದು ಊಹಿಸಲು ಪ್ರಬಲಗಳಾದ ಕಾರಣಗಳಿವೆ.

ಮಾಧವ-ವಿದ್ಯಾರಣ್ಯರೂ ಭಾರತೀತೀರ್ಥರೂ ಸಾರಸ್ವತ ಕ್ಷೇತ್ರದಲ್ಲಿ ಸಹೋದ್ಯೋಗಿಗಳಾಗಿದ್ದುದನ್ನು ಹಿಂದೆ ನೋಡಿದ್ದೇವೆ (ಪುಟ ೫೭–೫೮). ಮೀಮಾಂಸಾ ಶಾಸ್ತ್ರದ ಪೂರ್ವ ಭಾಗವನ್ನು ಮಾಧವ-ವಿದ್ಯಾರಣ್ಯರೂ, ಉತ್ತರ ಭಾಗವನ್ನು ಭಾರತೀತೀರ್ಥರೂ ನ್ಯಾಯಮಾಲಾ ರೂಪದಲ್ಲಿ ವಿವರಿಸಿದರು. ''ವೇದಾಂತಪಂಚದಶಿ''ಯಲ್ಲಿ ಇಬ್ಬರು ಬರೆದ ಪ್ರಕರಣಗಳೂ ಸೇರಿವೆ. ಆದರೆ ಆ ಇಬ್ಬರಲ್ಲಿ ಮಾಧವ-ವಿದ್ಯಾರಣ್ಯರು ಬಹು ವಿಧಗಳಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿದ್ದರಾಗಿ, ಬಹುಶಃ ಆ ಕಾರಣದಿಂದ ಅವರ ನಾಮಧೇಯವನ್ನೇ ಜನರು ಅವರ ಸಹೋದ್ಯೋಗಿಗಳ ಕೃತಿಗಳಿಗೂ ಆರೋಪಿಸುತ್ತ ಬಂದಿರಬೇಕು.

ಅವರ ರಾಜಕೀಯ ಪದವಿಯನ್ನೂ, ಅವರ ಸಕಲ ಶಾಸ್ತ್ರ ನಿಷ್ಣಾತತೆಯನ್ನೂ, ಮೇಲಾಗಿ ಅವರ ಧರ್ಮಪೀಠ ಸಮುನ್ನತಿಯನ್ನೂ ಗೌರವಿಸಿ, ಇತರ ಪಂಡಿತರೂ ತಾವು ಬರೆದ ಪ್ರಬಂಧಗಳನ್ನು ಅವರಿಗೆ ಅಂಕಿತ ಮಾಡಿರಬಹುದು; ಅಥವಾ ಅವರ ಪ್ರೇರಣೆಯಿಂದಲೂ, ಪ್ರೋತ್ಸಾಹದಿಂದಲೂ, ಅನುವರ್ತನೆಯಿಂದಲೂ ಗ್ರಂಥ ರಚನೆಗೆ ತೊಡಗಿ, ಆ ಗ್ರಂಥಗಳಿಗೆ ಮಹಾಜನರ ಪುರಸ್ಕಾರವನ್ನು ಸಂಪಾದಿಸಿ ಕೊಡುವುದಕ್ಕೆಂದು ಅವರ ಹೆಸರನ್ನು ಕೊಟ್ಟಿರಬಹುದು. ಹೀಗೆ ನಾನಾ ಕಾರಣಗಳಿಂದ ಮಾಧವ-ವಿದ್ಯಾರಣ್ಯ ನಾಮಾಂಕಿತಗಳಾಗಿರುವ ಗ್ರಂಥಗಳಲ್ಲಿ ಆಂಗಿರಸ ಗೋತ್ರದ ಮಾಧವಾಮಾತ್ಯನು ಬರೆದ "ಸೂತ ಸಂಹಿತಾವ್ಯಾಖ್ಯೆ"ಯೊಂದು. (ಇದನ್ನು ಕುರಿತು ಮರಳಿ ಪ್ರಸ್ತಾವಿಸ ಬೇಕಾದೀತು.) ಮಾಧವೀಯವೆನಿಸಿರುವ "ಶಂಕರವಿಜಯ"ವೊಂದು.

ಈ ಸಿದ್ಧಾಂತಕ್ಕೆ ಸಾಯಣಾಚಾರ್ಯರೇ ದೊಡ್ಡ ದೃಷ್ಟಾಂತವನ್ನೊದಗಿಸಿದ್ದಾರೆ. ಅವರ ವೇದಭಾಷ್ಯದಲ್ಲಿ ಅವರೇ

"ಮಾಧವೀಯೋ ವೇದಾರ್ಥಪ್ರಕಾಶೇ"

ಎಂದು ಪ್ರತಿಯೊಂದು ಪ್ರಪಾಠಕದ ಕಡೆಯಲ್ಲಿಯೂ ಹೇಳಿದ್ದಾರೆ. ಅವರ "ಧಾತುವೃತ್ತಿ"ಯಲ್ಲಿ

"ಆಖ್ಯಯಾ ಮಾಧವೀಯೇಯಂ ಧಾತುವೃತ್ತಿರ್ವಿರಚ್ಯತೇ"

ಎಂದು ಹೇಳಿದ್ದಾರೆ. ಜಗನ್ಮಾನ್ಯರೂ ತಮಗೆ ಪಿತೃವತ್ಪೂಜ್ಯರೂ ಆದ ಅಣ್ಣಂದಿರ ವಿಷಯದಲ್ಲಿ ಸಾಯಣರು ಹೀಗೆ ಭಕ್ತಿ ಮಮತೆಗಳನ್ನು ತೋರಿಸಿರುವುದು ಅಂತಹ ಮಹನೀಯರಲ್ಲಿ ಸಹಜ ಧರ್ಮವೇ ಅಲ್ಲವೆ? ಹೆಚ್ಚು ಮಾತೇಕೆ? ಸಾರಸ್ವತೋದ್ಯೋಗದಲ್ಲಿ ಆ ಅಣ್ಣತಮ್ಮಂದಿರು ಸಂಪೂರ್ಣವಾದ ಅಭೇದ ಭಾವನೆಯಿಂದ ನಡೆದುಕೊಳ್ಳುತ್ತಿದ್ದರು. ಇದಕ್ಕೆ ವೇದಭಾಷ್ಯದಲ್ಲಿಯೇ ನಿದರ್ಶನವು ದೊರೆಯುತ್ತದೆ. ಸಾಯಣರು ಭಾಷ್ಯಮಾಡಿರುವುದು ವೇದದ ಕರ್ಮಕಾಂಡಕ್ಕೆ. ಈ ಕಾಂಡದ ಮಂತ್ರಗಳು ಯಜ್ಞಾದಿ ಕರ್ಮಗಳಿಗೂ ತದುಪಾಸ್ಯರಾದ ದೇವತೆಗಳಿಗೂ ಸಂಬಂಧಪಟ್ಟುವು. ಈ ಮಂತ್ರಗಳ ಉಪಯೋಗ ವಿಧಾನವನ್ನೂ

ಸಾರ್ಥಕ್ಯವನ್ನೂ ವಿವರಿಸತಕ್ಕ ಶಾಸ್ತ್ರವೇ ಪೂರ್ವಮೀಮಾಂಸಾ ಶಾಸ್ತ್ರ. ಈ ಶಾಸ್ತ್ರದ ಸಂಬಂಧವಿಲ್ಲದೆ ವೇದ ಮಂತ್ರಗಳಿಗೆ ಅರ್ಥ ಹೇಳಲಾಗುವುದಿಲ್ಲ. ಸಾಯಣರು ಹೀಗೆ ಭಾಷ್ಯ ಪ್ರಸಂಗದಲ್ಲಿ ಪೂರ್ವಮೀಮಾಂಸಾ ಶಾಸ್ತ್ರದ ವಾಕ್ಯಗಳನ್ನು ಕೊಡಬೇಕಾಗಿ ಬಂದಾಗ ತಮ್ಮ ಜ್ಯೇಷ್ಠರಾದ ಮಾಧವ-ವಿದ್ಯಾರಣ್ಯರ "ಜೈಮಿನೀಯ ನ್ಯಾಯಮಾಲಾವಿಸ್ತರ"ದ ವಾಕ್ಯಗಳನ್ನೇ ತಮ್ಮ ಸ್ವಂತ ವಾಕ್ಯಗಳಂತೆ ಉದಾಹರಿಸಿದ್ದಾರೆ. ಒಂದು ಉದಾಹರಣೆಯನ್ನಿಲ್ಲಿ ಕೊಡುವೆವು:—ಯಜುಸ್ಸಂಹಿತೆಯ ಚತುರ್ಥ ಕಾಂಡದಲ್ಲಿರುವ ರುದ್ರಾಧ್ಯಾಯ ಭಾಗವಾದ ಚಮಕ ಮಂತ್ರಗಳಲ್ಲಿ, ವಸೋರ್ಧಾರಾನುವಾಕದ ಉಪಯೋಗ ವಿಧಾನವನ್ನು ತಿಳಿಸುವಾಗ, ಸಾಯಣರು

> "ಅಥ ಮೀಮಾಂಸಾ॥ ದ್ವಾದಶಾಧ್ಯಾಯಸ್ಯ ತೃತೀಯ ಪಾದೇ ಚಿಂತಿತಮ್"

ಎಂದು ಹೇಳಿ ಕೆಲವು ವಿವರಣ ವಾಕ್ಯಗಳನ್ನು ಕೊಟ್ಟಿದ್ದಾರೆ. ಈ ವಾಕ್ಯಗಳು "ಚ" "ತು" ತಪ್ಪದೆ ಮಾಧವ-ವಿದ್ಯಾರಣ್ಯರ "ಜೈಮಿನೀಯ ನ್ಯಾಯಮಾಲಾವಿಸ್ತರ"ದಿಂದ ಉದ್ಧೃತವಾದುವು.

ಇದನ್ನು ಚೌರ್ಯವೆಂದು ಹೇಳಲಾದೀತೆ? ಅದೇಕೆ, ಮಾಧವ-ವಿದ್ಯಾರಣ್ಯರೇ ತಮ್ಮ "ಕಾಲನಿರ್ಣಯ" ಪ್ರಬಂಧದಲ್ಲಿ, ಕಾಲನಿರೂಪಣ ಪ್ರಕರಣದಲ್ಲಿ, ಭಾರತೀತೀರ್ಥರ "ವೈಯಾಸಿಕ ನ್ಯಾಯಮಾಲಾ ವಿಸ್ತರ"ದಲ್ಲಿಯ ವಾಕ್ಯಗಳನ್ನು ತಮ್ಮ ಸ್ವಂತ ವಾಕ್ಯಗಳಂತೆ ಉದಾಹರಿಸಿದ್ದಾರೆ. ಇತರ ಕೆಲವು ಕಡೆಗಳಲ್ಲಿಯೂ ಹೀಗೆ ಮಾಡಿರುವಂತೆ ತೋರುತ್ತದೆ.

ಇದಕ್ಕಿಂತ ಹೆಚ್ಚಿನ ಸಂಗತಿಯೊಂದುಂಟು. "ಜೈಮಿನೀಯ" ಮತ್ತು "ವೈಯಾಸಿಕ" ನ್ಯಾಯಮಾಲೆಗಳೆರಡರ ಗ್ರಥನದಲ್ಲಿ ಕ್ರಮವಾಗಿ ಮಾಧವ-ವಿದ್ಯಾರಣ್ಯ ಭಾರತೀತೀರ್ಥರುಗಳಿಬ್ಬರು ಮಾತ್ರವೇ ಭಾಗಿಗಳಲ್ಲ. ಸಾಯಣರಿಗೂ ಅದರಲ್ಲಿ ಭಾಗವಿತ್ತೆಂದು ತೋರುತ್ತದೆ. ಶುಕ್ಲ ಯಜುರ್ವೇದದ ಕಾಣ್ವ ಸಂಹಿತಾ ಭಾಷ್ಯದಲ್ಲಿ ಅವರು ಹೀಗೆ ಹೇಳಿಕೊಂಡಿದ್ದಾರೆ:—

ಯೇ ಪೂರ್ವೋತ್ತರ ಮೀಮಾಂಸೇ ತೇ ವ್ಯಾಖ್ಯಾಯಾತಿ
ಸಂಗ್ರಹಾತ್ ।
ಕೃಪಾಳುಃ ಸಾಯಣಾಚಾರ್ಯೋ ವೇದಾರ್ಥಂ ವಕ್ತುಮು
ದ್ಯತಃ ॥
("ಕೃಪಾಳುಃ ಸಾಯಣಾಚಾರ್ಯೋ ವೇದಾರ್ಥಂ ವ್ಯಾಕರೋ
ತ್ಖಲು"—ಎಂದು ಪಾಠಾಂತರವಿದೆ.)

ಸಾಯಣರು ವೇದಾರ್ಥ ಸಂದರ್ಭಗಳಲ್ಲಿ ಉದಾಹರಿಸಿರುವ ಪೂರ್ವೋತ್ತರ ಮೀಮಾಂಸಾ ವಚನಗಳು ಉಭಯ "ನ್ಯಾಯಮಾಲಾ ವಿಸ್ತರ"ಗಳಲ್ಲಿಯವುಗಳೇ ಆದಕಾರಣ—ಈ ಗ್ರಂಥಗಳ ನಿರ್ಮಾಣದಲ್ಲಿ ಭಾರತೀತೀರ್ಥ, ಮಾಧವ-ವಿದ್ಯಾರಣ್ಯ, ಸಾಯಣಾಚಾರ್ಯ—ಈ ಮೂರು ಮಂದಿಯ ಕೈಗಳೂ ಸೇರಿದ್ದುವೆಂದು ನಾವು ಅನುಮಾನಿಸ ಬಹುದಾಗಿದೆ. ಸಾರಸ್ವತ ಕಾರ್ಯದಲ್ಲಿ ಅವರು ಮೂವರೂ ಮತೈಕ್ಯ ವುಳ್ಳವರಾದ ಕಾರಣ, ಅನ್ಯೋನ್ಯಾವಲಂಬಿಗಳೂ, ಅಭಿನ್ನ ವಚನರೂ, ಏಕಕಂಠ್ಯರೂ ಆಗಿ ನಡೆದುಕೊಳ್ಳುತ್ತಿದ್ದರೆಂದು ತೋರುತ್ತದೆ. ಇದು ನಾವು ಮುಖ್ಯವಾಗಿ ನೆನಪಿನಲ್ಲಿಡಬೇಕಾದ ಸಂಗತಿ.

ಇನ್ನು, ಸಾಯಣಾಚಾರ್ಯರು ಭ್ರಾತೃಭಕ್ತಿಯಿಂದ ಮಾಧವ-ವಿದ್ಯಾರಣ್ಯರ ಪ್ರಖ್ಯಾತ ನಾಮಧೇಯಕ್ಕೆ ಸಮರ್ಪಣೆಮಾಡಿರುವ ಗ್ರಂಥಗಳಲ್ಲಿ ಕಾಣಬರುವ ಕೈಗುರುತುಗಳನ್ನು ಪರೀಕ್ಷಿಸೋಣ.

ಅವರ "ವೇದಾರ್ಥ ಪ್ರಕಾಶ"ದಲ್ಲಿ, ಸಾಮವೇದ ಭಾಷ್ಯೋಪ ಕ್ರಮದಲ್ಲಿ*—

"ಪಂಚಾಗ್ನಿನಾ ಮಾಧವೇನ ಶ್ರೀ ನಾರಾಯಣಸೂನುನಾ।"
ಎಂದಿದೆ. ಇದರಿಂದ ನಾರಾಯಣಾಭಿಧಾನವುಳ್ಳ ಬ್ರಾಹ್ಮಣನ ಮಗ "ಪಂಚಾಗ್ನಿಯ ಮಾಧವ"ನೆಂಬಾತನೊಬ್ಬನು ಸಾಯಣರ ಸಹೋ ದ್ಯೋಗಿಯಾಗಿದ್ದನೆಂದು ಬೋಧ್ಯವಾಗುತ್ತದೆ.

---

* ಮೈಸೂರು ಸರಕಾರದ ಓರಿಯಂಟಲ್ ಲೈಬ್ರರಿಯಿಂದ ಪ್ರಕಟಿತವಾಗಿರುವ (ಕ್ರಿಸ್ತ ವರ್ಷ ೧೯೦೦) "ಧಾತುವೃತ್ತಿ"ಗೆ ಪಂಡಿತರತ್ನ ಕಸ್ತೂರಿರಂಗಾಚಾರ್ಯರು ಬರೆದಿರುವ ಭೂಮಿಕೆಯನ್ನು ನೋಡಿರಿ. ಸಂಪುಟ ೧, ಭಾಗ ೧, ಪುಟ ೧೩.

ಇಮ್ಮಡಿ ಹರಿಹರರಾಜನಿಂದ ಆದ ಶೃಂಗೇರಿಯ (ಕ್ರಿಸ್ತ ವರ್ಷ ೧೩೮೦-೮೧೧) ೩ ನೆಯ ತಾಮ್ರಶಾಸನದ ವೃತ್ತಿವಂತರ ಪಟ್ಟಿಯಲ್ಲಿ

"ಕೌಶಿಕಗೋತ್ರದ ವೇದಭಾಷ್ಯದ ನರಹರಿಭಟ್ಟರು"

ಎಂದಿದೆ. ಇನ್ನೂ ಅನೇಕ ಹೆಸರುಗಳ ಒಕ್ಕಣೆಗಳು ವೇದ ಪಾಂಡಿತ್ಯ ವನ್ನು ತೋರಿಸತಕ್ಕುವಾಗಿವೆ. ಮೇಲಿನ ನರಹರಿಭಟ್ಟರ ಜೊತೆಗೆ ಇವರಲ್ಲಿ ಕೆಲವರಾದರೂ ವೇದಭಾಷ್ಯ ಕಾರ್ಯದಲ್ಲಿ ನಿಯುಂತ್ರಿತರಾದವ ರಾಗಿದ್ದಿರಬೇಕು. *

ವೇದಭಾಷ್ಯ ರಚನೆಗಾಗಿಯೇ ಮಾಧವ-ವಿದ್ಯಾರಣ್ಯರು ನಾನಾ ದೂರದೇಶಗಳಿಂದ ವಿದ್ವದ್ಬ್ರಾಹ್ಮಣರನ್ನು ಕರೆಯಿಸಿ ಅವರನ್ನು ಶೃಂಗೇರಿ ಯಲ್ಲಿ ನೆಲೆಗೊಳಿಸಿದರೆಂದು ಪುರಾತನ ಕಥೆಯೂ ಉಂಟು.

ಈ ಸಿದ್ಧಾಂತಕ್ಕೆ ಸಾಧಕವೆಂದು ಕಾಣುವ ಒಂದು ಸಂಗತಿಯನ್ನು ಪ್ರೊಫೆಸರ್ ಮೆಕ್‌ಡಾನಲ್‌ರವರು† ಸೂಚಿಸಿದ್ದಾರೆ. ಅದೇನೆಂದರೆ— ವೇದ ಭಾಷ್ಯದಲ್ಲಿ ಒಂದೇ ಪದಕ್ಕೆ ಬೇರೆ ಬೇರೆ ವಾಕ್ಯಗಳಲ್ಲಿ, ಸಂದರ್ಭ ವ್ಯತ್ಯಾಸವೇನೂ ಇಲ್ಲದಿದ್ದರೂ, ಬೇರೆ ಬೇರೆ ರೀತಿಯಲ್ಲಿ ಅರ್ಥವನ್ನು ಕಲ್ಪಿಸಿದೆ. ಒಬ್ಬರೇ ಆದ್ಯಂತ ಭಾಷ್ಯವನ್ನೂ ಬರೆದಿದ್ದಿದ್ದರೆ ಹೀಗೆ ಅರ್ಥ ಕಲ್ಪನೆಯಲ್ಲಿ ಅಸಂಬದ್ಧತೆಯಿರುತ್ತಿರಲಿಲ್ಲ.

ಇದೇ ಅಭಿಪ್ರಾಯವನ್ನೇ ಪಿ. ಡಿ. ಗುಣೆ ‡ ಎಂಬ ಪಂಡಿತರೂ ಪುಷ್ಟೀಕರಿಸಿದ್ದಾರೆ. ಅವರ ಚರ್ಚೆಯ ಮುಖ್ಯಾಂಶಗಳೇನೆಂದರೆ:—

---

* "In the copper grant of Harihara II, it is stated that the king gave, in 1386, a copper *Sasana* to Narayana Vajapeyayaji, Narahari-Somayaji and Pandari-Dikshita, who were the Promoters (*Pravartaka*) of the commentary on the four Vedas, in the presence of Vidyaranya Sripada. We seem to have a clear statement that several scholars helped Sayana in writing the commentaries on the Vedas. And it is just possible that the donees Nagabharana and Vamana Bhatta may have similarly helped Sayana."—R. Narasimhacharya, *Mysore Arch. Report*, 1914-15, page 59.

† "The Principles of Translating the *Rig Veda*"—by Prof. A. A. Macdonell, *Bhandarkar Commemoration Volume* (1917), pages 7-8.

‡ "Sayana's Commentary: Its Composition"—by Dr. P. D. Gune, *Sir Asutosh Mookerjee Silver Jubilee Volume*, III (1927), page 467.

(೧) ಋಗ್ವೇದ ಭಾಷ್ಯದ ಒಟ್ಟು ೬೪ ಅಧ್ಯಾಯಗಳೊಳಗೆ ೨೦ರ ಉಪಕ್ರಮದಲ್ಲಿ ಮಾತ್ರ ಸಾಯಣ ನಾಮಾತ್ಮಕ ಶ್ಲೋಕಗಳಿವೆ; ಉಳಿದವುಗಳಲ್ಲಿ ಅವರ ಹೆಸರಿನ ಸೂಚನೆಯಿಲ್ಲ.

(೨) ಆ ೨೦ ಶ್ಲೋಕಗಳಲ್ಲಿಯೂ ಸಾಯಣರ ವಿಷಯದಲ್ಲಿರುವ ಪ್ರಶಂಸಾ ವಚನಗಳನ್ನು ನೋಡಿದರೆ ಅವು ಅವರ ಶಿಷ್ಯರಾದವರ ಮಾತಿನಂತೆ ತೋರುತ್ತದೆ.

(೩) ಷಷ್ಠಾಷ್ಟಕದ ಅಷ್ಟಮಾಧ್ಯಾಯದ ಪ್ರಾರಂಭದಲ್ಲಿ "ಅಥಾಷ್ಟಮಃ ಸುಮತಿನಾ ಸಂಗಮೇನ ಪ್ರದರ್ಶ್ಯತೇ" ಎಂದಿದೆ. ಇದರಲ್ಲಿ ಸಂಗಮನೆಂಬ ಒಬ್ಬನ ಕೈವಾಡವು ಕಾಣುತ್ತದೆ.

(೪) ಒಂದು ಭಾಗದಲ್ಲಿ ಅರ್ಥ ಹೇಳುವಾಗ ಹಿಂದೆ ಬೇರೊಂದು ಭಾಗದಲ್ಲಿ ಹೇಳಿದ್ದ ವಾಕ್ಯಗಳನ್ನು ಉದಾಹರಿಸಬೇಕಾಗಿ ಬಂದರೆ, ಆ ಹಿಂದಿನ ಪ್ರಸಂಗದ ಮಂಡಲ ಸಂಖ್ಯೆಯನ್ನು ಕೊಡದೆ ಅಷ್ಟಕ ಸಂಖ್ಯೆಯನ್ನು ಮಾತ್ರ ಕೊಟ್ಟಿರುವುದರಿಂದಲೂ, ಒಂದಷ್ಟಕದಲ್ಲಿ ಒಂದು ವಾಕ್ಯವು ಅನೇಕಾವರ್ತಿ ಬಂದರೂ ಅದಕ್ಕೆ ಒಂದುಸಾರಿ ಮಾತ್ರವೇ ಅರ್ಥವಿವರಣೆ ಮಾಡಿರುವುದರಿಂದಲೂ, ವೇದವನ್ನು ಅಷ್ಟಕ ಸಂಖ್ಯೆಗನುಸಾರವಾಗಿಯೇ ವಿಭಾಗಮಾಡಿ, ಒಂದೊಂದು ಅಷ್ಟಕವನ್ನು ಒಂದೊಂದು ಪ್ರತ್ಯೇಕ ಪ್ರಬಂಧದಂತೆ ಗಣನೆಮಾಡಿರುವ ಹಾಗೆ ತೋರುತ್ತದೆ. ಇಂಥಾ ಒಂದೊಂದು ಪ್ರತ್ಯೇಕ ಪ್ರಬಂಧವನ್ನೂ ಒಬ್ಬೊಬ್ಬರು ಬೇರೆ ಬೇರೆ ಬರೆದಿರಬೇಕು. ಹಾಗಲ್ಲದಿದ್ದರೆ ಒಂದೇ ಪದಕ್ಕೆ ಒಂದು ಅಷ್ಟಕದಲ್ಲಿ ಒಂದು ವಿಧವಾದ ಅರ್ಥವೂ ಇನ್ನೊಂದು ಅಷ್ಟಕದಲ್ಲಿ ತಕ್ಕಷ್ಟು ಕಾರಣವಿಲ್ಲದೆ ಬೇರೊಂದು ವಿಧವಾದ ಅರ್ಥವೂ ಈಗಿನಂತೆ ಕಾಣಬರುತ್ತಿರಲಿಲ್ಲ.

(೫) ಭಾಷ್ಯದ ನಾನಾ ಭಾಗಗಳಲ್ಲಿ ಕಾಣಬರುವ ಶೈಲಿಯ ವ್ಯತ್ಯಾಸಗಳೂ, ವ್ಯಾಕರಣ ಪ್ರಕ್ರಿಯಾ ಭೇದಗಳೂ, ಇತರ

ಅಸಾಮಂಜಸ್ಯಗಳೂ ಅನೇಕ ಪಂಡಿತ ಸಹಕಾರದ ಗುರುತುಗಳಾಗಿವೆ.

ಹೀಗೆ ವೇದ ಭಾಷ್ಯವು ಬಹು ಕರ್ತೃಕವಾದುದೆಂಬ ಸಿದ್ಧಾಂತಕ್ಕೆ ಹಿಂದೆ (೧೦೫ನೆಯ ಪುಟದಲ್ಲಿ) ನಾವು ನೋಡಿರುವ "ಗಂಗಾಯಾಂ ನಿವಸಂತಿ ಯೇ" ಎಂಬ "ಅಲಂಕಾರ ಸುಧಾನಿಧಿ" ಶ್ಲೋಕವೂ ಆಧಾರವಾಗಿದೆ.

ಇದೇ ಬಗೆಯ ನಾನಾಕರ ವಿರಚಿತತ್ವವನ್ನು "ಧಾತುವೃತ್ತಿ"ಯ ವಿಷಯದಲ್ಲಿಯೂ ಅನುಮಾನಿಸಬಹುದಾಗಿದೆ. ಈ ಗ್ರಂಥದ "ಕ್ರಮು = ಪಾದವಿಕ್ಷೇಪೇ" ಎಂಬ ಧಾತುಪಾಠದ ರೂಪನಿಷ್ಪತ್ತಿಯಾದ ಬಳಿಕ—

ಯಜ್ಞ ನಾರಾಯಣಾರ್ಯೇಣ ಪ್ರಕ್ರಿಯೇಯಂ ಪ್ರಪಂಚಿತಾ।
ಅಸ್ಯಾ ನಿಶ್ಶೇಷತಸ್ಸಂತು ಬೋದ್ಧಾರೋ ಭಾಷ್ಯಪಾರಗಾಃ ॥*

ಎಂಬ ಶ್ಲೋಕವಿದೆ. ಪುನಃ "ಮವ್ಯ = ಬಂಧನೇ" ಎಂಬುದರ ರೂಪನಿಷ್ಪತ್ತ್ಯನಂತರದಲ್ಲಿ

ಅಥಾಪಿ ಶಿಷ್ಯ ಬೋಧಾಯ ಪ್ರಕ್ರಿಯೇಯಂ ಪ್ರಪಂಚಿತಾ।
ಯಜ್ಞನಾರಾಯಣಾರ್ಯೇಣ ಬುಧ್ಯಂತಾಂ ಭಾಷ್ಯಪಾರಗಾಃ ॥*

ಎಂಬ ಶ್ಲೋಕವಿದೆ.

ಇದಲ್ಲದೆ, ಈ ಗ್ರಂಥದ ಮಾತೃಕಾ ಪ್ರತಿಯೊಂದರಲ್ಲಿ ಉಪೋದ್ಘಾತ ಪದ್ಯಗಳ ಕೊನೆಯದಾಗಿ ಈ ಕೆಳಗಿನದು ಇದ್ದಂತೆ ಹೇಳಿದೆ:—

ಸುಧಾ ತು ವೃತ್ತಿರ್ವಿಹಿತಾ ಬುಧಾನಾಂ ಶ್ರೀವತ್ಸಚಿಹ್ನೇನ ಕೃತೇ ಹಿ ನಾಕೇ।
ಸುಧಾತುವೃತ್ತಿರ್ವಿಹಿತಾ ಬುಧಾನಾಂ ಶ್ರೀಕುಂಡಿನಾರ್ಯೇಣ ಕಲಾವಪೀಹ ॥

ಇದರಿಂದ ಯಜ್ಞನಾರಾಯಣಾರ್ಯರ ಜೊತೆಗೆ ಕುಂಡಿನಾರ್ಯರೊಬ್ಬರು ಸೇರಿದಂತೆ ಆಗುತ್ತದೆ.

---

* ಮೈಸೂರು ಸರಕಾರದ ಓರಿಯಂಟಲ್ ಲೈಬ್ರರಿಯ ಪ್ರತಿ, ಸಂಪುಟ ೧, ಪುಟ ೨೯೦, ೭೦೮.

"ಧಾತುವೃತ್ತಿ"ಯಲ್ಲಿಯೂ ಅಲ್ಲಲ್ಲಿ ಪ್ರಮಾದಗಳು ಕಾಣಬರುತ್ತ ವಂತೆ.

"ವಿವಿಧ ಪ್ರಾಚೀನ ನಿಬಂಧಾಶಯ ವಿಮರ್ಶ ಪುರ ಸ್ಸರಂ ವಿರಚಿತಾಯಾಮಪ್ಯಸ್ಯಾಂ ಧಾತುವೃತ್ತೌ ಪ್ರತೀ ಯಂತೇ ಕೇಚಿದ್ದೋಷಾ ಆಕರ ವಿರೋಧ ಪ್ರಯೋಗ ವಿರೋಧ ಯುಕ್ತಿ ವಿರೋಧಾದಯಃ ‖ ತೇ ಚ ನವೀನೈ ರ್ಭಟ್ಟೋಜಿದೀಕ್ಷಿತ ನಾಗೇಶಭಟ್ಟ ಪ್ರಭೃತಿಭಿಸ್ತತ್ರ ತತ್ರ ಬಹುಧಾ ಪ್ರಾದರ್ಶಿಷತ ‖"

ಹೀಗೆಂದು ಪಂಡಿತರತ್ನ ಕಸ್ತೂರಿರಂಗಾಚಾರ್ಯರು ಬರೆದಿದ್ದಾರೆ. ಈ ಪ್ರಮಾದಗಳು ಇನ್ನೂ ಶಾಸ್ತ್ರಾಲೋಡನೆಗೆ ಹೊಸಬರಾಗಿದ್ದ ಸಾಮಾನ್ಯ ಪಂಡಿತರ ಕೈಗಾರಿಕೆಯೇ ಹೊರತು, ಎಷ್ಟು ಮಾತ್ರವೂ ಸಾಯಣರದಾಗಿರಲಾರವು.

ಇತರ ಕರ ನಿರ್ಮಿತಿಗೆ ಸಾಯಣರು ಸ್ವನಾಮಾಶ್ರಯವನ್ನು ಕೊಟ್ಟರೆಂಬುದಕ್ಕೆ "ಆಯುರ್ವೇದ ಸುಧಾನಿಧಿ"ಯೂ ಒಂದು ಸಾಕ್ಷಿ. "ಅಲಂಕಾರ ಸುಧಾನಿಧಿ"ಯಲ್ಲಿ ಅವರು

ಆಯುರ್ವೇದ ಸುಧಾನಿಧಿ ವ್ಯಸನಿಭಿಶ್ರೀಸಾಯಣಾರ್ಯೋದಿತಂ।
ಭೈಷಜ್ಯಂ ಚ ಭಿಷಗ್ವರೈರ್ನಗಣಯತ್ಯುತ್ಕೂಲ ಬಾಷ್ಪಾಕುಲಾ ‖

ಎಂದು ಹೇಳಿದ್ದಾರೆ. ಆದರೆ ಈ ಗ್ರಂಥದ ನಿರ್ಮಾತೃವು ಬೇರೆ—ಏಕಾಮ್ರನಾಥ ಪಂಡಿತನು—ಎಂಬುದು ಶ್ರೀಶೈಲನಾಥನ "ಪ್ರಶ್ನೋತ್ತರ ಮಾಲಾ" ಎಂಬ ವೈದ್ಯಗ್ರಂಥದ ಈ ಕೆಳಗಿನ ಶ್ಲೋಕದಿಂದ ಗೊತ್ತಾಗುತ್ತದೆ*:—

ಏಕಾಮ್ರನಾಥೋ ಯತ್ತಾತಃ ಸಾಯಣಾಮಾತ್ಯ ಚೋದಿತಃ।
ಸಮಗ್ರಹೀತ್ಸುಬೋಧಾರ್ಥಮಾಯುರ್ವೇದ ಸುಧಾನಿಧಿಂ ‖

"ಅಲಂಕಾರ ಸುಧಾನಿಧಿ"ಯಾದರೂ ಸಾಯಣರ ಸ್ವಯಂ ಪ್ರಣೀತವೋ? ಅದಲ್ಲದಿದ್ದರೂ ಇರಬಹುದು. ಏಕೆಂದರೆ ಅದರಲ್ಲಿಯ ಉದಾ

* R. Narasimhacharya, *Indian Antiquary*, Vol. XLV, 1916, page 22.

ಹರಣ ಪದ್ಯಗಳು ಹತ್ತಾರು ಸಾಯಣ ಪ್ರಶಂಸಾತ್ಮಕಗಳಾಗಿವೆ. ಅಂಥವರು ಆತ್ಮ ಗುಣಕಥನಮಾಡಿಕೊಳ್ಳುವುದು ಅಸಂಭವವಾದ ಕಾರಣ, ಈ ಗ್ರಂಥವನ್ನು ಶಾಸ್ತ್ರ ವ್ಯಾಖ್ಯಾನಕ್ಕಿಂತ ಸರಸ ಕವಿತ್ವದಲ್ಲಿ ಹೆಚ್ಚು ಪ್ರೀತಿಯುಳ್ಳವನಾಗಿದ್ದ ಅವರ ತಮ್ಮ ಭೋಗನಾಥ ಕವಿಯೇ ರಚಿಸಿರಬಹುದು. ಕವಿಯಾದವನಿಗೆ ಕಾವ್ಯ ಮೀಮಾಂಸೆಯು ಸ್ವಧರ್ಮದ ಒಂದು ಅಂಗವೇ ಅಷ್ಟೆ? ಅಥವಾ ಸಾಯಣ ಭೋಗನಾಥರುಗಳ ಶಿಷ್ಯನೋ ಆಶ್ರಿತನೋ ಆದ ವಿದ್ವಾಂಸನೊಬ್ಬನು ಈ ಗ್ರಂಥವನ್ನು ನಿರ್ಮಿಸಿದ್ದರೂ ಇರಬಹುದು.

ಈ ಸ್ವಲ್ಪ ದೀರ್ಘವೇ ಆದ ಸಮಾಲೋಚನೆಯಿಂದ ನಮ್ಮ ಮನಸ್ಸಿಗೆ ಗೋಚರವಾಗುವುದೇನೆಂದರೆ:—ಇಲ್ಲಿ ಪ್ರಸಕ್ತವಾಗಿರುವ ಕಾಲದ ಸಾರಸ್ವತ ಪ್ರಪಂಚಕ್ಕೆ ಮಾಧವ ಸಾಯಣರುಗಳು ಸೂರ್ಯ ಚಂದ್ರರಾಗಿದ್ದರು. ಅವರನ್ನವಲಂಬಿಸಿಕೊಂಡು ಅನೇಕ ಗ್ರಹಗಳೂ ನಕ್ಷತ್ರಗಳೂ ಸುತ್ತುಮುತ್ತಲೂ ಸಂಚರಿಸುತ್ತಿದ್ದುವು. ಈ ನಾನಾ ವರ್ಣದ, ನಾನಾ ವೇಗದ ಮತ್ತು ನಾನಾ ವ್ಯಾಪ್ತಿಯ ತೇಜಸ್ಸುಗಳ ಸಮುಚ್ಚಯವೇ ಆ ಕಾಲದ ವಿದ್ಯಾವೈದುಷ್ಯ ಪ್ರಭಾವ.

ಮಾಧವ-ವಿದ್ಯಾರಣ್ಯರೂ ಸಾಯಣಾಚಾರ್ಯರೂ ತಮ್ಮ ಉಪಾಶ್ರಿತರಾಗಿದ್ದ ವಿದ್ವಾಂಸರಲ್ಲಿ ಕೆಲವರನ್ನು ಆರಿಸಿ ಕೆಲವು ಗ್ರಂಥಗಳನ್ನು ಬರೆಯಲು ನಿಯಮಿಸಿರಬಹುದು. ಇನ್ನು ಕೆಲವನ್ನು ತಾವೇ ಆರಂಭಿಸಿ, ನಾಲ್ಕಾರು ವಾಕ್ಯಗಳನ್ನೋ ಪ್ರಕರಣಗಳನ್ನೋ ದಿಕ್ಪ್ರದರ್ಶನಾರ್ಥವಾಗಿ ಬರೆದು, ಪೂರ್ತಿಗೊಳಿಸುವ ಕಾರ್ಯವನ್ನು ಇತರರಿಗೊಪ್ಪಿಸಿರಬಹುದು. ಇತರ ಪಂಡಿತರು ಸ್ವತಃ ಬರೆಯಹೊರಟಿದ್ದರೆ ಅವರಿಗೆ ಇವರು ಉಪಯುಕ್ತಾಂಶಗಳನ್ನು ಸೂಚಿಸಿ, ಲೇಖನ ರೀತಿಯನ್ನು ತೋರಿಸಿಕೊಟ್ಟಿರಬಹುದು. ಇತರರು ತಂದ ಪ್ರಬಂಧಗಳನ್ನು ಇವರು ನೋಡಿ, ರಾಜಾಸ್ಥಾನ ವಿದ್ವತ್ಸಭೆಗಳಲ್ಲಿ ಅವನ್ನು ಪ್ರಕಾಶಪಡಿಸಿಕೊಟ್ಟಿರಬಹುದು. ಹೀಗೆ ಅನೇಕ ಮುಖವಾಗಿ ಬೆಳೆದು ದೊಡ್ಡದಾದುದು ಆಗಿನ ಗ್ರಂಥ ಭಾಂಡಾಗಾರ. ಈ ಸಾರಸ್ವತ ಸಹಕಾರೋದ್ಯಮದಲ್ಲಿ ಚಿಕ್ಕವರಾದವರು ತಮ್ಮ ಸೇವೆಯನ್ನು ದೊಡ್ಡವರು ಅಂಗೀ

ಕರಿಸಿದರೆ ಸಾಕೆಂಬ ಭಾವನೆಯಿಂದ ಶ್ರಮಿಸುತ್ತಿದ್ದರು; ದೊಡ್ಡವರಾದವರು ಸಣ್ಣವರನ್ನು ಪ್ರೋತ್ಸಾಹಿಸಿ ಮುಂದಕ್ಕೆ ತರಬೇಕೆಂಬ ಆತುರದಲ್ಲಿದ್ದರು. ಅದರಲ್ಲಿ ಸ್ವಪ್ರತಿಷ್ಠೆಯ ಬಡಿದಾಟವೆತ್ತಲೂ ಇರಲಿಲ್ಲ. ಪ್ರಮುಖರಲ್ಲಿಯೂ ಅನುಯಾಯಿಗಳಲ್ಲಿಯೂ ಈ ತೆರದ ಆತ್ಮ ಖ್ಯಾತಿ ವಿಸ್ಮರಣೆಯೂ ಅನ್ಯೋನ್ಯ ವಿಶ್ವಾಸ ವರ್ತನೆಯೂ ಇಲ್ಲದಿದ್ದರೆ ಯಾವ ಮಹಾ ಸಮಾರಂಭವೂ ಸಮರ್ಪಕವಾಗಿ ನಡೆಯಲಾರದು. ನಮ್ಮ ಕಾಲದಲ್ಲಿ "ಎನ್‌ಸೈಕ್ಲೊಪೀಡಿಯಾ ಬ್ರಿಟ್ಯಾನಿಕ" ಎಂಬ ಆಂಗ್ಲೇಯ ವಿಶ್ವಕೋಶದಂತಹ ವಿವಿಧ ಮಹಾ ಪ್ರಬಂಧ ಸಮುಚ್ಚಯವನ್ನು ನಿರ್ಮಿಸಬೇಕಾದರೆ, ಅದಕ್ಕೆ ಅನೇಕ ಶಾಸ್ತ್ರ ಪರಿಚಯವುಳ್ಳ ಒಬ್ಬ ಪ್ರಸಿದ್ಧ ವಿದ್ವಾಂಸನು ಸರ್ವಾಧಿಕಾರಿಯಾದ (ಜನರಲ್ ಎಡಿಟರ್) ಮುಖ್ಯ ಸಂಪಾದಕನಾಗಿಯೂ, ಅನೇಕ ಮಂದಿ ನಾನಾ ಶಾಸ್ತ್ರ ನಿಪುಣರು ಉಪಸಂಪಾದಕರಾಗಿಯೂ, ನೂರಾರು ಮಂದಿ ವಿಶೇಷ ವಿಜ್ಞಾನ ಪ್ರವೀಣರು (ಎಕ್ಸ್‌ಪರ್ಟ್ಸ್) ನಾನಾ ಪ್ರಬಂಧ ಲೇಖಕರಾಗಿಯೂ ಇರಲೊಪ್ಪಿ, ಎಲ್ಲರೂ ಪರಸ್ಪರ ಮನೋಗತಗಳನ್ನರಿತುಕೊಂಡು, ಜನ ಬೋಧನೆಯೆಂಬ ಒಂದೇ ಉದ್ದೇಶವನ್ನಿಟ್ಟುಕೊಂಡು, ಒಂದೇ ವಿಧಾನವನ್ನು ಅನುಸರಿಸಿ, ಒಬ್ಬ ಮನುಷ್ಯನಂತೆ ಕೆಲಸ ಮಾಡುತ್ತಾರೆ. ಮಾಧವ ಸಾಯಣರುಗಳು ಸಾಧಿಸಿದ ಕಾರ್ಯವು ಇಂತಹ ವಿಶ್ವಕೋಶ ನಿರ್ಮಾಣವೆಂದೂ ಒಂದು ವಿಶಾಲವಾದ ಲೇಖಕ ಮಂಡಲಿಯು ಅವರಿಬ್ಬರನ್ನೂ ಮುಖ್ಯಸಂಪಾದಕ ಸಹಾಯಸಂಪಾದಕ (ಚೀಫ್ ಎಡಿಟರ್, ಅಸಿಸ್ಟೆಂಟ್ ಎಡಿಟರ್) ರಂತೆ ಅಂಗೀಕಾರ ಮಾಡಿತ್ತೆಂದೂ ನಾವು ತಿಳಿಯಬಹುದು. ಸರ್ವದಾ ರಾಜಕೀಯ ನಿವಿಷ್ಟರಾಗಿದ್ದ ಅವರುಗಳು ಇತರರ ಸಹಕಾರವನ್ನಂಗೀಕರಿಸದೆ, ತಮ್ಮ ಸ್ವಂತ ಹಸ್ತದಿಂದೆಷ್ಟು ಸಾಧ್ಯವೋ ಅಷ್ಟು ಪಂಕ್ತಿಗಳನ್ನು ಮಾತ್ರವೇ ಬರೆದು ತೃಪ್ತರಾಗಬೇಕೆಂದು ಇದ್ದಿದ್ದರೆ, ಅವರ ಕೀರ್ತಿಗಾಗಿ ಒಂದೆರಡು ಪ್ರೌಢ ಗ್ರಂಥಗಳೇನೋ ಆಗಿರುತ್ತಿದ್ದವು. ಆದರೆ ಈಗ ಅವರ ಹೆಸರನ್ನು ತಳೆದಿರುವ ವಿವಿಧ ಶಾಸ್ತ್ರ ಭಾಂಡಾಗಾರವು ಸಾಧ್ಯವಾಗುತ್ತಿರಲಿಲ್ಲ. ಅವರಿಗೆ ಬೇಕಾಗಿದ್ದುದು ಸ್ವಕೀರ್ತಿಯಲ್ಲ; ಜನ ಬೋಧೆ.

ಇನ್ನು ಸಾಯಣ ನಾಮಾಂಕಿತ ಕೃತಿಗಳ ಸ್ವರೂಪವನ್ನು ನೋಡೋಣ.

## ೧. "ಸುಭಾಷಿತ ಸುಧಾನಿಧಿ"

ಇದು ಸಾಯಣ ಕೃತಿಗಳಲ್ಲಿ ಕಾಲಾನುಕ್ರಮದಿಂದ ಮೊದಲನೆಯದು. ಇದರ ಪೀಠಿಕಾ ಶ್ಲೋಕಗಳಲ್ಲಿ ಈ ಕೆಳಗಿನವು ಮುಖ್ಯ ಸಂಗತಿಗಳನ್ನು ತಿಳಿಸತಕ್ಕುವು:

ವೀರಶ್ರೀ ಕಂಪರಾಜೋಽಸ್ತಿ ವಿದುಷಾಂ [ಸೂ......]ನಿಧಿಃ।
ಯತ್ಕೀರ್ತಿಕಾಮಿನೀಹಸ್ತೇ ಬ್ರಹ್ಮಾಂಡಂ ಕಂದುಕಾಯತೇ ॥
ಸ್ವಮುದ್ರಾಮುದ್ರಿತಾನ್ ಕೃತ್ವಾ ಪ್ರಾಯಃ ಪ್ರತ್ಯರ್ಥಿ ಪಾರ್ಥಿವಾನ್।
ಸಮುದ್ರಾಧಿಪತಿರ್ಯೋಽಭೂದಂಬುಧೀಶತಯಾ ಪರಂ ॥....
ಮತಿಮಾಂಸ್ತಸ್ಯ ರಾಜ್ಞೋಽಭೂತ್ ಮಂತ್ರೀ ಮಾಯಣ ಸಾಯಣಃ।
ಯನ್ಮಂತ್ರೇಣ ನ ಸರ್ಪಂತಿ ನಿತ್ಯಂ ಶತ್ರು ಬಿಲೇಶಯಾಃ ॥....
ದಾನಸಿಂಹಾಸನೇ ರೂಢೇ ಯಸ್ಮಿನ್ ಲಕ್ಷ್ಮ್ಯಾ ಸಹ ಸ್ಥಿರಂ।
ತದ್ಭಾರತೀ ಚ ವಿದುಷಾಂ ಜಿಹ್ವಾಸಿಂಹಾಸನೇ ಸ್ಥಿತಾ ॥....
ಭಾರದ್ವಾಜಾನ್ವಯಭುವಾ ತೇನ ಸಾಯಣ ಮಂತ್ರಿಣಾ।
ವ್ಯರಚ್ಯತ ವಿಶಿಷ್ಟಾರ್ಥಸ್ಸುಭಾಷಿತ ಸುಧಾನಿಧಿಃ ॥
ಧರ್ಮಾರ್ಥ ಕಾಮ ಮೋಕ್ಷಾಂಕಂ ಯತ್ರ ಪರ್ವ ಚತುಷ್ಟಯಂ।
ಭವತ್ಯಪೂರ್ವಸಂದರ್ಭಂ [ನೃಪ?] ಕರ್ಣರಸಾಯನಂ ॥
ಸ ಕದಾಚಿತ್ ತಮಾಸೇಕಂ ಕಂಪಭೂಪಂ ಕಲಾನಿಧಿಃ।
ಅಶ್ರಾವಯದನೂನಶ್ರೀಃ ನಿಶ್ರೇಯಸಕರಂ ಪರಂ ॥....

ಗ್ರಂಥದ ಪರಿಸಮಾಪಕ ವಾಕ್ಯವು ಹೀಗೆ ಇದೆ:—

ಇತಿ ಪೂರ್ವ ಪಶ್ಚಿಮ ಸಮುದ್ರಾಧೀಶ್ವರ ಅರಿರಾಯ ವಿಭಾಲ ಶ್ರೀ ಕಂಪರಾಜ ಮಹಾಪ್ರಧಾನ, ಭರದ್ವಾಜವಂಶ ಮೌಕ್ತಿಕ, ಮಾಯಣ ರತ್ನಾಕರ ಸುಧಾಕರ, ಮಾಧವ ಕಲ್ಪತರು ಸಹೋದರ, ಸಾಯಣಾರ್ಯ ವಿರಚಿತೇ ಸುಭಾಷಿತ ಸುಧಾನಿಧೌ ॥

ಈ ಗ್ರಂಥವು ಮುದ್ರಿತವಾಗಿಲ್ಲ. ನಾವು ನೋಡಿರುವ ಇದರ ಕೈಬರೆಹದ ಪ್ರತಿಯಲ್ಲಿ "ಧರ್ಮ" "ಅರ್ಥ"ಗಳನ್ನು ಕುರಿತ ಎರಡು ಪರ್ವಗಳು ಮಾತ್ರ ಇವೆ; "ಕಾಮ" "ಮೋಕ್ಷ"ಗಳನ್ನು ಕುರಿತ ಎರಡು ಪರ್ವಗಳು ಅನುಪಲಬ್ಧವಾಗಿವೆ.

ಗ್ರಂಥದ ಉದ್ದೇಶವು ಸಾಧಾರಣ ನೀತಿಬೋಧೆಯೆಂಬುದು ಅದರ ಹೆಸರಿನಿಂದಲೇ ಸ್ಪಷ್ಟವಾಗಿದೆ. ಇದು ಬಹುಮಟ್ಟಿಗೆ ಪ್ರಾಚೀನ ಮಹನೀಯರ ಉಪದೇಶ ವಾಕ್ಯಗಳ ಸಂಕಲನವೆಂದು ಹೇಳಬಹುದು. ಜನಸಾಮಾನ್ಯದ ಪ್ರಯೋಜನಕ್ಕಾಗಿ ಬರೆದ ಗ್ರಂಥವಿದು.

## ೨. "ಯಜ್ಞತಂತ್ರ ಸುಧಾನಿಧಿ"

ಇದು ಯಜ್ಞ ಯಾಗಾದಿಗಳ ವಿಧಾನಗಳನ್ನು ವಿವರಿಸತಕ್ಕ ಗ್ರಂಥವೆಂದು ಹೆಸರಿನಿಂದಲೇ ಬೋಧ್ಯವಾಗಿದೆ. ಇದರ ಪೀಠಿಕಾವಸರದಲ್ಲಿ ಹೀಗೆ ಹೇಳಿದೆ:—

(ಸಂಗಮಸ್ಯ) ತಸ್ಯಾಭೂದಸ್ಯ ಗುರುಸ್ತತ್ತ್ವಸಿದ್ಧಾಂತದರ್ಶಕಃ।
ಸರ್ವಜ್ಞಸ್ಸಾಯಣಾಚಾರ್ಯೋ ಮಾಯಣಾರ್ಯತನೂದ್ಭವಃ ॥
ಉಪೇಂದ್ರಸ್ಯೇವ ಯಸ್ಯಾಸೀದಿಂದ್ರಸ್ಸುಮನಸಾಂ ಪ್ರಿಯಃ।
ಮಹಾಕ್ರತೂನಾಮಾಹರ್ತಾ ಮಾಧವಾರ್ಯಸಹೋದರಃ ॥

[ಕಡೆಯ ಪಾದಾರ್ಧದಲ್ಲಿ "ಮಾಧವಾರ್ಯಃ ಸಹೋದರಃ" ಎಂದೂ ಪಾಠವುಂಟು.]

ನಾವು ನೋಡಿರುವ ಈ ಗ್ರಂಥದ ಹಸ್ತಲಿಖಿತ ಪ್ರತಿಯನ್ನು ಓದುವುದು ಬಹುಪ್ರಯಾಸದ ಕೆಲಸ; ವಿಷಯವು ಪ್ರಕೃತ ಕಾಲಕ್ಕೆ ಅಷ್ಟು ಬೇಕಾಗಿಯೂ ಇಲ್ಲ.

## ೩. "ಪ್ರಾಯಶ್ಚಿತ್ತ ಸುಧಾನಿಧಿ"

ಇದಕ್ಕೆ "ಕರ್ಮವಿಪಾಕ"ವೆಂದೂ ಹೆಸರುಂಟು. ಇದು ನಾನಾ ಪಾತಕಗಳ ಪರಿಹಾರಕ್ಕೋಸ್ಕರ ಆಚರಿಸಬೇಕಾದ ಸತ್ಕರ್ಮಗಳನ್ನು ಕುರಿತುದು. ಇದರ ಪೀಠಿಕಾ ವಾಕ್ಯ ಪರಿಸಮಾಪನ ವಾಕ್ಯಗಳು* ಈ ರೀತಿ ಇವೆ:—

* *Indian Antiquary*, Vol. XLV.—1916, p. 2.

(ಸಂಗಮಸ್ಯ) ತಸ್ಯ ಮಂತ್ರಿಶಿರೋರತ್ನಮಸ್ತಿ ಮಾಯಣ ಸಾಯಣಃ ॥
ತೇನ ಮಾಯಣಪುತ್ರೇಣ ಸಾಯಣೇನ ಮನೀಷಿಣಾ।
ಗ್ರಂಥಃ ಕರ್ಮವಿಪಾಕಾಖ್ಯಃ ಕ್ರಿಯತೇ ಕರುಣಾವತಾ ॥....

ಇತಿ ಮಾಧವ ಭೋಗನಾಥ ಸಹೋದರಸ್ಯ ಮಾಯಣ ನಂದನಸ್ಯ ಸಾಯಣಾಚಾರ್ಯಸ್ಯ ಕೃತೌ ಪ್ರಾಯಶ್ಚಿತ್ತ ಸುಧಾನಿಧೌ ॥

ಈ ಗ್ರಂಥವೂ ಮುದ್ರಿತವಾಗಿರುವಂತೆ ಕಾಣುವುದಿಲ್ಲ. ಇದು ಬಹುಶಃ ಪರಾಶರ ಮಾಧವೀಯ ವ್ಯಾಖ್ಯಾನದ ಪ್ರಾಯಶ್ಚಿತ್ತ ಕಾಂಡಕ್ಕೆ ಸಂಗ್ರಹಪ್ರಾಯವಾಗಿರಬಹುದು.*

## ೪. "ಆಯುರ್ವೇದ ಸುಧಾನಿಧಿ"

ಇದು ವೈದ್ಯ ಗ್ರಂಥ. ಇದರ ಪ್ರತಿ ನಮಗೆ ದೊರೆತಿಲ್ಲ. ಇದು ಸಾಯಣರ ಪ್ರೇರಣೆಯಂತೆ ಏಕಾಮ್ರನಾಥನೆಂಬ ಪಂಡಿತನು ಬರೆದು ದೆಂಬುದನ್ನು ನಾವು ಆಗಲೇ (ಪುಟ ೧೧೪) ನೋಡಿದ್ದೇವೆ.

## ೫. "ಅಲಂಕಾರ ಸುಧಾನಿಧಿ"

ಇದು ಕವಿತೆಯ ಸ್ವರೂಪವನ್ನೂ ಅದರ ಅಂಗಾಂಗಗಳಾದ ನಾನಾ ಅಲಂಕಾರಗಳ ಪ್ರಕಾರವನ್ನೂ ನಿರೂಪಿಸತಕ್ಕ ಗ್ರಂಥ. ಇದರ ಸಂಪೂರ್ಣ ಪ್ರತಿ ದೊರೆತಿಲ್ಲ. ದೊರೆತಿರುವ ಭಾಗವೂ ಮುದ್ರಿತವಾಗಿಲ್ಲ.

---

* "ಕರ್ಮ ವಿಪಾಕ"ವೆಂಬ ಸಂಸ್ಕೃತ ಗ್ರಂಥವೊಂದು ಬೆಂಗಳೂರಿನ ವಾಜಪೇಯಂ ಕೃಷ್ಣಶಾಸ್ತ್ರಿ ವೇಂಕಟಾಪ್ಪಶಾಸ್ತ್ರಿಗಳವರಿಂದ ಕ್ರಿಸ್ತ ವರ್ಷ ೧೯೩೭ರಲ್ಲಿ ಮುದ್ರಿತವಾಗಿ ಪ್ರಕಟವಾಗಿದೆ. ಇದರ ಅಕ್ಷರ ತೆಲುಗಿನದು. ಇದರ ಕರ್ತೃವು "ಶ್ರೀಮನ್ಮದಲಿ ಭೂಪಾಲ ಶಿರೋಮಣಿ ತನೂಭವ ಶ್ರೀಮನ್ಮಾಂಧಾತೃ ಮಹೀಭುಜನು." ಇದರಲ್ಲಿ ಹತ್ತು ತರಂಗಗಳೂ ಒಂದು ವಿಶೇಷ ಪ್ರಕರಣವೂ ಇವೆ. ಇವುಗಳಲ್ಲಿ ಒಟ್ಟು ೪೨ ವಿಷಯಗಳಿವೆ. ದುಷ್ಕರ್ಮ ದುರಾಚಾರ ಫಲಿತಾಂಶಗಳಾದ ನಾನಾ ರೋಗಪೀಡೆಗಳ ಪರಿಹಾರಕ್ಕಾಗಿ ಮನುಷ್ಯರು ಆಚರಿಸಬೇಕಾದ ವಿವಿಧ ವ್ರತ ಪೂಜಾ ದಾನಾದಿ ಶಾಂತಿಕ್ರಿಯೆಗಳೇ ಆ ವಿಷಯಗಳು. ಈ ಗ್ರಂಥಕ್ಕೆ "ಮಹಾರ್ಣವ"ವೆಂದೂ ಹೆಸರುಂಟೆಂದು ಕೆಲವು ವಾಕ್ಯಗಳಲ್ಲಿ ಸೂಚನೆಯಿದೆ. ಇದರ ಕೆಲವು ಭಾಗಗಳು ಶ್ರೀ ವಿದ್ವಿಭಟ್ಟರ ಮಗ ಭಟ್ಟವಿಶ್ವೇಶ್ವರನಿಂದಲೂ, ಇನ್ನು ಕೆಲವು ಶ್ರೀ ನೀಲಕಂಠಾತ್ಮಜ ಭಟ್ಟ ಶಂಕರನಿಂದಲೂ, ಇನ್ನೂ ಕೆಲವು ರಾಮೇಶ್ವರಭಟ್ಟ ಸುತ ಮಾಧವಭಟ್ಟನಿಂದಲೂ ವಿರಚಿತವಾಗಿ, ಅಥವಾ ಸಂಕಲಿತವಾಗಿ, ಇರುವಂತೆ ಕಾಣುತ್ತದೆ. ಈ ಗ್ರಂಥಕ್ಕೂ ಸಾಯಣ ಕೃತವೆನಿಸಿರುವ "ಪ್ರಾಯಶ್ಚಿತ್ತ ಸುಧಾನಿಧಿ"ಗೂ ಸಂಬಂಧವೇನೂ ಇರಲಾರದು.

ನಾವು ನೋಡಿರುವುದು ಮೈಸೂರಿನ ಪ್ರಾಚ್ಯಕೋಶಾಗಾರ (Oriental Library) ದಲ್ಲಿರುವ ಹಸ್ತಲಿಖಿತ ಪ್ರತಿ. ಈ ಪ್ರತಿಯನ್ನು ಯಾವ ಮಾತೃಕೆಯಿಂದ ಎತ್ತಿ ಬರೆದಿರುವರೋ ಅದರಲ್ಲಿ ಉಪಕ್ರಮ ಉಪಸಂಹಾರ ಭಾಗಗಳು ನಷ್ಟವಾಗಿದ್ದುವಲ್ಲದೆ, ಆ ಮೂಲಪ್ರತಿಯಲ್ಲಿ ಲೇಖನ ಸ್ಖಾಲಿತ್ಯಗಳೂ ಲೆಕ್ಕವಿಲ್ಲದಷ್ಟು ಬಿದ್ದಿದ್ದಂತೆ ತೋರುತ್ತದೆ. ಗ್ರಂಥಕಾರರು ಸ್ವವಿಷಯವನ್ನೂ ಗ್ರಂಥರಚನೆಯ ಸಂದರ್ಭಗಳನ್ನೂ ಪ್ರಾರಂಭ ಶ್ಲೋಕಗಳಲ್ಲಿಯೂ ಪರಿಸಮಾಪನ ಶ್ಲೋಕಗಳಲ್ಲಿಯೂ ತಿಳಿಸುವುದು ಪದ್ಧತಿಯಷ್ಟೆ? ಈಗ ನಮಗೆ ಲಭ್ಯವಾಗಿರುವ "ಅಲಂಕಾರ ಸುಧಾನಿಧಿ"ಯ ಪ್ರತಿಯಲ್ಲಿ ಈ ಶ್ಲೋಕಗಳು ಇಲ್ಲದಿರುವುದರಿಂದ ಈ ಗ್ರಂಥದ ರಚನೆಯ ವಿವರಗಳನ್ನು ತಿಳಿದುಕೊಳ್ಳುವುದು ಅಸಾಧ್ಯವಾಗಿದೆ. ತಪ್ಪುಗಳು ಹೇರಳವಾಗಿರುವುದರಿಂದ ಅರ್ಥಮಾಡಿಕೊಳ್ಳುವುದೂ ಅನೇಕ ಕಡೆ ಕಷ್ಟವಾಗಿದೆ. ಆದರೆ ಇದು ಚರಿತ್ರಕಾರರ ದೃಷ್ಟಿಯಿಂದಲೂ ಕಾವ್ಯಮೀಮಾಂಸಕರ ದೃಷ್ಟಿಯಿಂದಲೂ ಸಹ ವಿಶೇಷ ಗಣ್ಯವಾಗಬೇಕಾದ ಗ್ರಂಥ. ಮಾಧವ ಸಾಯಣ ಭೋಗನಾಥರುಗಳ ವಿಷಯದಲ್ಲಿಯೂ, ಕಂಪಣ ಸಂಗಮ ರಾಜರುಗಳ ವಿಷಯದಲ್ಲಿಯೂ ಸಹ ಅನೇಕ ಸಂಗತಿಗಳು ಈ ಗ್ರಂಥದಲ್ಲಿ ಉದಾಹರಣೆಯಾಗಿ ಕೊಟ್ಟಿರುವ ಶ್ಲೋಕಗಳಿಂದ ಸೂಚಿತವಾಗುತ್ತವೆ. ಇಂಥಾ ಶ್ಲೋಕಗಳಲ್ಲಿ ಕೆಲವನ್ನು ಹಿಂದೆ ಉದ್ಧರಿಸಿದೆ: (ಪುಟ ೯೪–೧೦೬.) ಮತ್ತು ಸಕಲ ಶಾಸ್ತ್ರ ಪಾರದರ್ಶಿಗಳಾದ ಸಾಯಣಾಚಾರ್ಯರಿಗೆ ಕಾವ್ಯ ವಿಚಾರದಲ್ಲಿ ಎಂತಹ ಅಭಿಪ್ರಾಯಗಳಿದ್ದುವೆಂಬುದನ್ನು ತೋರಿಸುವುದಕ್ಕೂ ಈ ಗ್ರಂಥವು ಸಹಕಾರಿಯಾಗಿದೆ.*

ಈ ಗ್ರಂಥದ ಕರ್ತೃತ್ವದ ವಿಚಾರವನ್ನು ಹಿಂದೆ ನಡಿಸಿದ್ದಾಗಿದೆ (ಪುಟ ೧೧೫).

---

* ಹೀಗಿರುವುದರಿಂದ, ಈ ಗ್ರಂಥದ ತಾಲಪ್ರತಿಗಳು ಮತ್ತೆಲ್ಲಾದರೂ ಇದ್ದರೆ ಹುಡುಕಿ ಸಂಪಾದಿಸಿ, ಅವುಗಳನ್ನೆಲ್ಲಾ ಹೋಲಿಸಿ ನೋಡಿ, ಪರಿಶುದ್ಧ ಪ್ರತಿಯೊಂದನ್ನು ತಯಾರುಮಾಡಿ ಅಚ್ಚುಹಾಕಿಸುವುದು ಈ ವಿಷಯದಲ್ಲಿ ಅಭಿಮಾನವುಳ್ಳವರಿಗೆಲ್ಲ ಕರ್ತವ್ಯವಾಗಿದೆ.

ಸಮಗ್ರ ಗ್ರಂಥದಲ್ಲಿ ಹತ್ತು ಉನ್ಮೇಷ(ಪ್ರಕರಣ)ಗಳು ಇದ್ದಿರಬೇಕೆಂದು ಶ್ರೀಮಾನ್ ಪ್ರಾಕ್ತನ ವಿಮರ್ಶ ವಿಚಕ್ಷಣ ನರಸಿಂಹಾಚಾರ್ಯರವರು ಅಭಿಪ್ರಾಯಪಟ್ಟಿದ್ದಾರೆ.*

ಈ ಗ್ರಂಥದ ಮೊದಲನೆಯ ಪ್ರಕರಣ(ಉನ್ಮೇಷ)ದ ಕಡೆಯಲ್ಲಿ ಹೀಗೆ ಇದೆ:—

"ಇತಿ ಶ್ರೀಮತ್ಪೂರ್ವ ಪಶ್ಚಿಮ ದಕ್ಷಿಣೋತ್ತರ ಸಮುದ್ರಾಧಿಪತಿ ಬುಕ್ಕರಾಜ ಪ್ರಥಮದೇಶಿಕ ಮಾಧವಾಚಾರ್ಯಾನುಜನ್ಮನಃ, ಶ್ರೀಮತ್ಸಂಗಮರಾಜ ಸಕಲ ರಾಜ್ಯ ಧುರಂಧರಸ್ಯ, ಸಕಲ ವಿದ್ಯಾನಿದಾನ ಭೂತಸ್ಯ, ಭೋಗನಾಥಾಗ್ರಜನ್ಮನಃ ಶ್ರೀಮತ್ಸಾಯಣಾಮಾತ್ಯಸ್ಯ ಕೃತಾವಲಂಕಾರ ಸುಧಾನಿಧೌ "ಕಾವ್ಯಮಾರ್ಗ ಪ್ರತಿಷ್ಠಾಪನಂ" ನಾಮ ಪ್ರಥಮ ಉನ್ಮೇಷಃ"

ಎರಡನೆಯ ಉನ್ಮೇಷದ ಕಡೆಯಲ್ಲಿ ಇದೇ ರೀತಿಯಾಗಿ,—ಆದರೆ "ಬುಕ್ಕರಾಜ ಪ್ರಥಮಾರಾಧ್ಯ ಮಾಧವಾಚಾರ್ಯಾನುಜಾತಾತ್ಮನಃ" —ಎಂದು ಇದೆ; ಭೋಗನಾಥನ ಹೆಸರಿಲ್ಲ. ಈ ಉನ್ಮೇಷದ ವಿಷಯ "ಗುಣೀಭೂತ ವ್ಯಂಗ್ಯ."

ಮೂರನೆಯ ಉನ್ಮೇಷವು ಶಬ್ದಾಲಂಕಾರ ಅರ್ಥಾಲಂಕಾರಗಳನ್ನು ಕುರಿತುದು. ಇದರ ಆದಿಯಲ್ಲಿ—

"ಕ್ರಮಪ್ರಾಪ್ತಂ ತೃತೀಯಂ ಕಾವ್ಯಂ ಲಕ್ಷ್ಯಯತಿ ||
ಅಸ್ಮಿನ್‌ಪ್ರಸಂಗೇ ಗೋಪಾಲಸ್ವಾಮಿನಃ ಪದ್ಯಾನಿ ಕಾನಿಚಿಲ್ಲಿಖ್ಯಂತೇ"

—ಎಂದು ಇದೆ. ಗೋಪಾಲ ಸ್ವಾಮಿಗಳೆಂಬುವರಾರೋ ಊಹಿಸುವುದು ಸದ್ಯಃ ಸಾಧ್ಯವಿಲ್ಲ. ಈ ಮೂರನೆಯ ಉನ್ಮೇಷವು ಸಮಾಪನ ವಾಕ್ಯದವರೆಗೆ ಬರುವುದಕ್ಕೆ ಮುಂಚೆಯೇ ಗ್ರಂಥದ ಪ್ರತಿ ಮುಗಿದು ಹೋಗಿದೆ.

ಕಾವ್ಯದ ಸ್ವರೂಪವನ್ನು ಕುರಿತು ಈ ಗ್ರಂಥಕಾರರು ಕೊಟ್ಟಿರುವ ಅಭಿಪ್ರಾಯವನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುವೆವು.

---

* *Indian Antiquary,* Vol. XLV—1916, p. 22.

ಕಾವ್ಯವೆಂದರೇನು—ಎಂಬ ವಿಚಾರದಲ್ಲಿ ಅನೇಕ ಮತಗಳುಂಟು. ಉಪಮಾನ, ಉತ್ಪ್ರೇಕ್ಷೆ ಮೊದಲಾದ ಅರ್ಥಾಲಂಕಾರಗಳೆಂಬ ವರ್ಣನೆಯ ಉಪಾಯಗಳ ಮೂಲಕವೂ, ಪ್ರಾಸ ಮೊದಲಾದ ಶಬ್ದಾಲಂಕಾರಗಳೆಂಬ ಪದಸಂಯೋಜನೆಯ ಉಪಾಯಗಳ ಮೂಲಕವೂ ಒಂದರ್ಥವನ್ನು ಮನಸ್ಸಿಗೆ ಹಿಡಿಯುವ ರೀತಿಯಲ್ಲಿ ಹೇಳತಕ್ಕ ವಾಕ್ಯವೇ ಕಾವ್ಯವೆಂದು ಕೆಲವರು ಹೇಳುತ್ತಾರೆ. ಭಾಮಹ ಮೊದಲಾದವರು ಈ ಮತದವರು. ಅಲಂಕಾರವಿರಲಿ, ಇಲ್ಲದಿರಲಿ, ಒಂದು ವಿಚಿತ್ರವಾದ ಚಮತ್ಕಾರದ ರೀತಿಯಲ್ಲಿ ಮಾತುಗಳನ್ನು ಜೋಡಿಸಿ, ಆ ಜೋಡಣೆಯ ರೀತಿಯಿಂದ ಮನಸ್ಸನ್ನು ಹಿಡಿಯುವ ವಾಕ್ಯವೇ—ವಕ್ರೋಕ್ತಿಯೇ—ಕಾವ್ಯವೆಂದು ಇನ್ನು ಕೆಲವರು ಹೇಳುತ್ತಾರೆ. ಕುಂತಕ ಮೊದಲಾದವರು ಈ ಮತದವರು. ವಾಕ್ಯದ ರೀತಿಯು ಹೇಗಾದರಿರಲಿ, ಅದರೊಳಗೆ ರಸವಿದ್ದರೆ ಅದೇ ಕಾವ್ಯವೆಂದು ಮತ್ತೆ ಕೆಲವರು ಹೇಳುತ್ತಾರೆ. ಭರತಾದಿಗಳದು ಈ ಮತ. ವಾಕ್ಯದಲ್ಲಿ ರಸವಿರಬೇಕಾದುದೇನೋ ಸರಿ; ಆದರೆ ಈ ರಸವು ವಾಕ್ಯದ ಪದಗಳ ಸೂಚನೆಯಿಂದ ಅಥವಾ ''ವ್ಯಂಗ್ಯ''ದಿಂದ ಹುಟ್ಟುವುದಾಗಿರಬೇಕು—ಎಂದರೆ, ವಾಕ್ಯದಲ್ಲಿ ರಸೋತ್ಪಾದಕವಾದ ''ಧ್ವನಿ''ಯಿದ್ದರೆ ತಾನೆ ಅದು ಕಾವ್ಯ—ಎಂದು ಇನ್ನು ಕೆಲವರು ಹೇಳುತ್ತಾರೆ. ಆನಂದವರ್ಧನರೇ ಮೊದಲಾದವರದು ಈ ಮತ.*

ಈ ನಾನಾ ಮತಗಳನ್ನೂ ಅವುಗಳ ಪ್ರಭೇದಗಳನ್ನೂ ''ಅಲಂಕಾರ ಸುಧಾನಿಧಿ''ಕಾರರು ವಿಮರ್ಶೆಮಾಡಿ ಆನಂದವರ್ಧನಾಚಾರ್ಯರ ಮತವನ್ನೇ ಅಂಗೀಕರಿಸಿದ್ದಾರೆ.

ತದ್ವ್ಯಂಗ್ಯ ಏವ ವಾಕ್ಯಾರ್ಥಃ ಕಾವ್ಯಜೀವಿತಮಿಷ್ಯತೇ ।
ವಾಕ್ಯಾರ್ಥವಿತ್ಸಹೃದಯ ಗ್ರಾಹ್ಯಃ ಪಕ್ಷೋಯಮೇವಹಿ ॥....
ಪ್ರಾಧಾನ್ಯೇನ ಧ್ವನಿಕೃತಾ ತದೇವಂ ಸ್ಥಾಪಿತೋ ಧ್ವನಿಃ ।
ನಿರಸ್ಯ ಮತಮನ್ಯೇಷಾಮಾಲಂಕಾರಿಕಮಾನಿನಾಮ್ ॥

* ಕಾವ್ಯ ಸ್ವರೂಪ ಜಿಜ್ಞಾಸೆಯ ಪರಿಚಯವಿಲ್ಲದವರು ನಮ್ಮ ವಾಚಕರಲ್ಲಾರಾದರೂ ಇದ್ದು, ಅವರು ಇದನ್ನು ತಿಳಿದುಕೊಳ್ಳಬೇಕೆಂದು ಇಷ್ಟಪಟ್ಟರೆ, ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ ''ಕನ್ನಡ ಕೈಪಿಡಿ''ಯ ಮೊದಲನೆಯ ಸಂಪುಟದ ಮೂರನೆಯ ಭಾಗವು ಅಂಥವರಿಗೆ ಪ್ರಯೋಜನಕಾರಿಯಾದೀತೆಂದು ಇಲ್ಲಿ ಸೂಚಿಸಬಹುದು.

ಪ್ರಧಾನಗುಣಭಾವಾಭ್ಯಾಂ ವ್ಯಂಗ್ಯಸ್ಯೋತ್ತಮಮಧ್ಯಮೇ।
ಕಾವ್ಯೇ ಧ್ವನಿರ್ಗುಣೀಭೂತವ್ಯಂಗ್ಯಮಿತ್ಯುದಿತೇ ಉಭೇ॥
ತಸ್ಯಾಸ್ಫುಟತ್ವೇಲಂಕಾರಪ್ರಾಧಾನ್ಯೇ ಕಾವ್ಯಮಿಷ್ಯತಿ।
ಚಿತ್ರಶಬ್ದಾರ್ಥ ವಿಷಯಮಧಮಂ ಚಿತ್ರಮಿತ್ಯಪಿ॥

ಯಸ್ಮಿನ್ ಕಾವ್ಯೇ ವಾಚ್ಯಾದ್ವ್ಯಂಗ್ಯಸ್ಯ ಪ್ರಾಧಾನ್ಯಂ ತತ್ಕಾವ್ಯಮುತ್ತಮಧ್ವನಿರಿತಿ ಚ ವ್ಯಪದಿಶ್ಯತೇ।ಯತ್ರ ಪುನರ್ವ್ಯಂಗ್ಯೋ ವಾಚ್ಯಾದೇರುಪಸರ್ಜನೀ ಭವತಿ ತನ್ಮಧ್ಯಮಂ ಗುಣೀಭೂತವ್ಯಂಗ್ಯ ಮಿತಿ ಚೋಚ್ಯತೇ।ಯತ್ರ ತು ವ್ಯಂಗ್ಯಸ್ಯಾಸ್ಫುಟತ್ವಂ ಚಿತ್ರ ಶಬ್ದಾರ್ಥ ವಿಷಯಾಲಂಕಾರ ಪ್ರಾಧಾನ್ಯವತ್ತತ್ಕಾವ್ಯಮಧಮಂ॥....

ದೋಷಾ ಗುಣಾ ಅಲಂಕಾರಾಸ್ಸರ್ವೇಪಿ ರಸಗೋಚರಾಃ।
ಕಾವ್ಯಸ್ಯಾತ್ಮಾ ರಸೋಯಸ್ಮಾದಾತ್ಮಧರ್ಮಾಶ್ಚ ತೇಯತಃ॥..
ಮಾಧುರ್ಯೌಜಃ ಪ್ರಸಾದಾಖ್ಯಾಸ್ತ್ರಯ ಏವ ಗುಣಾ ಇಹ।..
ತ್ರೈಗುಣ್ಯಾಮೇತದವಲಂಬ್ಯ ಗುಣಾಂತರಾಣಾ।
ಮುತ್ಪತ್ತಿಮೂಲಮುಪಕಲ್ಪಿತ ವೈಶ್ವರೂಪ್ಯಃ॥
ಆತ್ಮಾ ರಸಧ್ವನಿರನಾಕುಲಯನ್ನಭಿಖ್ಯಾಂ।
ಲೋಕೋತ್ತರಃ ಸ್ಫುರತಿ ಕಾವ್ಯಮಯೇ ಶರೀರೇ॥

[''ವ್ಯಂಗ್ಯ''ವೇ (ಎಂದರೆ, ವಾಕ್ಯವನ್ನು ಶಬ್ದಶಃ ಅರ್ಥಮಾಡಿದರೆ ತಿಳಿದು ಬರುವ ಪ್ರತ್ಯಕ್ಷ ಸಂದರ್ಭವಲ್ಲದೆ, ಅದರ ರೀತಿ ವಿಶೇಷದಿಂದ ಮನಸ್ಸಿಗೆ ಹೊಳೆಯುವ ಭಾವವೇ, ಅಥವಾ ''ಧ್ವನಿ''ಯೇ) ಕಾವ್ಯಕ್ಕೆ ಜೀವ. ಈ ''ವ್ಯಂಗ್ಯ''ವು ಎಷ್ಟೆಷ್ಟು ಮಾತ್ರ ಇರುವುದೋ ಅದನ್ನನುಸರಿಸಿ ಕಾವ್ಯವು ಉತ್ತಮ, ಮಧ್ಯಮ, ಅಧಮವೆಂದು ಮೂರು ತೆರನಾಗಿರುತ್ತದೆ. ಉತ್ತಮ ಕಾವ್ಯದಲ್ಲಿ ''ವಾಚ್ಯ'' ಅಥವಾ ಸ್ಪಷ್ಟವಾದ ಅರ್ಥಕ್ಕಿಂತ ಧ್ವನಿತವಾದ ಭಾವವೇ ಹೆಚ್ಚಾಗಿರುತ್ತದೆ. ಮಧ್ಯಮ ಕಾವ್ಯದಲ್ಲಿ ವಾಚ್ಯವು ಮುಖ್ಯವಾಗಿ ವ್ಯಂಗ್ಯವು ಅದಕ್ಕೆ ಸಹಾಯವಾಗಿ ಸೇರಿರುತ್ತದೆ. ಅಧಮ ಕಾವ್ಯದಲ್ಲಿ ''ಧ್ವನಿ''ಯು (ಅಥವಾ ವ್ಯಂಗ್ಯವು) ಕಡಮೆಯಾಗಿ ಅಲಂಕಾರ ವೈಚಿತ್ರ್ಯವೇ ಹೆಚ್ಚಾಗಿರುತ್ತದೆ.

ಕಾವ್ಯಕ್ಕೆ ''ರಸ''ವೆಂಬುದೇ ಆತ್ಮ. ಕಾವ್ಯದ ದೋಷಗಳೂ, ಗುಣಗಳೂ ಅಲಂಕಾರಗಳೂ ಈ ''ರಸ''ದ ದೃಷ್ಟಿಯಿಂದ ನಿಶ್ಚಿತವಾಗುತ್ತವಾದ ಕಾರಣ, ಅವುಗಳನ್ನು ಕಾವ್ಯಾಂತರ್ಗತವಾದ ರಸದ ಧರ್ಮಗಳೆಂದೇ ಹೇಳಬಹುದು.

ಮಾಧುರ್ಯ, ಓಜಸ್ಸು, ಪ್ರಸಾದ—ಇವು ಮೂರೂ ಕಾವ್ಯ ಗುಣಗಳು.

ರಸಧ್ವನಿಯೆಂಬ ಆತ್ಮನು ಕಾವ್ಯವೆಂಬ ಶರೀರದಲ್ಲಿದ್ದುಕೊಂಡು ಈ ಮೂರು ಗುಣಗಳಿಂದ ಇತರ ಗುಣಗಳನ್ನು ಕಲ್ಪಿಸಿಕೊಂಡು, ಅನಂತ ರೂಪಗಳನ್ನು ಧರಿಸಿದಂಥವನಾಗಿ, ಕೀರ್ತಿಯನ್ನು ಪಡೆದು ಲೋಕೋತ್ತರನಾಗಿ ಶೋಭಿಸುತ್ತಾನೆ.]

"ಕವಿ"—ಕಾವ್ಯವನ್ನು ನಿರ್ಮಿಸಹೊರಡುವವನು—ಎಂಥವನಾಗಿರಬೇಕು? ಈ ಪ್ರಶ್ನೆಗೆ "ಅಲಂಕಾರ ಸುಧಾನಿಧಿ"ಕಾರರ ಉತ್ತರವು ಇಲ್ಲಿದೆ:—

ಕಾವ್ಯಮೇವ ಫಲಂ ಕರ್ತುಂ ಸ ಏವ ನಿಯುತಂ ಪ್ರಭುಃ।
ಶಕ್ತಿವ್ಯುತ್ಪತ್ತಿಸಾಮಗ್ರೀ ಸಂಪೂರ್ಣಾ ಯಸ್ಯ ವಿದ್ಯತೇ ॥
ಶಕ್ತಿಃ ಕವಿತ್ವಬೀಜಂ ಹಿ ಪ್ರಾಕ್ತನೀ ಕಾಪಿ ಸಂಸ್ಕ್ರಿಯಾ।
ಯಯಾ ವಿನಾ ನ ಪ್ರಸರೇತ್ ಕಾವ್ಯಂ ಶಿಕ್ಷಾವತಾಮಪಿ ॥....
ಪ್ರಜ್ಞಾ ನವನವೋಲ್ಲೇಖಶಾಲಿನೀ ಪ್ರತಿಭಾ ಮತಾ।
ತದನುಪ್ರಾಣನಾಜೀವದ್ವರ್ಣನಾ ನಿಪುಣಃ ಕವಿಃ ॥....
ವ್ಯುತ್ಪತ್ತಿರ್ಲೋಕಚಾರಿತ್ರ ಶಾಸ್ತ್ರ ಕಾವ್ಯಾದ್ಯವೇಕ್ಷಣಂ।
ಅಭ್ಯಾಸ ಉಪದೇಶೇನ ಕಾವ್ಯಜ್ಞಾನಾಂ ಚ ಸಮ್ಮತಾ ॥....
ಅಜ್ಞಾತ ಲೋಕವೃತ್ತೋ ಯಃ ಕಾವ್ಯಶಾಸ್ತ್ರವಿದಪ್ಯಸೌ।
ಋಷ್ಯಶೃಂಗ ಇವಾಶೇಷೈಃ ಘೃಷ್ಯತೇ ಮುಗ್ಧಸಂಸದಿ ॥

[ಯಾರಿಗೆ ಶಕ್ತಿ ವ್ಯುತ್ಪತ್ತಿಗಳು ಸಂಪೂರ್ಣವಾಗಿರುತ್ತವೆಯೋ ಆತನೇ ಕಾವ್ಯ ನಿರ್ಮಾಣಕ್ಕೆ ತಕ್ಕ ಅಧಿಕಾರಿ. ಶಕ್ತಿಯೆಂಬುದು ಜನ್ಮಾಂತರ ಸಂಸ್ಕಾರದ ಫಲ. ಅದೇ ಕಾವ್ಯಕ್ಕೆ ಬೀಜ; ಅದಿಲ್ಲದಿದ್ದರೆ ಎಂತಹ ಪಂಡಿತರಿಂದಲಾದರೂ ಕಾವ್ಯವು ಹುಟ್ಟಲಾರದು. ಆ ಶಕ್ತಿಗೆ ಪ್ರತಿಭೆಯೆಂದು ಹೆಸರು. ಯಾವಾಗಲೂ ಹೊಸ ಹೊಸ ಪರಿಗಳಲ್ಲಿ ಹೊಳೆಯುತ್ತಿರುವ ಪ್ರಜ್ಞಾವಿಶೇಷವೇ ಪ್ರತಿಭೆ. ಈ ಪ್ರತಿಭೆಯನ್ನು ಅವಲಂಬಿಸಿಕೊಂಡು ಜೀವಿಸಿ ಬಣ್ಣಿಸುವವನೇ ಕವಿ. ಕವಿಗೆ ಇರಬೇಕಾದ ಇತರ ಸಾಧನಗಳು ಯಾವುವೆಂದರೆ:—ವ್ಯುತ್ಪತ್ತಿ, ಲೋಕಪರಿಸ್ಥಿತಿಯ ಜ್ಞಾನ, ಶಾಸ್ತ್ರ ಕಾವ್ಯಗಳ ಪರಾಮರ್ಶ, ಅಭ್ಯಾಸ, ಕಾವ್ಯಜ್ಞರ ಉಪದೇಶ ಅಭಿಪ್ರಾಯಗಳು—ಇವು. ಲೋಕದ ನಡೆವಳಿಕೆಯನ್ನರಿಯದವನು ಕಾವ್ಯಶಾಸ್ತ್ರಗಳನ್ನರಿತವನಾದರೂ, ಅವನು ಋಷ್ಯಶೃಂಗನಂತೆ ಅಪ್ರಬುದ್ಧರ ಗುಂಪಿನಲ್ಲಿ ಹುಡುಗಾಟಕ್ಕೆ ಈಡಾಗುತ್ತಾನೆ.]

ಕವಿಯ ಮಹತ್ತ್ವವೆಷ್ಟರದು? ಈ ವಿಚಾರದಲ್ಲಿ ಈ ಕೆಳಗಣ ವಾಕ್ಯಗಳಿವೆ:—

ಕವೀನಾಂ ಲೋಕೋತ್ತರತ್ವಂ ವೇದೇಪಿ ವಿಶಿಷ್ಟ ದೇವತಾವಾಚಕತ್ವೇನ॥ "ಅನಂತಮವ್ಯಯಂ ಕವಿಂ। ಕವಿಂ ಕವೀನಾಮುಪಮಶ್ರವಸ್ತಮಂ। ಕವಿಂ ಸಮ್ರಾಜಮತಿಥಿಂ ಜನಾನಾಮ್"—ಇತ್ಯಾದೌ ಪ್ರತಿಪಾದಿತತ್ವಾತ್॥ ವ್ಯಾಸ ವಾಲ್ಮೀಕಿ ಪ್ರಭೃತಿಷು ಬ್ರಹ್ಮಣೋ ಮುಖೇನ ಪ್ರತಿಪಾದನಾತ್ ಕ್ರಾಂತದರ್ಶಿನಾಂ ಕವೀನಾಂ ಲೋಕೋತ್ತರತ್ವಂ॥ ಏವಂ ಲೋಕವೃತ್ತಾಂತ ಶಾಸ್ತ್ರಕಾವ್ಯಾದ್ಯವಲೋಕನರೂಪ ವ್ಯುತ್ಪತ್ತಿ ಭೇದಂ ವ್ಯಾಖ್ಯಾಯ, ಸಾಂಪ್ರತಂ ಕಾವ್ಯಜ್ಞಾನಾಮುಪದೇಶೇನ ತೈಸ್ಸಹಾಭ್ಯಾಸರೂಪಂ ವ್ಯುತ್ಪತ್ತಿ ಭೇದಂ ಪ್ರಾಕ್ಪ್ರತಿಪಾದಿತಾರ್ಥ ಪ್ರದರ್ಶನ ಪುರಸ್ಸರಂ ವಿವೃಣೋತಿ॥

ಏವಂ ಲೋಕಸ್ಯ ಶಾಸ್ತ್ರಾಣಾಂ ಕಾವ್ಯಾನಾಮುಪಿವೇದಿತಾ।
ಪ್ರತಿಭಾವಾನ್ ಪ್ರವರ್ತೇತ ಕಾವ್ಯಜ್ಞೈಃ ಕಾವ್ಯಕರ್ಮಣಿ (ಸು)॥

[ವೇದದ ಅನೇಕ ವಾಕ್ಯಗಳಲ್ಲಿ "ಕವಿ" ಎಂಬ ಪದವು ಸಮಸ್ತ ದೇವತೆಗಳ ವಿಷಯದಲ್ಲಿಯೂ ಉಪಯೋಗಿಸಲ್ಪಟ್ಟಿರುವುದರಿಂದಲೇ ಕವಿಯ ಲೋಕೋತ್ತರ(ಅಸಾಧಾರಣ)ತ್ವವು ಗೊತ್ತಾಗುತ್ತದೆ. ವ್ಯಾಸ ವಾಲ್ಮೀಕಿ ಮೊದಲಾದ ಮಹಾ ಕವಿಗಳು ಬ್ರಹ್ಮನಿಂದ ಪ್ರಶಂಸೆಮಾಡಲ್ಪಟ್ಟಿರುವರೆಂಬುದರಿಂದಲೂ ಸರ್ವಜ್ಞರಾದಂಥಾ ಕವಿಗಳ ಲೋಕೋತ್ತರತ್ವವು ವ್ಯಕ್ತವಾಗುತ್ತದೆ. ಪ್ರಪಂಚದ ವೃತ್ತಾಂತ, ಶಾಸ್ತ್ರ, ಕಾವ್ಯ—ಇವುಗಳ ವ್ಯಾಸಂಗದಿಂದ ಒಂದು ಬಗೆಯ ವ್ಯುತ್ಪತ್ತಿಯುಂಟಾಗುತ್ತದೆ. ಕಾವ್ಯ ಮರ್ಮಜ್ಞರ ಉಪದೇಶ, ಕವಿತ್ವ ಮಾಡುವ ಅಭ್ಯಾಸ—ಇವುಗಳಿಂದ ಇನ್ನೊಂದು ಬಗೆಯ ವ್ಯುತ್ಪತ್ತಿಯುಂಟಾಗುತ್ತದೆ. ಹೀಗೆ ಲೋಕ, ಶಾಸ್ತ್ರ, ಕಾವ್ಯ ಇವುಗಳ ಪರಿಶೀಲನೆ ಮಾಡಿರುವಂಥಾ ಪ್ರತಿಭಾಶಾಲಿಯನ್ನು ಕಾವ್ಯಜ್ಞರು ಕವಿತ್ವರಚನೆಗೆ ಪ್ರೇರಿಸಬೇಕು.]

ಈ ತತ್ತ್ವಗಳು ಭಾರತೀಯ ಕಾವ್ಯ ಮೀಮಾಂಸಕರ ದೃಷ್ಟಿಯಿಂದ ನೋಡಿದರೂ, ಆಂಗ್ಲೇಯ ಕಾವ್ಯ ವಿಮರ್ಶಕಾರರ ದೃಷ್ಟಿಯಿಂದ ನೋಡಿದರೂ ಸಹ ಪರಿಗ್ರಾಹ್ಯವಾಗಿ ಕಾಣುತ್ತವೆ.

## ೬. "ಧಾತುವೃತ್ತಿ"

ಇದು ಸಂಸ್ಕೃತ ವ್ಯಾಕರಣ ಗ್ರಂಥ. ಸಂಸ್ಕೃತ ಭಾಷೆಯ ಮಾತುಗಳು ಬಹುವಾಗಿ ಧಾತುಗಳಿಂದ ಹುಟ್ಟಿದುವು. ಈ ಧಾತುಗಳ ಜಾತಿಗಳೂ ನಿಬಂಧನೆಗಳೂ ನಾನಾ ಪ್ರಕಾರಗಳಾಗಿರುವುವು. ಇವುಗಳ ರೂಪನಿಷ್ಪತ್ತಿ ಕ್ರಮವನ್ನರಿತುಕೊಳ್ಳುವುದೇ ಸಂಸ್ಕೃತ ಭಾಷಾಭ್ಯಾಸಿಗಳಿಗೆ ಇರತಕ್ಕ ದೊಡ್ಡ ಕಷ್ಟ. ಈ ಕಷ್ಟವನ್ನು ಸಾಯಣಾಚಾರ್ಯರ ಕಾಲಕ್ಕೆ ಹಿಂದಿದ್ದವರೂ ಅನುಭವಿಸುತ್ತಿದ್ದರೆಂದು ಪ್ರಾಚೀನ ವಾಕ್ಯಗಳಿಂದಲೇ ಗೊತ್ತಾಗುತ್ತದೆ. ಈ ಕಷ್ಟವನ್ನು ಹೋಗಲಾಡಿಸಿ ಗೀರ್ವಾಣ ವಿದ್ಯಾರ್ಥಿಗಳ ಕೆಲಸವನ್ನು ಸುಲಭಗೊಳಿಸುವುದೇ ಈ ಗ್ರಂಥದ ಉದ್ದೇಶ. ಇದರಲ್ಲಿ ಶಾಕಟಾಯನ ಮೊದಲಾದ ಅನೇಕ ಪುರಾತನ ವೈಯಾಕರಣರ ಮತಗಳು ಚರ್ಚಿತಗಳಾಗಿ, ಕಾಳಿದಾಸಾದಿ ಮಹಾಕವಿಗಳ ಪದ್ಯಗಳು ಉದಾಹೃತಗಳಾಗಿವೆ. ಇದರ ಪ್ರಾರಂಭ ಶ್ಲೋಕಗಳಲ್ಲಿ ಈ ಕೆಳಗಿನವು ಮಾಧವ ಸಾಯಣ ಸಮಯದ ಐತಿಹಾಸಿಕ ಸಂದರ್ಭಗಳಿಗೆ ಪ್ರಮಾಣಗಳಾಗಿವೆ:—

ಅಸ್ತಿ ಶ್ರೀ ಸಂಗಮಕ್ಷ್ಮಾಪಃ ಪೃಥ್ವೀತಲಪುರಂದರಃ।
ಯತ್ಕೀರ್ತಿಮೌಕ್ತಿಕಾದರ್ಶೇ ತ್ರಿಲೋಕ್ಯಾಪ್ರತಿಬಿಂಬ್ಯತೇ ॥ ..
ತಸ್ಯ ಮಂತ್ರಿ ಶಿರೋರತ್ನಮಸ್ತಿ ಮಾಯಣ ಸಾಯಣಃ।
ಯಃ ಖ್ಯಾತಿಂ ರತ್ನಗರ್ಭೇತಿ ಯಥಾರ್ಥಯತಿ ಪಾರ್ಥಿವೀಂ ॥..
ತೇನ ಮಾಯಣ ಪುತ್ರೇಣ ಸಾಯಣೇನ ಮನೀಷಿಣಾ।
ಆಖ್ಯಯಾ ಮಾಧವೀಯೇಯಂ ಧಾತುವೃತ್ತಿರ್ವಿರಚ್ಯತೇ ॥ ....

ಈ ಗ್ರಂಥವನ್ನು ಮೈಸೂರು ಸರಕಾರದ "ಓರಿಯಂಟಲ್ ಲೈಬ್ರರಿ"ಯವರು ಸಮರ್ಪಕವಾದ ರೀತಿಯಲ್ಲಿ ಅಚ್ಚುಮಾಡಿಸಿ, ಪಂಡಿತರತ್ನ ಕಸ್ತೂರಿರಂಗಾಚಾರ್ಯರವರ ಸಂಸ್ಕೃತ ಭೂಮಿಕೆಯನ್ನೂ ಪಂಡಿತ ಮಹಾದೇವಶಾಸ್ತ್ರಿಗಳವರ ಇಂಗ್ಲಿಷ್ ಪೀಠಿಕೆಯನ್ನೂ ಸೇರಿಸಿ (ನಾಲ್ಕು ಸಂಪುಟಗಳಲ್ಲಿ) ಪ್ರಕಾಶಗೊಳಿಸಿದ್ದಾರೆ.

ಈ ಗ್ರಂಥದಲ್ಲಿ ಒಂದೆರಡು ಕಡೆ ದೋಷಗಳು ಕಂಡುಬರುತ್ತವೆಯೆಂಬ ಆಕ್ಷೇಪಣೆಯನ್ನು ಹಿಂದೆ ಸೂಚಿಸಿದೆಯಲ್ಲವೆ (ಪುಟ ೧೧೪)?

ಅದಕ್ಕೆ ಸಮಾಧಾನವನ್ನು ಪಂಡಿತರತ್ನ ಕಸ್ತೂರಿರಂಗಾಚಾರ್ಯರೇ ಈ ಮಾತುಗಳಲ್ಲಿ ಕೊಟ್ಟಿದ್ದಾರೆ:—

"ಸಂತು ವಾ ದುರುದ್ಧರಾ ಏವ ಕತಿಪಯೇ ದೋಷಾಃ। ನೈತಾವತಾ ದುರವಧಾರಣಾಖಿಲ ಶಬ್ದಾನ್ವ್ಯಾಖ್ಯಾನ ಪ್ರಕ್ರಿಯಾವಧಾರಣಾವರಣಾಂಧತಮಸ ಸಮೂಲೋನ್ಮೂಲನ ನಿಪುಣ ಧಾಮನಿ ಧಾತುವೃತ್ತಿನಾಮನಿ ಸುಧಾಧಾಮನಿ ಕಸ್ಯಚಿತ್ಕಲಂಕಲೇಶಶಂಕಯಾಽನಾದರಣಾವತರಣಂ ಸಂಭಾವ್ಯತೇ। ಗುಣಭೂಯಸ್ತ್ವೇನಾಲ್ಪೀಯಸೋ ದೋಷಸ್ಯ ತಿರೋಧಾನಾತ್ ॥ ಧಾತುವೃತ್ತೇರ್ದೂಷಣಮುದ್ಭಾವಯಂತೋಽಪಿ ಚ ಗ್ರಂಥಕಾರಾ ಬಹುಷು ಪ್ರದೇಶಾಂತರೇಷು ಪರದೂಷಣ ಪ್ರಸಂಗೇ ಮಾಧವ ಗ್ರಂಥವಿರೋಧಮೇವ ಪ್ರಾಧಾನ್ಯೇನ ತದ್ದೂಷಣ ಸಾಧನತಯಾ ನಿರ್ದಿಶಂತಃ ಪ್ರಾಮಾಣಿಕ ಪ್ರಬಂಧಗಣಮೂರ್ಧನ್ಯಮಿಮಂ ಧಾತುವೃತ್ತಿಪ್ರಬಂಧ ಮನುಸಂದಧಿರೇ ॥ ತಸ್ಮಾದಂಜಸಾ ಸಾಧ್ವಸಾಧು ಶಬ್ದಸ್ವರೂಪಾವಧಿಧಾರಯಿಷುಭಿಃ ಪ್ರಾಕ್ತನ ನಾನಾ ನಿಬಂಧಾಶಯಾನೇಕತ್ರ ಸಾಕಲ್ಯೇನ ಚಿಕೀರ್ಷುಭಿಶ್ಚಾಖಿಲೈರಪ್ಯಸುಕಲಮಯಂ ಧಾತುವೃತ್ತಿನಾಮಾ ಪ್ರಬಂಧಃ ಪರಿಶೀಲನೀಯೋಽವಶ್ಯಮಿತಿ ಸಕಲಮಿತಿ ಭದ್ರಂ॥"

[ಇಂಥಾ ದೊಡ್ಡ ಕೆಲಸದಲ್ಲಿ ಒಂದೆರಡು ತಪ್ಪುಗಳೂ ಇಲ್ಲದಂತೆ ಮಾಡುವುದು ಅಸಾಧ್ಯವೇ ಸರಿ. ಸಮಸ್ತ ಕ್ಲಿಷ್ಟ ಶಬ್ದಗಳ ರೂಪಪ್ರಕ್ರಿಯೆಗಳನ್ನು ಆವರಿಸಿಕೊಂಡಿರುವ ಕತ್ತಲೆಯನ್ನು ಹೋಗಲಾಡಿಸತಕ್ಕಂಥಾ ಸಾಮರ್ಥ್ಯವುಳ್ಳ ಬೆಳಕಿಗೆ ಮನೆಯಾಗಿರುವ ಈ ಧಾತುವೃತ್ತಿಯಲ್ಲಿ ಎಲ್ಲೋ ಸ್ವಲ್ಪ ಕಳಂಕವಂಟಿಕೊಂಡಿರಬಹುದೆಂಬ ಸಂದೇಹದಿಂದ ಅನಾದರಣೆ ಮಾಡುವುದು ತರವಲ್ಲ॥ ಇದರ ಗುಣ ಬಾಹುಳ್ಯವು ಇದರ ಸ್ವಲ್ಪ ದೋಷವನ್ನು ಮುಳುಗಿಸತಕ್ಕಂಥಾದ್ದಾಗಿದೆ ॥ ಧಾತುವೃತ್ತಿಯಲ್ಲಿ ದೋಷವುಂಟೆಂದು ಹೇಳುವ ಗ್ರಂಥಕಾರರೇ ಅನ್ಯರನ್ನು ದೂಷಣೆಮಾಡುವ ಸಂದರ್ಭಗಳಲ್ಲಿ ಆ ಅನ್ಯರು ಮಾಧವರ (ಧಾತುವೃತ್ತಿ) ಗ್ರಂಥಕ್ಕೆ ವಿರೋಧವಾಗಿ ಬರೆದಿರುವರೆಂಬುದನ್ನೇ ಅವರ ಮುಖ್ಯ ದೋಷವನ್ನಾಗಿ ಹೇಳಿ, ಆ ಮೂಲಕ ಈ ಧಾತುವೃತ್ತಿಯು ಪ್ರಮಾಣ ಗ್ರಂಥ ಸಮುದಾಯದಲ್ಲಿ ಅಗ್ರಗಣ್ಯವೆಂದು ಅಂಗೀಕರಿಸಿದ್ದಾರೆ ॥ ಆದಕಾರಣದಿಂದ, ಮಾತುಗಳ ಒಪ್ಪುತಪ್ಪುಗಳನ್ನು ತಿಳಿದುಕೊಳ್ಳಬೇಕೆಂಬವರೂ, ಅನೇಕ ಪೂರ್ವಿಕ ಗ್ರಂಥ ಸಿದ್ಧಾಂತಗಳನ್ನು ಒಂದೇ ಕಡೆ ನೋಡಲಿಚ್ಛಿಸುವವರೂ, ಎಲ್ಲರೂ ಈ "ಧಾತುವೃತ್ತಿ"ಯೆಂಬ ಪ್ರಬಂಧವನ್ನು ಅವಶ್ಯವಾಗಿ ಪರಿಶೀಲಿಸತಕ್ಕದು.]

## ೭. "ಪುರುಷಾರ್ಥ ಸುಧಾನಿಧಿ"

ಇದು (೧ನೆಯ) "ಸುಭಾಷಿತ ಸುಧಾನಿಧಿ"ಯ ಜಾತಿಗೆ ಸೇರಿದ ಗ್ರಂಥ. ಇದೂ ಅಮುದ್ರಿತವಾಗಿದೆ. ಇದರ ರಚನೆಯ ಸಂದರ್ಭಗಳು ಉಪಕ್ರಮೋಪಸಂಹಾರ ಶ್ಲೋಕಗಳಿಂದ ಸ್ಪಷ್ಟವಾಗುತ್ತವೆ:—

ಸತ್ಯೈಕ ವ್ರತಪಾಲಕೋ ದ್ವಿಗುಣಧೀಸ್ತ್ರ್ಯರ್ಥೀ ಚತುರ್ವೇದಿತಾ।
ಪಂಚಸ್ಕಂಧ ಕೃತೀ ಷಡನ್ವಯದೃಢಃ ಸಪ್ತಾಂಗ ಸರ್ವಂಸಹಃ ॥
ಅಷ್ಟವ್ಯಕ್ತಿ ಕಲಾಧರೋ ನವನಿಧಿಃ ಪುಷ್ಯದ್ದಶಪ್ರತ್ಯಯಃ।
ಸ್ಮಾರ್ತೋರ್ಜಿತಾಶ್ರಯಧುರಂಧರೋ ವಿಜಯತಾಂ ಶ್ರೀ ಬುಕ್ಕಣ ಕ್ಷ್ಮಾಪತಿಃ ॥

ಇಂದ್ರಸ್ಯಾಂಗಿರಸೋ ನಲಸ್ಯ ಸುಮತಿಃ ಶೈಬ್ಯಸ್ಯ ಮೇಧಾತಿಥಿಃ।
ಧೌಮ್ಯೋ ಧರ್ಮಸುತಸ್ಯ ವೈನ್ಯನೃಪತೇಃ ಸ್ವೌಜಾ ನಿಮೇರ್ಗೌತಮಃ ॥

ಪ್ರತ್ಯಗ್ದೃಷ್ಟಿರರುಂಧತೀ ಸಹಚರೋ ರಾಮಸ್ಯ ಪುಣ್ಯಾತ್ಮನೋ।
ಯದ್ವತ್ತಸ್ಯ ವಿಭೋರಭೂತ್ ಕುಲಗುರುರ್ಮಂತ್ರೀತಥಾ ಮಾಧವಃ ॥

ತಂ ಸರ್ವವಿದ್ಯಾನಿಲಯಂ ತತ್ತ್ವವಿದ್ಬುಕ್ಕ ಭೂಪತಿಃ।
ಸತ್ಕಥಾ ಕೌತುಕೀ ಹರ್ಷಾದಪೃಚ್ಛದ್ರಾಜಶೇಖರಃ ॥
ಶ್ರುತಾನಿ ತ್ವನ್ಮುಖಾದೇವ ಶಾಸ್ತ್ರಾಣಿ ವಿವಿಧಾನಿ ಚ।
ಪುರಾಣೋಪಪುರಾಣಾನಿ ಭಾರತಂ ಚ ಮಹಾಮತೇ ॥
ಸರ್ವಾಣ್ಯೇತಾನಿ ವಿಪ್ರೇಂದ್ರ ಗಹನಾನ್ಯಲ್ಪಮೇಧಸಾಂ।
ಜ್ಞಾತುಂ ಕ್ವಚಿನ್ನಶಕ್ಯಂತೇ ಪುರುಷಾರ್ಥಾರ್ಥಿನಾಮಪಿ ॥
ತಸ್ಮಾದ್ವ್ಯಾಖ್ಯಾನರೂಪೇಣ ಸುಖೋಪಾಯಾನಿ ಸುವ್ರತ।
ಪುರುಷಾರ್ಥೋಪಯೋಗೀನಿ ವ್ಯಾಸವಾಕ್ಯಾನಿ ಮೇ ವದ ॥
ತಸ್ಯ ತದ್ವಚನಂ ಶ್ರುತ್ವಾ ಯುಕ್ತಾರ್ಥಂ ಬುಕ್ಕ ಭೂಪತೇಃ।
ಪ್ರಶಸ್ಯ ತಂ ಮುದಾ ಯುಕ್ತೋ ಮಾಧವಃ ಪ್ರತ್ಯಭಾಷತ ॥

ಶೃಣು ತ್ವಂ ಭವ್ಯಯಾ ಬುದ್ಧ್ಯಾ ವಾಚಂ ಮೇ ಪುರುಷಾರ್ಥ
ದಾಂ।
ಅಯಂ ಹಿ ಕೃತಿನಾಮಾದ್ಯಃ ಸಾಯಣಾರ್ಯೋ ಮಮಾನುಜಃ ॥
ಪುರಾಣೋಪಪುರಾಣೇಷು ಪುರುಷಾರ್ಥೋಪಯೋಗಿನೀ।
ಉಪದಿಷ್ಟಾ ಮಯಾ ರಾಜನ್ ಕಥಾಂ ತೇ ಕಥಯಿಷ್ಯತಿ ॥
ಇತಿ ಪ್ರಸಾದ್ಯ ರಾಜಾನಂ ಸಾಯಣಾರ್ಯಮುದೈಕ್ಷತ।
ಸಾಯಣಾರ್ಯೋಗ್ರಜೇನೋಕ್ತಃ ಪ್ರಾಹ ಬುಕ್ಕ ಮಹೀಪತಿಂ ॥
ಸಾಧು ಸಾಧು ಮಹಾಪ್ರಾಜ್ಞ ಬುದ್ಧಿಸ್ತೇ ಧರ್ಮದರ್ಶಿನೀ।
ವದಾಮಿ ವ್ಯಾಸವಾಕ್ಯಾನಿ ಲೋಕಾನಾಂ ಹಿತಕಾಮ್ಯಯಾ ॥
ಉಪಾಖ್ಯಾನಾನಿ ಕೃಷ್ಣೇನ ಕಥಿತಾನ್ಯತಿವಿಸ್ತರಾತ್।
ತಾನ್ಯೇವಾತ್ರೋಪಯುಕ್ತಾನಿ ಸಂಕ್ಷಿಪ್ಯ ಕಥಯಾಮ್ಯಹಂ ॥
ಅಯಂ ವೇದಾರ್ಥಸಮಿತಿಃ ಪುರುಷಾರ್ಥಸುಧಾನಿಧಿಃ।
ಭುಕ್ತಿಂ ಮುಕ್ತಿಂ ಚ ಕುರುತೇ ಶೃಣ್ವತಾಂ ಪಠತಾಮಪಿ ॥

[ಸತ್ಯಪರಿಪಾಲನೆಯೆಂಬ ಒಂದು ವ್ರತವುಳ್ಳವನಾಗಿಯೂ; ವಾರ್ತೆ, ದಂಡನೀತಿಗಳೆಂಬ ಎರಡು ಗುಣಗಳುಳ್ಳವನಾಗಿಯೂ; ಧರ್ಮ, ಅರ್ಥ, ಕಾಮಗಳೆಂಬ ಮೂರು ಉದ್ದೇಶಗಳುಳ್ಳವನಾಗಿಯೂ; ಆರ್ಜನೆ, ರಕ್ಷಣೆ, ಅಭಿವೃದ್ಧಿ, ವಿನಿಯೋಗ—ಎಂಬ ನಾಲ್ಕು ನೀತಿಗಳನ್ನು ತಿಳಿದವನಾಗಿಯೂ; ಸಹಾಯ, ಉಪಾಯ, ಕಾಲದೇಶ ವಿಭಾಗ, ವಿನಿಪಾತ, ಪ್ರತೀಕಾರ—ಎಂಬ ಐದು ಕಾರ್ಯಸಾಧನ ವಿಧಗಳಲ್ಲಿ ಕುಶಲನಾಗಿಯೂ; ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ—ಎಂಬ ಆರು ತಂತ್ರಗಳಲ್ಲಿ ದೃಢನಾಗಿಯೂ; ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ—ಎಂಬ ಏಳು ಅಂಗಗಳಿಂದ ಕೂಡಿದ ರಾಜ್ಯವನ್ನಾಳುವವನಾಗಿಯೂ; ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಯಜ್ಞ—ಎಂಬ ಎಂಟು ಒಡಲುಗಳನ್ನು ತಾಳಿರುವ ಮಹೇಶ್ವರನ ಅಂಶವನ್ನು ಧರಿಸಿದವನಾಗಿಯೂ; ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ—ಎಂಬ ಒಂಬತ್ತು ನಿಧಿಗಳನ್ನು ಪಡೆದವನಾಗಿಯೂ; ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ಹತ್ತು ಇಂದ್ರಿಯಗಳನ್ನೂ ಸ್ವಾಧೀನದಲ್ಲಿಟ್ಟುಕೊಂಡವನಾಗಿಯೂ; ಹಿಂದೂ ಜನರ ಅಭ್ಯುದಯ ಸಾಧನೆಯ ಭಾರವನ್ನು ವಹಿಸಿದವನಾಗಿಯೂ ಇರುವ ಶ್ರೀ ಬುಕ್ಕ ಭೂಪತಿಯು ಜಯಶಾಲಿಯಾಗಲಿ.

ಇಂದ್ರನಿಗೆ ಬೃಹಸ್ಪತಿಯೂ, ನಲನಿಗೆ ಸುಮತಿಯೂ, ಶೈಬ್ಯನಿಗೆ ಮೇಧಾತಿಥಿಯೂ, ಯುಧಿಷ್ಠಿರನಿಗೆ ಧೌಮ್ಯನೂ, ವೈನ್ಯ (ಪೃಥು) ಚಕ್ರವರ್ತಿಗೆ ಸ್ವಾಜರೆಂಬುವರೂ, ನಿಮಿಗೆ ಗೌತಮಿಯೂ, ಪುಣ್ಯಾತ್ಮನಾದ ರಾಮಚಂದ್ರನಿಗೆ ಅಂತರ್ಮುಖಿಯೂ ಅರುಂಧತೀ ಪತಿಯೂ ಆದ ವಸಿಷ್ಠನೂ ಹೇಗೆಯೋ, ಹಾಗೆ ಈ ಬುಕ್ಕ ರಾಜನಿಗೆ ಮಾಧವಾಚಾರ್ಯನು ಕುಲಗುರುವೂ ಮಂತ್ರಿಯೂ ಸಹ ಆಗಿರುವನು.

ಸಕಲ ವಿದ್ಯೆಗಳಿಗೂ ಆಶ್ರಯ ಸ್ಥಾನವಾದ ಆ ಮಾಧವಾಚಾರ್ಯನನ್ನು ಕುರಿತು ಮರ್ಮಜ್ಞನಾದ ಬುಕ್ಕರಾಜನು ಸತ್ಕಥೆಗಳನ್ನು ಕೇಳಬೇಕೆಂಬ ಉತ್ಸಾಹದಿಂದ ಈ ರೀತಿ ಪ್ರಶ್ನೆಮಾಡಿದನು :—'' ಎಲೈ ಮಹಾಮತಿಯಾದ ಮಾಧವಾರ್ಯರೆ, ವಿವಿಧ ಶಾಸ್ತ್ರಗಳನ್ನೂ ಪುರಾಣ ಉಪಪುರಾಣಗಳನ್ನೂ ಭಾರತವನ್ನೂ ಸಹ ತಮ್ಮ ಬಾಯಿಂದಲೇ ನಾನು ಕೇಳಿದು ದಾಯಿತು. ಅವೆಲ್ಲವೂ ಪಾಮರರಿಗೆ ಕಷ್ಟವಾದುವು ; ಪುರುಷಾರ್ಥಗಳನ್ನು ಸಾಧಿಸ ಬೇಕೆಂದಿರುವ ಸಾಮಾನ್ಯ ಜನರಿಗೆ ಅವು ಎಷ್ಟೋ ಕಡೆ ತಿಳಿಯಲಾಗುವಂತಿಲ್ಲ. ಆದಕಾರಣ ಸುವ್ರತರಾದ ತಾವು ನನಗಾಗಿ ಪುರುಷಾರ್ಥ ಸಾಧನೆಗೆ ಸುಲಭೋಪಾಯಗಳನ್ನು ತೋರಿಸುವಂಥಾ ವ್ಯಾಸವಾಕ್ಯಗಳನ್ನು ಉಪನ್ಯಾಸ ರೂಪದಲ್ಲಿ ತಿಳಿಸಬೇಕು.'' ಹೀಗೆಂಬ ಬುಕ್ಕ ಭೂಪಾಲಕನ ಸೂಕ್ತ ವಚನವನ್ನು ಮಾಧವಾಚಾರ್ಯನು ಕೇಳಿ, ಸಂತೋಷದಿಂದ ಆತನನ್ನು ಶ್ಲಾಘಿಸಿ, ಈ ರೀತಿಯಾಗಿ ಪ್ರತ್ಯುತ್ತರ ಹೇಳಿದನು :—'' ರಾಜನೆ, ಪುರುಷಾರ್ಥ ಪ್ರದವಾದ ನನ್ನ ಮಾತನ್ನು ಸಾವಧಾನದಿಂದ ಲಾಲಿಸು. ನನ್ನ ತಮ್ಮ ಈ ಸಾಯಣನು ಪುಣ್ಯಶಾಲಿಯಿರುವನಲ್ಲವೆ? ನಾನು ನಾನಾ ಪುರಾಣೋಪಪುರಾಣಗಳಿಂದ ಪುರುಷಾರ್ಥ ಸಾಧಕಗಳೆಂದು ಸಂಗ್ರಹಿಸಿ ಉಪದೇಶಮಾಡಿರುವ ಕಥೆಗಳನ್ನು ಈತನು ನಿನಗಾಗಿ ಹೇಳುವನು.'' ಹೀಗೆಂಬ ಮಾತಿನಿಂದ ಮಾಧವಾಚಾರ್ಯನು ರಾಜನಿಗೆ ಅನುಗ್ರಹ ತೋರಿ, ಸಾಯಣಾರ್ಯರ ಕಡೆಗೆ ದೃಷ್ಟಿಯನ್ನು ತಿರುಗಿಸಿದನು. ಹೀಗೆ ಅಣ್ಣನಿಂದ ಆಜ್ಞಪ್ತನಾದ ಸಾಯಣಾರ್ಯನು ಬುಕ್ಕರಾಜನನ್ನು ಕುರಿತು ನುಡಿದುದೇನೆಂದರೆ :— '' ಎಲೈ ಪ್ರಾಜ್ಞಶ್ರೇಷ್ಠನೆ, ಒಳ್ಳೆಯ ಕೋರಿಕೆ ನಿನ್ನದು. ನಿನ್ನ ಬುದ್ಧಿಯು ಧರ್ಮವನ್ನೇ ಹುಡುಕತಕ್ಕದು. ಲೋಕಕ್ಕೆ ಶುಭಪ್ರಾಪ್ತಿಯಾಗುವುದಕ್ಕೋಸ್ಕರ ವ್ಯಾಸರು ವಿಸ್ತಾರವಾಗಿ ಹೇಳಿದ ಉಪಾಖ್ಯಾನಗಳನ್ನು ನಾನು ಪ್ರಕೃತಕಾಲಕ್ಕೆ ಉಪಯುಕ್ತವಾಗುವ ತೆರದಲ್ಲಿ ಸಂಕ್ಷೇಪಿಸಿ ಅರುಹುವೆನು. ಈ ''ಪುರುಷಾರ್ಥ ಸುಧಾನಿಧಿ'' ಯು ವೇದಾರ್ಥಗಳ ರಾಶಿ. ಓದುವವರಿಗೂ ಕೇಳುವವರಿಗೂ ಇದು ಇಹಪರಗಳೆರಡರಲ್ಲಿಯೂ ಹಿತವನ್ನುಂಟು ಮಾಡತಕ್ಕದು.'']

ಈ ಗ್ರಂಥದ ವಿಭಾಗಗಳು ಈ ರೀತಿ ಇವೆ:—

| | | | | |
|---|---|---|---|---|
| ೧. | ಧರ್ಮಸ್ಕಂಧ | .. | ೪೮ | ಅಧ್ಯಾಯಗಳು |
| ೨. | ಅರ್ಥ ,, | .. | ೨೩ | ,, |
| ೩. | ಕಾಮ ,, | .. | ೧೪ | ,, |
| ೪. | ಮೋಕ್ಷ ,, | .. | ೧೭ | ,, |

ಗ್ರಂಥವು ಬಹುಮಟ್ಟಿಗೆ ಅನುಷ್ಟುಪ್ ಶ್ಲೋಕಗಳಲ್ಲಿದೆ. ಶೈಲಿಯು ಸರಳವಾಗಿದೆ; ವಿಷಯ ನಿರೂಪಣ ಕ್ರಮವೂ ಸುಲಭವಾಗಿದೆ. ಪ್ರಾಯಶಃ ಪೂರ್ವಕಥೆ, ಇತಿಹಾಸ, ಉಪಾಖ್ಯಾನಗಳ ಮೂಲಕ ನೀತಿಯನ್ನುಪದೇಶಿಸುವುದು ಈ ಗ್ರಂಥದ ಉದ್ದೇಶ. ಇದರ ವಿಷಯಗಳಲ್ಲಿ ಮುಖ್ಯವಾದ ಕೆಲವು ಈ ಕೆಳಗಿನವು:—

ಧರ್ಮಮಾಹಾತ್ಮ್ಯ
ಪೂರ್ವಕರ್ಮ ಬಂಧ
ಗಾರ್ಹಸ್ಥ್ಯ ಪ್ರಶಂಸೆ
ಪತಿವ್ರತಾ ಮಾಹಾತ್ಮ್ಯ
ಅತಿಥಿ ಪೂಜಾ
ಆರ್ಜವ ಪ್ರಶಂಸೆ
ಪಿತೃಮಾತೃ ಶುಶ್ರೂಷಾ
ಶಿವಾಲಯ ನಿರ್ಮಾಣ
ದೀಪದಾನ ಮಾಹಾತ್ಮ್ಯ
ಜಪ ಮಾಹಾತ್ಮ್ಯ
ಅನ್ನದಾನ ಪ್ರಶಂಸೆ
ವಿದ್ಯಾದಾನ ಪ್ರಶಂಸೆ
ತಟಾಕಾದಿ ನಿರ್ಮಾಣ
ರಾಜಧರ್ಮ ಕಥನ
ಪಾನದೋಷ ನಿರೂಪಣ
ಪರುಷ ವಾಗ್ದೋಷ

ವಿಷ್ಣುನಾಮಸ್ಮರಣೆ
ಶಿವನಾಮಸ್ಮರಣೆ
ದಂಡಪಾರುಷ್ಯ
ಅರ್ಥದೂಷಣ
ಆಶಾನಿಂದೆ
ಅಭಯಪ್ರದಾನ
ಋಣಸಂಬಂಧ
ಪರೋಪಕಾರ ಪ್ರಶಂಸೆ
ಅನುಚಿತ ಪ್ರಾರ್ಥನಾ ದೋಷ
ಸತ್ಸೋದರ್ಯ ಪ್ರಶಂಸೆ
ಕೋಪ ದೂಷಣೆ
ಮದ ,,
ಮಾತ್ಸರ್ಯ ,,
ಅಹಂಕಾರ ,,
ಬ್ರಹ್ಮಾರ್ಪಣಬುದ್ಧಿಯಿಂದ ಕರ್ಮಾಚರಣೆ.

ಆಗಿನ ಕಾಲದಲ್ಲಿ—ಎಂದರೆ ಇಂದಿಗೆ ೫೦೦–೬೦೦ ವರುಷಗಳ ಹಿಂದೆ—ಯಾವ ಯಾವ ನಿಯಮ ನೀತಿ ಅನುಷ್ಠಾನ ಆಚರಣೆಗಳನ್ನು ಸಂಭಾವ್ಯಗಳೆಂದು ಈ ದೇಶದಲ್ಲಿ ಸಕಲ ಜನವರ್ಗಗಳವರೂ ಅಂಗೀಕರಿಸಿದ್ದರೋ ಅವುಗಳನ್ನು ಸಾಮಾನ್ಯ ಬೋಧೆಯಾಗುವಂತೆ ವಿವರಿಸುವ ಗ್ರಂಥವಿದು. ಇದನ್ನು ಕ್ರಿಸ್ತ ಶಕ ೧೪–೧೫ನೆಯ ಶತಾಬ್ದಗಳ ಹಿಂದೂ ಮತದ ಕೈಪಿಡಿ ಎಂದು ಕರೆಯಬಹುದು. ಇದು ರಾಜಾಜ್ಞೆಯಿಂದ ಪ್ರಜಾ ಜನದ ಉಪಯೋಗಕ್ಕಾಗಿ ನಿರ್ಮಿತವಾದುದಾದಕಾರಣ ಈ ಗ್ರಂಥವು ಆಗ ವಿಶೇಷವಾಗಿ ಪ್ರಚಾರದಲ್ಲಿತ್ತೆಂದು ನಾವು ಊಹಿಸಬಹುದು.

ಈ ಗ್ರಂಥವನ್ನು ನೋಡಿ ಬುಕ್ಕರಾಜನು ಸಂತುಷ್ಟನಾದನೆಂಬುದಕ್ಕೆ ಅದರ ಉಪಸಂಹಾರ ವಾಕ್ಯಗಳೇ ಆಧಾರವಾಗಿವೆ:—

ಯ ಇಮಂ ಶೃಣುಯಾನ್ನಿತ್ಯಂ ಪುರುಷಾರ್ಥ ಸುಧಾನಿಧಿಂ।
ಸ ಹಿ ಸರ್ವ ಪುರಾಣಾರ್ಥ ಶ್ರವಣಸ್ಯ ಫಲಂ ಲಭೇತ್ ॥
ಇತ್ಯೇವಂ ನೈಮಿಶಾರಣ್ಯೇ ಸತ್ರೇ ದ್ವಾದಶವಾರ್ಷಿಕೇ।
ವಿಪ್ರೇಭ್ಯಃ ಶೌನಕಾದಿಭ್ಯಃ ಸೂತೇನೋಕ್ತಾಃ ಕಥಾ ಇಮಾಃ ॥
ಪುರುಷಾರ್ಥೋಪಯೋಗಿನ್ಯಃ ಪುರುಷಾರ್ಥ ಸುಧಾನಿಧೇಃ।
ತ್ವಯಾ ತತ್ತ್ವಾವಬೋಧಾರ್ಥಂ ಅನುಯುಕ್ತೋಹಮಂಜಸಾ ॥
ಪ್ರೋಕ್ತವಾನಸ್ಮಿ ತೇ ರಾಜನ್ ಪುರುಷಾರ್ಥ ಸುಧಾನಿಧಿಂ।
ಸಂಸಾರಾನಲ ತಪ್ತಾಂಗಾನನನ್ಯ ಶರಣಾನ್ ಭುವಿ ॥
ಆಪ್ಯಾಯತೇ ಸದಾ ಜಂತೂನ್ ಪುರುಷಾರ್ಥ ಸುಧಾನಿಧಿಃ।
ಇತ್ಯುಕ್ತಂ ಮಾಧವಾ*ರ್ಯೇಣ ಪುರುಷಾರ್ಥ ಸುಧಾನಿಧಿಂ ॥
ಶ್ರುತ್ವಾ ಶ್ರೀ ಬುಕ್ಕ ಭೂಪಾಲಃ ಪ್ರಹರ್ಷಂ ಪ್ರತ್ಯಪದ್ಯತ ॥
ಉವಾಚ ಚ ಮಹಾತ್ಮಾನಂ ಮಾಧವಂ ಸ್ವಗುರುಂ ತಥಾ।
ತ್ವತ್ಕಥಾ ಗೌರವೇಣಾಹಂ ಕೃತಾರ್ಥೋಸ್ಮಿ ಸತಾಂ ವರ ॥
ಪುರುಷಾರ್ಥಪ್ರದಾಶ್ಚೈವ ಜ್ಞಾತವಾನಸ್ಮಿ ಸತ್ಕಥಾಃ।
ತ್ವಾಮುಪೇಂದ್ರಮಿವೇಂದ್ರಸ್ಯ ಭುವಿ ಪುಣ್ಯಕೃತಾಂ ವರ ॥

* ಇಲ್ಲಿ "ಸಾಯಣಾರ್ಯೇಣ" ಎಂದಿರಬೇಕಲ್ಲವೆ? ಹಾಗಿದ್ದರೆ ಮುಂದಿನ

ಅನುಜಂ* ಮಾಧವಾರ್ಯಸ್ಯ ಮನ್ಯೇ ಮಾಹಾತ್ಮ್ಯದಾಯಕಂ।
ಶ್ರುತ್ವಾ ತ್ವಯೋದಿತಂ ವಿದ್ವನ್ ಪುರುಷಾರ್ಥ ಸುಧಾನಿಧಿಂ।
ಕೃತಾರ್ಥೋಽಸ್ಮಿ ದ್ವಿಜಶ್ರೇಷ್ಠ ಇತಿ ರಾಜಾ ತಮಬ್ರವೀತ್ ॥
ಯ ಇದಂ ಶೃಣುಯಾನ್ನಿತ್ಯಂ ಪುರುಷಾರ್ಥ ಸುಧಾನಿಧಿಂ।
ಅನಾಯಾಸೇನ ತಸ್ಯೈವ ಕರಸ್ಥಾಃ ಸರ್ವಸಿದ್ಧಯಃ ॥

[ಯಾರು ಈ ಪುರುಷಾರ್ಥ ಸುಧಾನಿಧಿಯನ್ನು ಪ್ರತಿದಿನವೂ ಕೇಳುವರೋ ಅವರಿಗೆ ಸಕಲ ಪುರಾಣಾರ್ಥಗಳನ್ನೂ ಕೇಳುವುದರ ಫಲವು ಉಂಟಾಗುವುದು. ನೈಮಿಶಾರಣ್ಯದಲ್ಲಿ ದ್ವಾದಶವರ್ಷ ಯಜ್ಞದ ಸಂದರ್ಭದಲ್ಲಿ ಶೌನಕಾದಿ ಬ್ರಾಹ್ಮಣರಿಗೆ ಸೂತನು ಹೇಳಿದ ಕಥೆಗಳು ಈ ಪುರುಷಾರ್ಥನಿಧಿಯಲ್ಲಿರುವುವು. ಇವು ಪುರುಷಾರ್ಥ ಸಂಪಾದನೆಗೆ ಬೇಕಾದುವು. ಎಲೈ ರಾಜನೆ, ನಿನ್ನ ಕೋರಿಕೆಯಂತೆ ತತ್ತ್ವಬೋಧನೆಗಾಗಿ ಇವುಗಳನ್ನು ನಾನು ಹೇಳಿದ್ದೇನೆ. ಸಂಸಾರವೆಂಬ ಬೆಂಕಿಯಿಂದ ಬೆಂದು ಬೇರೆ ಗತಿ ಕಾಣದ ಜೀವಿಗಳನ್ನು ಈ ಪುರುಷಾರ್ಥ ಸುಧಾನಿಧಿಯು ಸಂತೈಸಬಲ್ಲುದು.—ಹೀಗೆಂದು (ಮಾಧವ) ಸಾಯಣಾಚಾರ್ಯರು ಹೇಳಿದುದನ್ನು ಬುಕ್ಕರಸನು ಕೇಳಿ ಹರ್ಷವನ್ನು ತಾಳಿ, ತನ್ನ ಗುರುವಾದ (ಮಾಧವ)ಸಾಯಣಾರ್ಯನನ್ನು ಕುರಿತು ಹೀಗೆಂದನು :—"ಸಜ್ಜನ ಶ್ರೇಷ್ಠನೆ, ನಿನ್ನ ಕಥೆಗಳ ಮಹಿಮೆಯಿಂದ ಕೃತಾರ್ಥನಾದೆನು. ಪುರುಷಾರ್ಥಪ್ರದಗಳಾದ ಸತ್ಕಥೆಗಳನ್ನು ಈಗ ತಿಳಿದುಕೊಂಡೆನು. ಪುಣ್ಯವಂತರಲ್ಲಿ ಅಗ್ರಗಣ್ಯನೂ ಇತರರಲ್ಲಿ ಮಾಹಾತ್ಮ್ಯವನ್ನುಂಟುಮಾಡಬಲ್ಲವನೂ ಆದ ನೀನು ಮಾಧವಾಚಾರ್ಯರಿಗೆ,—ಉಪೇಂದ್ರನು ಇಂದ್ರನಿಗೆ ಇರುವ ರೀತಿಯಲ್ಲಿ,—(ಅನುಗುಣನಾಗಿ) ಇರುವೆ. ಎಲೈ ವಿದ್ವಾಂಸನೆ, ನೀನು ಹೇಳಿದ ಪುರುಷಾರ್ಥ ಸುಧಾನಿಧಿಯನ್ನು ಕೇಳಿ ಧನ್ಯನಾದೆನು." ಈ ರೀತಿಯಲ್ಲಿ ಬುಕ್ಕರಾಜನು ಸಾಯಣಾರ್ಯರನ್ನು ಅಭಿನಂದಿಸಿದನು. ಯಾರು ಈ ಗ್ರಂಥವನ್ನು ಪ್ರತಿನಿತ್ಯವೂ ಕೇಳುವರೋ ಅವರಿಗೆ ಸಕಲ ಸಿದ್ಧಿಗಳೂ ನಿರಾಯಾಸವಾಗಿ ಕೈಗೂಡುವುವು.]

ನಮ್ಮ ಚರಿತ್ರೆಯ ಕಾಲದಲ್ಲಿ ರಾಜರಿಗೂ ಪಂಡಿತರಿಗೂ ಇದ್ದ ಪ್ರಜಾಬೋಧೋತ್ಸಾಹವನ್ನೂ, ಆಗಿನ ಧಾರ್ಮಿಕ ಸಾಮಾಜಿಕ ಭಾವನೆಗಳನ್ನೂ ಈ ಗ್ರಂಥವು ವ್ಯಕ್ತಪಡಿಸಬಲ್ಲುದಾದಕಾರಣ ಇದರ ವಿಚಾರಕ್ಕೆ ಇಲ್ಲಿ ಇಷ್ಟು ಸ್ಥಳವನ್ನು ಕೊಡಬೇಕಾಯಿತು.

---

* "ಅನುಜಂ ಮಾಧವಾರ್ಯಸ್ಯ" ಎಂಬುದು ಇದರೊಡನೆ ಹೊಂದುತ್ತದೆ.

## ೮. "ವೇದಾರ್ಥ ಪ್ರಕಾಶ"

ಸಾಯಣ ಮುದ್ರಾಂಕಿತಗಳಾದ ಗ್ರಂಥಗಳಲ್ಲಿ ಯಥಾರ್ಥವಾಗಿ ವಿಶ್ವವಿಖ್ಯಾತವಾಗಿರುವುದು "ವೇದಾರ್ಥ ಪ್ರಕಾಶ"ವೆಂಬ ವೇದಭಾಷ್ಯ. ಸಾಯಣಾಚಾರ್ಯರ ವಿವಿಧ ಶಾಸ್ತ್ರ ಸಾರ್ವಭೌಮತೆಗೂ ಅವರ ಧರ್ಮ ಪ್ರಚಾರ ದೀಕ್ಷೆಗೂ ಈ ಪ್ರಬಂಧವು ಶಾಶ್ವತ ವಿಜಯಸ್ತಂಭದಂತೆ ನಿಂತು ದೇದೀಪ್ಯಮಾನವಾಗಿರುವುದು. ಹಿಂದೂ ಜನರ ವಿದ್ಯಾ ವೈದುಷ್ಯಗಳಿಗೆ ಮಾತೃಸ್ಥಾನವೆನಿಸಿ, ಅವರ ಚರಿತ್ರೆಯ ಗಂಗಾ ಪ್ರವಾಹಕ್ಕೆ ಹಿಮಾಲಯ ಪ್ರಾಯವಾಗಿ, ಅವರ ಜೀವಿತ ಯಾತ್ರೆಗೆ ಅಖಂಡ ಜ್ಯೋತಿಯಂತೆ ಇರುವ ಆಮ್ನಾಯ ವಾಣಿಯ ಅಂತರ್ಭಾವಗಳನ್ನು ಸಾಮಾನ್ಯ ಲೋಕಕ್ಕೋಸ್ಕರ ಸಾಂಗವಾಗಿ ವಿಶದಪಡಿಸುವುದು ಎಷ್ಟು ವಿಶೇಷ ಆವಶ್ಯಕವೆಂಬುದನ್ನು ಇಂದಿಗೆ ೫೦೦ ವರ್ಷಗಳ ಹಿಂದೆಯೇ ಸಾಯಣರು ಕಂಡುಕೊಂಡರೆಂಬ ಸಂಗತಿಯೊಂದೇ ಅವರ ಭಾವನಾ ಮಹತ್ತ್ವವನ್ನು ಪ್ರಕಾಶಪಡಿಸಲು ಸಾಕಾಗಿದೆ. ಅವರು ಆ ಮಹಾ ಕಾರ್ಯದ ಆವಶ್ಯಕತೆಯನ್ನರಿತುದು ಮಾತ್ರವೇ ಅಲ್ಲದೆ, ಅದನ್ನು ಆಮೂಲಾಗ್ರವಾಗಿ ಸಾಧಿಸಲುದ್ಯುಕ್ತರಾಗಿ, ತಮ್ಮ ಪ್ರತಿಭೆ ಪಾಂಡಿತ್ಯಗಳ ಪ್ರಭಾವದಿಂದಲೂ ಉತ್ಸಾಹ ಪರಿಶ್ರಮಗಳ ಮಹಿಮೆಯಿಂದಲೂ ಸಂಪೂರ್ಣ ಕೃತಕೃತ್ಯರಾದರೆಂಬುದನ್ನು ನಾವು ಧ್ಯಾನಿಸಿ ನೋಡಿದರೆ, ಅವರನ್ನು "ಭಗವದ್ವ್ಯಾಸಾವತಾರಸ್ಸ್ವಯಂ" ಎಂದು ವರ್ಣಿಸಿರುವುದು ಎಷ್ಟು ಮಾತ್ರವೂ ಉತ್ಪ್ರೇಕ್ಷೆಯಲ್ಲವೆಂಬುದು ಮನಸ್ಸಿಗೆ ಸಿದ್ಧವಾಗುತ್ತದೆ. ಅತ್ಯಗಾಧವೂ ಮಹಾದುಸ್ತರವೂ ಆದ ಅಖಂಡ ವೇದವಾಹಿನಿಯನ್ನು ಕೆರೆ ಕಾಲುವೆಗಳೊಳಕ್ಕೆ ಹರಿಯಿಸಿ ಸಾಮಾನ್ಯಲೋಕಕ್ಕೆ ಅನುಕೂಲಪಡಿಸಿಕೊಟ್ಟವರು ವ್ಯಾಸರಾದರೆ, ಅವುಗಳಿಗೆ ತೂಬು ಮೆಟ್ಟಲುಗಳನ್ನು ಕಟ್ಟಿ ಸ್ನಾನ ಪಾನಗಳನ್ನು ಮತ್ತಷ್ಟು ಸುಲಭಗೊಳಿಸಿರುವವರು ಸಾಯಣರು.

ಅವರು ಬಹುಶಃ ಬುಕ್ಕರಾಯನ ಕಾಲದ ಮಧ್ಯಮ ಸಮಯದಿಂದ (೧೩೬೦) ಇಮ್ಮಡಿ ಹರಿಹರರಾಯನ ಕಾಲದ ಮಧ್ಯಮ ಸಮಯದ ವರೆಗೂ (೧೩೮೫)— ೨೦–೨೫ ವರ್ಷಗಳ ಕಾಲ—ಈ ಮಹಾ ಸಮಾ

ರಂಭದಲ್ಲಿ ತದೇಕ ನಿಷ್ಠರಾಗಿದ್ದಿರಬೇಕು. ಆ ಕಾರ್ಯದ ಕಷ್ಟವೆಂತಹು ದೆಂಬುದನ್ನು ಗಮನಕ್ಕೆ ತಂದುಕೊಳ್ಳುವುದಕ್ಕಾಗಿ ವೇದಸ್ವರೂಪವನ್ನು ಕುರಿತ ಕೆಲವು ವಿಷಯಗಳನ್ನು ಇಲ್ಲಿ ಸ್ಮರಿಸುವುದು ಉಚಿತವೆಂದು ತೋರುತ್ತದೆ.

## ವೇದಸ್ವರೂಪ ವಿವರ

ವೇದವು ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ಭಾಗ ಗಳಾಗಿ ಪ್ರಚಾರದಲ್ಲಿರುವುದಷ್ಟೆ. ಇವುಗಳಲ್ಲಿ ಪ್ರತಿಯೊಂದು ಭಾಗವೂ ಕರ್ಮಕಾಂಡ ಜ್ಞಾನಕಾಂಡಗಳೆಂಬ ಎರಡು ವಿಭಾಗಗಳನ್ನೊಳ ಗೊಂಡಿರುವುದು.

ಜ್ಞಾನಕಾಂಡದ ಅಂಶಗಳೇ ಉಪನಿಷತ್ತುಗಳು. ಇವುಗಳ ವಿಷಯವು "ಜ್ಞಾನ,"—ಆತ್ಮಜ್ಞಾನ, ಅಥವಾ ಬ್ರಹ್ಮಜ್ಞಾನ,—ಎಂದರೆ ಜೀವದ ಸ್ವರೂಪವನ್ನೂ ಭಗವಂತನ ಸ್ವರೂಪವನ್ನೂ ಇಬ್ಬರಿಗೂ ಇರತಕ್ಕ ಸಂಬಂಧದ ವಿವರಗಳನ್ನೂ ಕುರಿತ ತಿಳಿವಳಿಕೆ. ಇವುಗಳನ್ನೇ ಆತ್ಮವಿದ್ಯೆ, ಬ್ರಹ್ಮವಿದ್ಯೆ, ವೇದಾಂತ ಎಂದು ಕರೆಯುವುದು. ಇವುಗಳ ಮೇಲೆ ಶಂಕರ, ರಾಮಾನುಜ, ಪೂರ್ಣಪ್ರಜ್ಞಾದಿ ಮತಾಚಾರ್ಯರು ಗಳು ಭಾಷ್ಯಗಳನ್ನು ಬರೆದು, ತಮ್ಮ ತಮ್ಮ ಸಿದ್ಧಾಂತಗಳು ಈ ಉಪನಿಷತ್ತುಗಳಲ್ಲಿಯೇ ಅಡಗಿವೆಯೆಂದು ತೋರಿಸಲು ಯತ್ನಿಸಿದ್ದಾರೆ. ಜ್ಞಾನಕಾಂಡವೆಂಬ ಈ ವೇದ ವಿಭಾಗವನ್ನು ಸಾಯಣರು ತಮ್ಮ ಭಾಷ್ಯ ಪರಿಧಿಯೊಳಗೆ ಸೇರಿಸಿಕೊಂಡಿಲ್ಲ. ಜ್ಞಾನಕಾಂಡಕ್ಕೆ "ವೇದಾಂತ" ಎಂಬ ಹೆಸರು ಪ್ರತ್ಯೇಕವಾಗಿ ಪ್ರಸಿದ್ಧವಾಗಿರುವುದರಿಂದ, ಸಾಯಣ ಭಾಷ್ಯದ ಹೆಸರಿನಲ್ಲಿಯ "ವೇದ" ಎಂಬ ಶಬ್ದಕ್ಕೆ ಕರ್ಮಕಾಂಡವೆಂದೇ ವಿಶೇಷಾರ್ಥವಿಟ್ಟುಕೊಳ್ಳುವುದು ಅಸಮಂಜಸವೆನಿಸದು.

ಮಾಧವ–ವಿದ್ಯಾರಣ್ಯರವರು ತೈತ್ತಿರೀಯೋಪನಿಷತ್ತು ಮೊದ ಲಾದ ಕೆಲವು ಜ್ಞಾನಕಾಂಡ ಭಾಗಗಳಿಗೆ ಭಾಷ್ಯಗಳನ್ನು ರಚಿಸಿರುವರ ಲ್ಲದೆ, "ಅನುಭೂತಿಪ್ರಕಾಶ"ವೆಂಬ ಉಪನಿಷತ್ಸಾರ ಸಂಗ್ರಹವನ್ನು ಬರೆದಿದ್ದಾರೆ. ಅವರ ಗುರುಗಳಾದ ಶಂಕರಾನಂದರವರು ಅನೇಕ

ಉಪನಿಷತ್ತುಗಳಿಗೆ "ದೀಪಿಕೆ"ಗಳೆಂಬ ಅರ್ಥ ವಿವರಣೆಗಳನ್ನು ಬರೆದಿರುವ ರೆಂಬುದನ್ನು ಹಿಂದೆ ನೋಡಿರುವೆವು. ವೇದಾಂತ ಶಾಸ್ತ್ರ ಬೋಧನೆಗೆ ಗೃಹಸ್ಥಾಶ್ರಮಿಗಳಿಗಿಂತ ಸಂನ್ಯಾಸಿಗಳಾದವರೇ ಹೆಚ್ಚು ಅಧಿಕಾರಿಗಳೆಂಬ ಉಚಿತ ಸಂಪ್ರದಾಯವನ್ನನುಸರಿಸಿ ಅಣ್ಣಂದಿರು ವೇದದ ಜ್ಞಾನಕಾಂಡ ವಿಭಾಗವನ್ನೂ, ತಮ್ಮಂದಿರು ಉಳಿದ ಕರ್ಮಕಾಂಡ ವಿಭಾಗವನ್ನೂ ವ್ಯಾಖ್ಯಾನ ರಚನೆಗಾಗಿ ಆರಿಸಿಕೊಂಡರೆಂದು ತೋರುತ್ತದೆ.

ಹೀಗೆ ಸಾಯಣರ "ವೇದಾರ್ಥ ಪ್ರಕಾಶ"ದೊಳಗೆ ಬಂದಿರುವುದು ವೇದ ಚತುಷ್ಟಯದ ಪೂರ್ವವಿಭಾಗ ಮಾತ್ರ. ಇದೇ ಕರ್ಮ ಕಾಂಡ. ಈ ವಿಭಾಗವು ಉತ್ತರ ವಿಭಾಗಕ್ಕಿಂತ ಬಹು ವಿಸ್ತಾರವಾದುದು. ಈ ವಿಭಾಗದ ವಿಷಯವು "ಕರ್ಮ"—ಎಂದರೆ ನಾನಾವಿಧದ ಯಜ್ಞ ಯಾಗ ಮೊದಲಾದ ದೇವತೋಪಾಸನ ಕ್ರಿಯೆಗಳು. ಈ ಕ್ರಿಯೆಗಳಿಗೆ ಸಂಬಂಧಪಟ್ಟ ವೇದ ವಾಕ್ಯಗಳು ಮುಖ್ಯವಾಗಿ ಎರಡು ತೆರನಾಗಿವೆ: (೧) ಯಜ್ಞ ಯಾಗಾದಿಗಳು ಯಾವ ಯಾವ ದೇವತೆಗಳ ಸಂತುಷ್ಟಿಗಾಗಿ ಆಚರಿಸಲ್ಪಡುತ್ತವೆಯೋ ಆ ದೇವತೆಗಳ ಮಹಿಮೆಯನ್ನು ವರ್ಣಿಸಿ, ಅವರನ್ನು ಸಂಬೋಧಿಸಿ, ಬೇಡತಕ್ಕ ವಾಕ್ಯಗಳು ಕೆಲವು; (೨) ಆ ಯಜ್ಞಾದಿಗಳ ಉಪಕರಣಗಳನ್ನೂ, ಸಂವಿಧಾನಗಳನ್ನೂ, ಅವುಗಳಿಂದ ಲಭ್ಯವಾಗುವ ಫಲಗಳನ್ನೂ ತಿಳಿಸತಕ್ಕ ವಾಕ್ಯಗಳು ಕೆಲವು. ಹೀಗೆ ಎರಡು ಬಗೆಯಾದ ಕರ್ಮಕಾಂಡ ವಾಕ್ಯಗಳಿಗೆ ಕ್ರಮವಾಗಿ ಸಂಹಿತೆ, ಬ್ರಾಹ್ಮಣ ಎಂಬ ಹೆಸರುಗಳು ರೂಢಿಯಲ್ಲಿವೆ. ಸಂಹಿತಾ ಭಾಗವನ್ನೇ ಮಂತ್ರವೆಂದೂ ಕರೆಯುವುದುಂಟು. ವೇದ ವಾಕ್ಯಗಳಲ್ಲಿ ಋಕ್ಕು, ಅನುವಾಕ, ಉದ್ಗೀಥ, ಗಾಥ—ಮುಂತಾದ ಪ್ರಭೇದಗಳೂ ಅನೇಕ ವಾಗಿವೆ.

ನಾಲ್ಕು ವೇದಗಳೂ ಹೇಗೆ ಒಟ್ಟು ಪರಿಮಾಣದಲ್ಲಿ ಒಂದಕ್ಕೊಂದು ಸಮನಾಗಿಲ್ಲವೋ, ಹಾಗೆಯೇ ಅವುಗಳೊಳಗಿನ ವಿಭಾಗ ಉಪವಿಭಾಗ ಗಳೂ ಒಂದೇ ಸಮನಾಗಿಲ್ಲ. ಋಗ್ವೇದದಲ್ಲಿ ಸಂಹಿತಾ ಭಾಗವು ಹೆಚ್ಚು; ಯಜುರ್ವೇದದಲ್ಲಿ ಬ್ರಾಹ್ಮಣ ಭಾಗವು ಹೆಚ್ಚು; ಸಾಮವೇದದಲ್ಲಿ ಗೀತೆಗಳು ಹೆಚ್ಚು.

ಹೀಗೆ ಬಹು ಶಾಖೋಪಶಾಖೆಗಳಿಂದೊಡಗೂಡಿರುವ ವೇದದ ನಾನಾ ಪ್ರಕರಣಗಳಿಗೆ ಸರಿಯಾದ ಅರ್ಥವನ್ನು ಸ್ವತಂತ್ರವಾಗಿ,—ಎಂದರೆ ಅನ್ಯ ಶಾಸ್ತ್ರ ಸಹಾಯವಿಲ್ಲದೆ,—ನಿಶ್ಚಯಿಸುವುದಾಗಲಾರದು. ವೇದೋಪಯುಕ್ತಗಳೆನಿಸಿರುವ ಅನ್ಯ ಶಾಸ್ತ್ರಗಳನ್ನು ನಿರಾಕರಿಸಿ, ಕೇವಲ ಸ್ವಬುದ್ಧಿಯಿಂದಲೇ ವೇದಕ್ಕೆ ಅರ್ಥ ನಿರ್ಣಯ ಮಾಡಹೊರಟರೆ ಆಗತಕ್ಕ ಅನರ್ಥಗಳೇನೆಂಬುದನ್ನೂ, ಈ ಶಾಸ್ತ್ರಗಳ ಜೊತೆಗೆ ಈಚೀಚೆಗೆ ಲೋಕದಲ್ಲಿ ಬೆಳೆಯುತ್ತಿರುವ ಇತರ ಕೆಲವು ಶಾಸ್ತ್ರಗಳ ಸಹಾಯವನ್ನೂ ತೆಗೆದುಕೊಂಡರೆ ವೇದಾರ್ಥವು ಹೇಗೆ ಇನ್ನೂ ಸುಗಮವಾದೀತೆಂಬುದನ್ನೂ ಮುಂದೆ ಕೆಲವು ಪಾಶ್ಚಾತ್ಯ ಪಂಡಿತರ ವಾಕ್ಯಗಳಲ್ಲಿ ಕಾಣಲಾಗುವುದು. ಸದ್ಯಃ ನಾವು ಪ್ರಾಚೀನ ವೈದಿಕ ಸಂಪ್ರದಾಯವನ್ನು ಅಂಗೀಕರಿಸಿ ನೋಡುವುದಾದರೆ, ಯಾವ ಮಹಾಪುರುಷರ ಮುಖದಿಂದ ವೇದಗಳು ಲೋಕಕ್ಕೆ ಉಪಲಬ್ಧವಾಗಿ ಬಂದಿವೆಯೋ ಆ ಮಹರ್ಷಿಗಳೇ,—ಅಥವಾ ಅವರ ಶಿಷ್ಯರೂ ಅನುಯಾಯಿಗಳೂ ಆದ ಋಷಿಗಳೇ—ವೇದಾರ್ಥ ನಿರ್ಣಯಕ್ಕೆ ಆವಶ್ಯಕಗಳಾದ ಶಾಸ್ತ್ರಗಳನ್ನೂ ನಿರ್ಮಿಸಿರುವರೆಂಬುದನ್ನು ಗಮನದಲ್ಲಿಡಬೇಕು. ಈ ಶಾಸ್ತ್ರಗಳೇ ವೇದಾಂಗಗಳು :

ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೋತಿಷಂ ತಥಾ |
ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ ||

(೧) **ಶಿಕ್ಷೆ**—ಇದು ವೇದಮಂತ್ರಗಳ ಉಚ್ಚಾರಣಕ್ರಮವನ್ನು ಕುರಿತ ಶಾಸ್ತ್ರ. ಮಂತ್ರಗಳ ಅರ್ಥ ವಿಶೇಷವು ಅವುಗಳ ಸ್ವರಾಕ್ಷರಗಳನ್ನುಚ್ಚರಿಸುವುದರಲ್ಲಿ ತೋರುವ ಉದಾತ್ತ, ಅನುದಾತ್ತ, ಸ್ವರಿತ ಎಂಬಿವೇ ಮೊದಲಾದ ಧ್ವನಿ ವಿಶೇಷಗಳಿಗೆ ಅನುಸಾರವಾಗಿರುತ್ತದೆ. ಕನ್ನಡದಲ್ಲಿ ಕೂಡ ನಾವು ಮಾತನಾಡುವಾಗ ಧ್ವನಿಯೂ ಅರ್ಥಕ್ಕೆ ಮುಖ್ಯವಲ್ಲವೆ? "ರಾಮನು ದೊಡ್ಡವನೇ" ಎಂಬೆರಡು ಮಾತುಗಳನ್ನೇ ಒಂದು ನಿಶ್ಚಯವನ್ನು ತಿಳಿಸುವುದಕ್ಕಾಗಲಿ, ಪ್ರಶ್ನೆ ಕೇಳುವುದಕ್ಕಾಗಲಿ ಅಥವಾ ಆಶ್ಚರ್ಯವನ್ನು ಸೂಚಿಸುವುದಕ್ಕಾಗಲಿ ಉಪಯೋಗಿಸಲಾಗುತ್ತದೆ. ಅವುಗಳನ್ನು ಆಡುವವನ ಮನಸ್ಸಿನಲ್ಲಿರುವುದು ನಿಶ್ಚಯವೋ, ಸಂಶಯವೋ, ಆಶ್ಚರ್ಯವೋ ಎಂಬುದನ್ನು ಅವನ ಧ್ವನಿಯಿಂದ ತಿಳಿಯುತ್ತೇವೆ. ಅದೇ ರೀತಿಯಾಗಿ ವೇದ ಮಂತ್ರೋಚ್ಚಾರಣೆ

ಯಲ್ಲಿಯೂ ಕೆಲವು ಸಂಕೇತ ಕ್ರಮಗಳು ಸಾಂಪ್ರದಾಯಿಕವಾಗಿ ಗೊತ್ತಾಗಿವೆ. ಅವುಗಳನ್ನು ಪ್ರತಿಪಾದಿಸತಕ್ಕ ಶಾಸ್ತ್ರವು ಶಿಕ್ಷೆಯೆಂಬುದು.

**(೨) ವ್ಯಾಕರಣ**—ಇದು ಮಂತ್ರಗಳ ಪದಗಳನ್ನು ಬೇರೆ ಬೇರೆ ಬಿಡಿಸಿ, ಅವುಗಳ ರೂಪಸಿದ್ಧಿಯ ಕ್ರಮವನ್ನೂ ಪರಸ್ಪರ ಸಂಬಂಧವನ್ನೂ ಗೊತ್ತುಮಾಡುವ ರೀತಿಯನ್ನು ತಿಳಿಸತಕ್ಕ ಶಾಸ್ತ್ರ.

**(೩) ಛಂದಸ್ಸು**—ಇದು ಮಂತ್ರಗಳ ಪಂಕ್ತಿಪರಿಮಾಣವನ್ನೂ, ಅವುಗಳ ಪಠನ ವಿಧಾನವನ್ನೂ ತಿಳಿಸಿಕೊಡುವ ಶಾಸ್ತ್ರ.

ವ್ಯಾಕರಣ ಛಂದಸ್ಸುಗಳೆರಡೂ ವೇದಕ್ಕಿರುವಂತೆಯೇ ಕಾವ್ಯಕ್ಕೂ ಇರುವುವಾದರೂ ವೇದದಲ್ಲಿಯ ಅನೇಕ ಪ್ರಯೋಗಗಳು ವಿಲಕ್ಷಣವಾಗಿ, ಕಾವ್ಯದಲ್ಲಿ ಅಪರೂಪವಾಗಿರುತ್ತವೆ. ಈ ವೇದ ಪ್ರಯುಕ್ತವಾದ ವಿಶೇಷ ವ್ಯಾಕರಣ ಛಂದಸ್ಸುಗಳ ನಿಯಮಗಳನ್ನು ತಿಳಿಸುವ ಶಾಸ್ತ್ರಕ್ಕೆ ಪ್ರಾತಿಶಾಖ್ಯವೆಂದು ಹೆಸರು. ಈ ಪ್ರಾತಿಶಾಖ್ಯವು ಋಕ್ಕು, ಶುಕ್ಲಯಜುಸ್ಸು, ಕೃಷ್ಣಯಜುಸ್ಸು, ಸಾಮ, ಅಥರ್ವಣ—ಈ ಐದಕ್ಕೂ ಬೇರೆ ಬೇರೆಯಾಗಿದೆ.

**(೪) ನಿರುಕ್ತ**—ಇದು ವೇದ ನಿಘಂಟು. ಕಾವ್ಯಾದಿ ಇತರ ಗ್ರಂಥಗಳಲ್ಲಿ ಕಾಣಬಾರದ ಕೆಲವು ಪದಗಳೂ, ಬೇರೆ ಕಡೆಯಲ್ಲಿಲ್ಲದ ಅರ್ಥ ಸಂದರ್ಭಗಳೂ ವೇದದಲ್ಲಿ ಕಾಣಬರುತ್ತವೆ. ಈ ಪರಿಭಾಷೆಯನ್ನು ವಿವರಿಸುವುದು ನಿರುಕ್ತಿ.

**(೫) ಜ್ಯೋತಿಷ**—ಇದು ನಾನಾ ವೈದಿಕ ಕರ್ಮಗಳಿಗೆ ತಕ್ಕ ಋತು ತಿಥಿ ಮುಹೂರ್ತಗಳನ್ನು ಗೊತ್ತುಮಾಡಿಕೊಡುವ ಶಾಸ್ತ್ರ.

**(೬) ಕಲ್ಪ**—ಇದರಲ್ಲಿ ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರಗಳೆಂದು ಮೂರು ಜಾತಿಗಳುಂಟು. ವೇದ ಮಂತ್ರಗಳಲ್ಲಿ ಯಾವಯಾವುವು ಯಾವಯಾವ ಕರ್ಮಗಳಲ್ಲಿ ಹೇಗೆ ಹೇಗೆ ವಿನಿಯೋಗವಾಗುತ್ತವೆಂಬುದನ್ನೂ, ಕರ್ಮದ ಉಪಕರಣ ಸಂವಿಧಾನಗಳು ಹೇಗೆ ಹೇಗಿರಬೇಕೆಂಬುದನ್ನೂ ವಿವರಿಸುವುದು ಈ ಸೂತ್ರಗಳ ಉಪಕಾರ.

ವೇದಾಂಗಗಳು ಇಷ್ಟಿರುವುವಲ್ಲದೆ ಅವುಗಳಿಗೆ ಸಹಾಯವಾಗಿ ಉಪಾಂಗಗಳೂ ಇರುವುವು:—

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥

[ವೇದಗಳು ೪, ವೇದಾಂಗಗಳು ೬, ಈ ಕೆಳಗಿನ ಉಪಾಂಗಗಳು ೪—ಹೀಗೆ ವೇದ ಸಂಬಂಧಿಯಾದ ವಿದ್ಯೆಗಳು ೧೪.]

(೧) **ಮೀಮಾಂಸಾ**—ಇದು ಎರಡು ಭಾಗಗಳುಳ್ಳದು. ಪೂರ್ವ ಮೀಮಾಂಸೆಯು ವೇದದ ನಾನಾ ಭಾಗಗಳಲ್ಲಿ ಯಜ್ಞಯಾಗಾದಿಗಳಿಗೆ ಸಂಬಂಧಪಟ್ಟಂತೆ ಇರುವ ಮಂತ್ರಗಳ ಪರಸ್ಪರ ಸಾಮಂಜಸ್ಯವನ್ನೂ, ಅವುಗಳ ಅರ್ಥದ ರೀತಿಯನ್ನೂ ತಿಳಿಸಿಕೊಡತಕ್ಕುದು. ಉತ್ತರ ಮೀಮಾಂಸೆಯು ಇದೇ ಮರ್ಯಾದೆಯಲ್ಲಿ ವೇದದ ನಾನಾ ಭಾಗಗಳಲ್ಲಿ ಜೀವಾತ್ಮ ಪರಮಾತ್ಮ ವಿಚಾರಗಳಿಗೆ ಸಂಬಂಧಪಟ್ಟಂತೆ ಇರುವ ಮಂತ್ರಗಳ ಪರಸ್ಪರ ಸಾಮಂಜಸ್ಯವನ್ನೂ ಅವುಗಳ ಅರ್ಥದ ರೀತಿಯನ್ನೂ ತಿಳಿಸಿಕೊಡ ತಕ್ಕುದು.

(೨) **ನ್ಯಾಯ**—ಇದು ವಾದ ಮರ್ಯಾದೆಯನ್ನು ತಿಳಿಸಿಕೊಡತಕ್ಕುದು. ಒಂದು ವಿಚಾರದ ಮುಖ್ಯಾಂಶ ಅಮುಖ್ಯಾಂಶಗಳನ್ನು ನ್ಯೂನಾತಿರೇಕಗಳಿಲ್ಲದಂತೆ ಬೇರೆ ಬೇರೆ ವಿಂಗಡಿಸುವ ಬಗೆ, ಅವುಗಳನ್ನು ತಕ್ಕ ಯುಕ್ತಿಗಳೊಡನೆ ಚರ್ಚಿಸುವ ಬಗೆ, ಆ ಚರ್ಚೆಯಲ್ಲಿ ಉಪಯೋಗಕ್ಕೆ ಬರುವ ಪ್ರಮಾಣಗಳ ತಾರತಮ್ಯಗಳನ್ನು ನಿರ್ಣಯಿಸುವ ಬಗೆ, ಕಡೆಗೆ ಒಂದು ಸಿದ್ಧಾಂತವನ್ನು ಸಕಾರಣವಾಗಿ ಸ್ಥಾಪಿಸುವ ಬಗೆ—ಈ ತರ್ಕಪ್ರಕ್ರಮವನ್ನು ತಿಳಿಸತಕ್ಕ ಶಾಸ್ತ್ರವೇ ನ್ಯಾಯವೆಂಬುದು.

(೩) **ಪುರಾಣ**—ಇವು ವೇದ ವಚನಗಳಲ್ಲಿ ಅಡಗಿರುವ ಪೂರ್ವ ಕಥೆಗಳನ್ನು ವಿವರಿಸತಕ್ಕ ಪ್ರಬಂಧಗಳು. ವೇದವು ಅನೇಕ ಕಡೆ ಪುರಾತನ ವೃತ್ತಾಂತಗಳನ್ನು ಸ್ಮರಿಸುತ್ತದೆ: ಉದಾಹರಣೆ—ಇಂದ್ರ ವೃತ್ರರ ವೈರ. ಇಂತಹ ಸಂದರ್ಭಗಳನ್ನು ಪುರಾಣ ವಚನದಿಂದಲ್ಲದೆ ತಿಳಿಯಲಾಗುವುದಿಲ್ಲ.

(೪) **ಧರ್ಮಶಾಸ್ತ್ರ**—ಇದು ವೇದ ಧರ್ಮವನ್ನು ಅವಲಂಬಿಸಿರುವ ಜನರು ಅನುಸರಿಸಬೇಕಾದ ವರ್ಣಾಶ್ರಮ ವ್ಯವಸ್ಥೆಯನ್ನೂ ಆಚಾರ ವ್ಯವಹಾರ ನಿಬಂಧನೆಗಳನ್ನೂ ತಿಳಿಸಿಕೊಡತಕ್ಕುದು. ಇದೇ ಸ್ಮೃತಿಯೆಂಬುದು.

ಈ ಪ್ರಕಾರವಾಗಿರುವ ಶಾಸ್ತ್ರನಾನಾತ್ವದ ಜೊತೆಗೆ ಪ್ರಕ್ರಿಯಾ ನಾನಾತ್ವವೂ ಸೇರಿ ವೇದಾರ್ಥ ನಿರ್ಣಯವನ್ನು ಮಹಾ ಪ್ರಯಾಸವನ್ನಾಗಿ ಮಾಡಿದೆ. ಮೇಲಿನ ಒಂದೊಂದು ಶಾಸ್ತ್ರದಲ್ಲಿಯೂ ಪಾಠ ಭೇದಗಳೂ ಮತಭೇದಗಳೂ ಸಂಪ್ರದಾಯ ಭೇದಗಳೂ ಇವೆ. ವೇದಭಾಷ್ಯ ಪ್ರಣೇತೃಗಳಲ್ಲಿ ಅತ್ಯಂತ ಪ್ರಾಚೀನರಾದ ಯಾಸ್ಕಾಚಾರ್ಯರ ವೇಳೆಗೇ ಈ ಭೇದಗಳು ಹೇರಳವಾಗಿದ್ದಿರಬೇಕು. ಅವರು—

ಔದುಂಬರಾಯಣ, ಆಗ್ರಾಯಣ, ಕೌತ್ಸ, ಗಾರ್ಗ್ಯ, ಗಾಲವ ಮೊದಲಾದ ಅನೇಕ ಭಿನ್ನಮತ ಪ್ರತಿಪಾದಕರ ಹೆಸರುಗಳನ್ನೂ, ಯಾಜ್ಞಿಕರು, ಪರಿವ್ರಾಜಕರು, ನೈದಾನರು, ಐತಿಹಾಸಿಕರು ಎಂಬವರೇ ಮೊದಲಾದ ಅನೇಕ ಸಂಪ್ರದಾಯವರ್ತಿಗಳ ಹೆಸರುಗಳನ್ನೂ ಉದಾಹರಿಸಿರುವರು. ಈ ಅಂತರ್ಭೇದಗಳು ಸಾಯಣಾಚಾರ್ಯರ ಕಾಲಕ್ಕೆ ಇನ್ನೂ ಹೆಚ್ಚಿದ್ದುವು.

## ಭಾಷ್ಯ ಚರಿತ್ರೆ

ಹೀಗೆ ವಿವಿಧ ಕಷ್ಟಭೂಯಿಷ್ಠವಾಗಿರುವ ವೇದ ವ್ಯಾಖ್ಯಾನ ಪ್ರಸಂಗಕ್ಕೆ ಕೈಹಾಕಿದವರಲ್ಲಿ ಸಾಯಣರೇನೂ ಮೊದಲಿನವರಲ್ಲ. ಅವರಿಗೆ ಹಿಂದೆ ಯಾಸ್ಕಮುನಿಗಳಾದಿಯಾಗಿ ಅನೇಕರು* ಆ ಕೆಲಸಕ್ಕೆ ತೊಡಗಿದ್ದರು. ಆದರೆ ಈ ಪೂರ್ವಿಕರೆಲ್ಲರೂ ವೇದದ ಕೆಲಕೆಲವು ವಿಭಾಗಗಳನ್ನು ಮುಟ್ಟಿದ್ದವರೇ ಹೊರತು, ಸಾಯಣರಂತೆ ವೇದವೆಲ್ಲವನ್ನೂ ವ್ಯಾಖ್ಯಾನಸೀಮೆಯೊಳಕ್ಕೆ ಸೇರಿಸಿಕೊಂಡವರಲ್ಲ. ಸಾಯಣ ಭಾಷ್ಯಕ್ಕೆ ದೊರೆತಿರುವಷ್ಟು ವಿಸ್ತಾರವೂ ಚಿರಸ್ಥಾಯಿಯೂ ಆದ ಕೀರ್ತಿಯೂ ಅವರಲ್ಲೊಬ್ಬರಿಗೂ ಬಂದಿಲ್ಲ.

ಈ ಮಹಾಸಮಾರಂಭದಲ್ಲಿ ಸಾಯಣರು ಬಹು ಮಂದಿ ವಿದ್ವಾಂಸರ ಸಹಕಾರ†ವನ್ನು ಪಡೆದಿರಬೇಕೆಂಬ ಸಂಗತಿಯನ್ನು ಹಿಂದೆಯೇ ನೋಡಿರುವೆವು (ಪುಟ ೧೧೦–೧೧೩).

* ಇವರಲ್ಲಿ ರಾವಣನೆಂಬವರೂ ಒಬ್ಬರಂತೆ. ಸೂರ್ಯಪಂಡಿತರೆಂಬವರು ತಮ್ಮ "ಪರಮಾರ್ಥಪ್ರಭಾ" ಎಂಬ ಭಗವದ್ಗೀತಾ ವ್ಯಾಖ್ಯಾನದಲ್ಲಿ ತಾವು ರಾವಣ ಕೃತ ವೇದಭಾಷ್ಯವನ್ನು ನೋಡಿರುವಂತೆ ಬರೆದಿರುವರೆಂದೂ, ಯಜುರ್ವೇದದ ಒಂದು ಶಾಖೆಯಮೇಲಿನ ಈ ಭಾಷ್ಯದ ಭಾಗವು ಕೆಲವು ಕಡೆ ಅದ್ಯಾಪಿ ಪ್ರಚಾರದಲ್ಲಿರುವುದೆಂದೂ ಒಬ್ಬ ಸ್ನೇಹಿತರು ಮ್ಯಾಕ್ಸ್‌ಮುಲ್ಲರ್ ಪಂಡಿತರಿಗೆ ಕ್ರಿ. ವ. ೧೮೫೫ರಲ್ಲಿ ತಿಳಿಸಿದರು. (Page XLVIII, Preface to Vol. III of Edition I of the *Rig Veda.*) "ಪಾಶುಪತ ಮಹಾಯೋಗಿ ರಾವಣೋಕ್ತ ಶಿವಪೂಜಾನ್ಯಾಸ"ವೆಂಬ ರುದ್ರಾಧ್ಯಾಯ ವಿನಿಯೋಗ ಪ್ರಕರಣವೊಂದು ಈಗಲೂ ದಕ್ಷಿಣದೇಶದಲ್ಲಿ ರೂಢಿಯಲ್ಲಿದೆ.

† ಎ. ಎ. ಮೆಕ್‌ಡಾನೆಲ್ ಪಂಡಿತರ ಅಭಿಪ್ರಾಯವಿದು :—

"In concluding this account of Vedic Literature, I cannot omit to say a few words about Sayana, the great mediæval Vedic scholar, to whom *or to whose initiation* we owe a number of valuable commentaries on the Rigveda, the Aitareya Brahmana and Aranyaka, besides a number of other

ಋಗ್ವೇದದ ೪ನೆಯ ಮಂಡಲದ ೫೮ನೆಯ ಸೂಕ್ತದ ಮೇಲಣ ಭಾಷ್ಯೋಪಸಂಹಾರದಲ್ಲಿ ಹೀಗೆ ಹೇಳಿದೆ:—

ಇತ್ಥಂ ಶ್ರೀ ಬುಕ್ಕ ಭೂಪಾಲ ಸಾಮ್ರಾಜ್ಯೈಕ ಧುರಂಧರಃ।
ವಿದ್ಯಾತೀರ್ಥ ಗುರೋರ್ದೃಷ್ಟ್ಯಾ ಪ್ರಾಪ್ತ ಸಾರ್ವಜ್ಞ್ಯ ವೈಭವಃ ॥
ಶ್ರೀಮತ್ಸಾಯಣ ಮಂತ್ರೀಶಃ ಸಕಲಾಗಮತತ್ತ್ವವಿತ್।
ದಾಶತಯ್ಯಾಂ ಮಾಧವೀಯೇ ವೇದಾರ್ಥಸ್ಯ ಪ್ರಕಾಶನೇ ॥
ಚತುರ್ಥಂ ಮಂಡಲಂ ಸಮ್ಯಕ್ ವಾಮದೇವೇನ ವೀಕ್ಷಿತಂ।
ವ್ಯಾಕಾರ್ಷೀತ್ಸುಖಬೋಧಾರ್ಥಂ ಪಶ್ಯತ್ವೈತದ್ವಿಮತ್ಸರಾಃ ॥

ಈ ಶ್ಲೋಕಗಳಿಂದ ಮಾಧವ ಸಮರ್ಪಣೆ, ಸಾಯಣ ರಚನೆ, ವಾಮದೇವ ಸಹಕಾರ—ಈ ಮೂರು ಅಂಶಗಳೂ ಸ್ಪಷ್ಟಪಡುತ್ತವೆ. ಪಂಚಾಗ್ನಿಮಾಧವ, ನರಹರಿಭಟ್ಟ, ನಾರಾಯಣ ವಾಜಪೇಯಿ, ಪಂಡರಿ ದೀಕ್ಷಿತ, ನಾಗಾಭರಣಭಟ್ಟ, ವಾಮನ ಪಂಡಿತ—ಮೊದಲಾದವರು ಇತರ ಸಹಕಾರಿಗಳು.

ಭಾಷ್ಯ ಸಂರಂಭದ ಅವಸರದಲ್ಲಿ ಸಾಯಣಾಚಾರ್ಯರು ನಾನಾ ದೇಶಗಳಲ್ಲಿದ್ದ ನಾನಾ ಶಾಸ್ತ್ರ ದಿಗ್ದಂತಿಗಳ ವೃತ್ತಾಂತವನ್ನು ಹೇಗೆ ವಿಚಾರಿಸಿಕೊಂಡಿರಬಹುದು; ಹೇಗೆ ಅಂಥವರನ್ನು ಹುಡುಕಿಸಿ, ಕರೆಯಿಸಿ,

---

works. His comments on the two Samhitas would appear to have been only *partially composed by himself* and to have been *completed by his pupils*."—A. A MACDONELL, *History of Sanskrit Literature*, page 275.

ಅಥರ್ವಣವೇದ ಸಂಹಿತೆಯನ್ನು ಪ್ರಕಟಪಡಿಸಿರುವ ಡಬ್ಲ್ಯು. ಡಿ. ಹ್ವಿಟ್ನೀ ಪಂಡಿತರು ಅಥರ್ವಣ ಭಾಷ್ಯದಲ್ಲಿ ಅನೇಕ ಅಸಾಮಂಜಸ್ಯಗಳು ಕಾಣಬರುತ್ತವಾದಕಾರಣ ಇದನ್ನು ಬರೆದ ಸಾಯಣರು ಋಗ್ಭಾಷ್ಯವನ್ನು ಬರೆದ ಸಾಯಣರಲ್ಲದೆ ಬೇರೆ ಇರಬೇಕೆಂಬ ಅಭಿಪ್ರಾಯವನ್ನು ತಿಳಿಸಿ, ವೇದ ಭಾಷ್ಯದ ನಾನಾ ಭಾಗಗಳ ಭಿನ್ನ ಕರ್ತೃಕತೆಯನ್ನು ಸೂಚಿಸಿದ್ದಾರೆ.

(W. D. WHITNEY, Introduction to *Atharva Veda Samhita*, Edited by C. R. Lauman and published by the Harward University.)

ಶೃಂಗೇರಿಯಲ್ಲಿ ನದೀತೀರದಲ್ಲಿ ಶ್ರೀ ಶಾರದಾ ದೇವಾಲಯದೆದುರಿಗೆ ಇರುವ ಸ್ಥಳವನ್ನು ವೇದಭಾಷ್ಯ ರಚನೆಯಲ್ಲಿ ಸಾಯಣರಿಗೆ ನೆರವಾಗಿದ್ದ ಪಂಡಿತರ ಮನೆಗಳ ತಾವೆಂದೂ, ಅಲ್ಲಿ ಈಚೀಚಿನವರೆಗೂ ಮನೆಗಳಿದ್ದುವೆಂದೂ, ಅವುಗಳಲ್ಲಿ ಆ ಪಂಡಿತರುಗಳ ಸಂತತಿಯವರು ವಾಸವಾಗಿದ್ದರೆಂದೂ, ಆ ಪಂಡಿತರಲ್ಲಿ ಮೊದಲನೆಯ ಮನೆಯವರು ದ್ರಾವಿಡರೆಂದೂ, ಎರಡನೆಯ ಮನೆಯವರು ಕಮ್ಮೆಗಳೆಂದೂ, ಮೂರನೆಯ ಮನೆಯವರು ಕರ್ಣಾಟಕರೆಂದೂ, ಅವರಿಗೆ ವೃತ್ತಿಗಳೂ ವಿಶೇಷ ಗೌರವಗಳೂ ಇದ್ದುವೆಂದೂ ಒಂದು ಕಡೆಯನ್ನು ಪ್ರಕೃತ ಗ್ರಂಥಲೇಖಕನು ಕೇಳಿದ್ದಾನೆ.

ವಿಜಯನಗರದಲ್ಲಿ ನೆಲೆಗೊಳಿಸಿರಬಹುದು ; ಹೇಗೆ ಅವರನ್ನು ಪದೇ ಪದೇ ಸಭೆ ಸೇರಿಸಿ, ಅಲ್ಲಿ ನಾನಾ ವಿಧಗಳಾದ ಕ್ಲಿಷ್ಟ ವಿಚಾರಗಳನ್ನು ವಾದ ಕೈಕೊಡ್ಡಿರಬಹುದು ; ಆ ಪಂಡಿತರ ಚರ್ಚೆ ಉಪನ್ಯಾಸಗಳು ಹೇಗೆ ಪುಂಖಾನುಪುಂಖವಾಗಿ ಬೆಳೆದಿರಬಹುದು ; ಅಲ್ಲಿ ಹೇಗೆ ಗೀರ್ವಾಣ ವಾಣಿಯು ತಾಂಡವವಾಡಿರಬಹುದು ; ಆ ವಾಗ್ಝರಿಯ ನಡುವೆ ಸಾಯಣರು ಹೇಗೆ ಮಾಧ್ಯಸ್ಥಿಕರಾಗಿ ನಿಂತು ಉಭಯಪಕ್ಷಗಳ ಉದ್ವೇಗ ವನ್ನೂ ತಡೆದು, ಅವರಿಗೆ ಸಮಾಧಾನವನ್ನುಂಟುಮಾಡಲು ಹೇಗೆ ಅತಿ ಜಾಗರೂಕತೆಯಿಂದ ಪ್ರಯತ್ನಿಸಿರಬಹುದು ; ಕಡೆಗೂ ಆ ಪಾಂಡಿತ್ಯ ರಭಸದಿಂದ ಸಂದೇಹ ಪರಿಹಾರವಾಗದಿದ್ದಾಗ, ಅವರು ಹೇಗೆ ವಿದ್ಯಾ ರಣ್ಯರ ಸಾಹ್ಯವನ್ನು ಬಯಸಿರಬಹುದು ; ತಾವು ಸ್ವತಃ ಹೇಗೆ ಮನನ ಮಾಡಿ ಶಂಕೆಗಳನ್ನು ಪರಿಹರಿಸಿಕೊಂಡಿರಬಹುದು ; ಹೇಗೆ ಅವರು ತಮ್ಮ ಸಹೋದ್ಯೋಗಿಗಳೂ ಶಿಷ್ಯರೂ ಆದ ವಿದ್ವಾಂಸರು ಬರೆದು ತಂದು ತೋರಿಸಿದ ಪ್ರಬಂಧಗಳನ್ನು ಪರಾಮರ್ಶಿಸಿ ಪರಿಷ್ಕಾರಗೊಳಿಸಿರಬಹುದು; ಹೇಗೆ ಅವರ ಸಂಶಯಗಳನ್ನು ಹೋಗಲಾಡಿಸಿ ಮುಂದಿನ ಲೇಖನ ಕ್ರಮವನ್ನು ಅವರಿಗೆ ಉಪದೇಶಿಸಿರಬಹುದು ; ಹೇಗೆ ತಾವೂ ದಿನಂಪ್ರತಿ ವ್ರತನಿಷ್ಠೆಯಿಂದ ಕುಳಿತು ಲೇಖನಿಯನ್ನು ಹಿಡಿದು ಬೇಸರವಿಲ್ಲದೆ ಬರೆದಿರಬಹುದು ; ಹೇಗೆ ಹೇಗೆ ಎಲ್ಲ ಸಾರಸ್ವತ ಸಹಕಾರಿಗಳನ್ನೂ ಅವರು ಪುರಸ್ಕರಿಸಿ, ಪ್ರೋತ್ಸಾಹಿಸಿ, ಗ್ರಂಥಕಾರ್ಯಗಳಲ್ಲಿ ಪ್ರೇರಿಸಿರ ಬಹುದು—ಎಂಬೀ ವಿವರಗಳನ್ನು ನಾವು ಅಂತರಂಗದಲ್ಲಿ ಭಾವಿಸಿ ನೋಡಿದರೆ, ರೋಮಾಂಚವನ್ನುಂಟುಮಾಡಿಸಬಲ್ಲ ಮಹಾ ಸಮಾರಂಭದ ಚಿತ್ರವೊಂದು ನಮ್ಮ ಮನಶ್ಚಕ್ಷುವಿಗೆ ಗೋಚರಿಸುವುದಲ್ಲವೆ ?

ಬುಕ್ಕರಾಯನ ಆಶ್ರಯವಿಲ್ಲದಿದ್ದಲ್ಲಿ ಈ ಮಹಾಕಾರ್ಯಕ್ಕೆ ಬೇಕಾದ ವಿದ್ವತ್ಸಮ್ಮೇಳನವು ಸಾಧ್ಯವಾಗುತ್ತಿರಲಿಲ್ಲ. ಆ ಮಹಾರಾಜನು ಈ ಕಾರ್ಯಕ್ಕೆ ಪ್ರೋತ್ಸಾಹದಾಯಕನೂ ಪೋಷಕನೂ ಮಾತ್ರವೇ ಆಗಿದ್ದವನಲ್ಲ; ಆತನೇ ಅದರ ಮೂಲ ಪ್ರೇರಕನೆಂದು ಸಾಯಣ ವಚನ ಗಳಿಂದಲೇ ತಿಳಿದುಬರುತ್ತದೆ. ವೇದಭಾಷ್ಯದ ಉಪೋದ್ಘಾತದಲ್ಲಿಯ ವು ಈ ವಚನಗಳು :—

ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥ ಮಹೇಶ್ವರಂ ॥
ತತ್ಕಟಾಕ್ಷೇಣ ತದ್ರೂಪಂ ದಧದ್ ಬುಕ್ಕ ಮಹೀಪತಿಃ ।
ಅನ್ವಶಾ*ನ್ಮಾಧವಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥
ಸ ಪ್ರಾಹ ನೃಪತಿಂ ರಾಜನ್ ಸಾಯಣಾರ್ಯೋ ಮಮಾನುಜಃ ।
ಸರ್ವಂ ವೇತ್ತ್ಯೇಷ ವೇದಾನಾಂ ವ್ಯಾಖ್ಯಾತೃತ್ವೇ ನಿಯುಜ್ಯತಾಂ ॥
ಇತ್ಯುಕ್ತೋ ಮಾಧವಾರ್ಯೇಣ ವೀರಬುಕ್ಕ ಮಹೀಪತಿಃ ।
ಅನ್ವಶಾತ್ ಸಾಯಣಾಚಾರ್ಯಂ ವೇದಾರ್ಥಸ್ಯ ಪ್ರಕಾಶನೇ ॥
ಯೇ ಪೂರ್ವೋತ್ತರಮೀಮಾಂಸೇ ತೇ ವ್ಯಾಖ್ಯಾಯಾತಿ
ಸಂಗ್ರಹಾತ್ ।
ಕೃಪಾಲುರ್ಮಾಧವಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ ॥

[ಯಾರ ಉಸಿರೇ ವೇದಗಳೋ, ಯಾರು ವೇದಗಳಿಂದ ಅಖಿಲ ಜಗತ್ತನ್ನೂ ನಿರ್ಮಿಸಿರುವನೋ ಅಂಥಾ ಮಹೇಶ್ವರನ ಅವತಾರವಾದ ವಿದ್ಯಾತೀರ್ಥ ಗುರುಗಳಿಗೆ ವಂದನೆ. ಆ ಗುರುಗಳವರ ಕಟಾಕ್ಷಬಲದಿಂದ ಆ (ರಾಜ) ರೂಪವನ್ನು ತಾಳಿದ ಬುಕ್ಕ ಮಹೀಪತಿಯು ಮಾಧವಾಚಾರ್ಯರನ್ನು ಕುರಿತು ವೇದಗಳ ಅರ್ಥವನ್ನು ಪ್ರಕಾಶಪಡಿಸಬೇಕೆಂದು ಆಜ್ಞಾಪಿಸಿದನು. ಅವರು ಆ ನರಪತಿಯನ್ನು ಕುರಿತು—"ರಾಜನೇ, ನನ್ನ ತಮ್ಮ ಸಾಯಣಾರ್ಯನು ಎಲ್ಲವನ್ನೂ ತಿಳಿದವನು, ಆತನನ್ನು ಆ ವ್ಯಾಖ್ಯಾನ ಕಾರ್ಯಕ್ಕೆ ನಿಯಮಿಸೋಣವಾಗಲಿ" ಎಂದು ಹೇಳಿದರು. ಈ ಮಾತನ್ನು ಕೇಳಿ ವೀರಬುಕ್ಕ ಭೂಪತಿಯು ವೇದಾರ್ಥ ಪ್ರಕಾಶದ ಕಾರ್ಯವನ್ನು ಕುರಿತು ಸಾಯಣಾಚಾರ್ಯರಿಗೆ ಅಪ್ಪಣೆಕೊಟ್ಟನು. ಆ ಬಳಿಕ, ಪೂರ್ವಮೀಮಾಂಸಾ ಉತ್ತರಮೀಮಾಂಸಾ ಶಾಸ್ತ್ರಗಳ ಮೇಲೆ (ಜೈಮಿನೀಯ ನ್ಯಾಯಮಾಲೆ, ವೈಯಾಸಿಕ ನ್ಯಾಯಮಾಲೆಗಳ ರೂಪದಲ್ಲಿ) ಅತಿ ಸಂಗ್ರಹವಾಗಿ ವ್ಯಾಖ್ಯಾನಗಳನ್ನು ಬರೆದಿದ್ದ ಕೃಪಾಳುಗಳಾದ ಮಾಧವಾಚಾರ್ಯರು ವೇದಾರ್ಥವನ್ನು ವಿವರಿಸಲು ಉದ್ಯುಕ್ತರಾದರು.]

ಮೇಲಿನ ಶ್ಲೋಕಗಳಲ್ಲಿ ಕಡೆಯದು ಮಾಧವ-ವಿದ್ಯಾರಣ್ಯರ ವಿಷಯದಲ್ಲಿ ಕೇವಲ ಗೌರವಸೂಚಕವಾದುದೆಂದು ತೋರುತ್ತದೆ. ವೇದಾರ್ಥ ವಿವರಣೆಗೆ ವಾಸ್ತವವಾಗಿ ಉದ್ಯುಕ್ತರಾದವರು ಸಾಯಣರಾದರೂ, ಅವರು ತಮ್ಮ ಭಕ್ತಿವಿಶೇಷವನ್ನು ತೋರಿಸುವುದಕ್ಕಾಗಿ ಆ

---

* "ಅನ್ವಶಾನ್ಮಾಧವಾಚಾರ್ಯಂ" ಎಂಬುದಕ್ಕೆ ಪ್ರತಿಯಾಗಿ "ಆದಿಶನ್ಮಾಧವಾಚಾರ್ಯಂ" ಎಂದು ಪಾಠಾಂತರವುಂಟು.

ಗ್ರಂಥ ರಚನೆಯ ಕೀರ್ತಿಯನ್ನು ಅಣ್ಣಂದಿರಮೇಲೆ ಆರೋಪಣೆಮಾಡಿರ ಬೇಕು. ಈ ಶ್ಲೋಕಕ್ಕೆ—

"ಕೃಪಾಲುಃ ಸಾಯಣಾಚಾರ್ಯೋ ವೇದಾರ್ಥಂ ವಕ್ತುಮುದ್ಯತಃ"

—ಅಥವಾ "ಕೃಪಾಲುಃ ಸಾಯಣಾಚಾರ್ಯೋ ವೇದಾರ್ಥಂ ವ್ಯಾಕರೋತ್ಸಲು"

—ಎಂದೇ ಪಾಠಾಂತರವಿದೆ. ಆದುದರಿಂದ "ಕೃಪಾಲುರ್ಮಾಧವಾ ಚಾರ್ಯೋ" ಎಂಬ ಪಾಠವನ್ನು ನಾವು ಅಂಗೀಕರಿಸಬೇಕಾದ ಪಕ್ಷದಲ್ಲಿ, ಅದನ್ನು ಔಪಚಾರಿಕ ವಚನವೆಂದೇ ಗ್ರಹಿಸಬೇಕು. ಸಾಯಣರನ್ನು ಭಾಷ್ಯ ಕಾರ್ಯಕ್ಕೆ ನಿಯಮಿಸಲು ಕಾರಣರಾದವರೂ, ಅವರನ್ನು ಆ ಕಾರ್ಯದಲ್ಲಿ ನಡೆಯಿಸುವುದಕ್ಕೆ ಅಧಿಕಾರಿಗಳಾದವರೂ ಮಾಧವ-ವಿದ್ಯಾರಣ್ಯರೇ ಆಗಿದ್ದುದರಿಂದ ವೇದಭಾಷ್ಯವು ಅವರ ಕೃತಿಯೆಂದೇ ಸಾಯಣರು ಆಲಂಕಾರಿಕ ರೀತಿಯಲ್ಲಿ ಹೇಳಿರುವುದು ಉಚಿತವೇ ಆಗಿದೆ. ಇದು ಆ ಸಹೋದರರಿಗಿದ್ದ ಅವಿನಾಭಾವವನ್ನು ಸೂಚಿಸುತ್ತದೆ.

ಮಾಧವ–ವಿದ್ಯಾರಣ್ಯರ ಕೈಯ ಜೊತೆಗೆ ಜೈಮಿನೀಯ ನ್ಯಾಯ ಮಾಲೆಯಲ್ಲಿ ಸಾಯಣರ ಕೈಯೂ, ವೈಯಾಸಿಕ ನ್ಯಾಯಮಾಲೆಯಲ್ಲಿ ಭಾರತೀ ಕೃಷ್ಣತೀರ್ಥರ ಕೈಯೂ ಸೇರಿರುವುದೆಂಬ ಸಂಗತಿಯನ್ನು ಹಿಂದೆ ಕಂಡಿದೆ (ಪುಟ ೫೭, ೧೦೯, ೧೧೦). ಈ ಉಭಯ ನ್ಯಾಯ ಮಾಲಾವಿಸ್ತರಗಳೂ ವೇದಭಾಷ್ಯಕ್ಕೆ ಪೂರ್ವಭಾವಿಯಾಗಿ, ಅದಕ್ಕೆ ಪೀಠಿಕಾ ಪ್ರಾಯವಾಗಿ, ರಚಿತವಾದುವು*.

ಭಾಷ್ಯಪ್ರಕರಣಗಳ ಪ್ರಾರಂಭ ಪರಿಸಮಾಪನೆಗಳಲ್ಲಿ ವಿದ್ಯಾತೀರ್ಥ ಗುರುಕೀರ್ತನೆಯೂ ಬುಕ್ಕರಾಜ ಸ್ಮರಣೆಯೂ ಇರುವುವಲ್ಲದೆ, ಮಾತಾ ಪಿತೃಧ್ಯಾನವೂ ಅಲ್ಲಲ್ಲಿ ಕಾಣಬರುತ್ತದೆ.

ಋಗ್ವೇದದ ಎಂಟನೆಯ ಮಂಡಲದ ೪೭ನೆಯ ಸೂಕ್ತದಲ್ಲಿ—

ಷಷ್ಠೇ ತೃತೀಯಮಧ್ಯಾಯಂ ವ್ಯಾಖ್ಯಾಯ ಶ್ರೀಮತೀಸುತಃ।
ಶ್ರೀ ಸಾಯಣಾರ್ಯಃ ಸಂಗೃಹ್ಯ ಚತುರ್ಥಂ ವ್ಯಾಕರೋತ್ಯಥ ॥

* ಈ ನ್ಯಾಯಮಾಲಾದ್ವಯದ ವಿಷಯ ವಿವರವನ್ನು ಮಾಧವ-ವಿದ್ಯಾರಣ್ಯ ಕಥಾ ಭಾಗದಲ್ಲಿ ಸ್ವಲ್ಪ ವಿಸ್ತರಿಸಿ ಹೇಳಬಹುದು.

ಅದೇ ಮಂಡಲದ ೭೮ನೆಯ ಸೂಕ್ತದಲ್ಲಿ—

ಷಷ್ಠೇ ಚತುರ್ಥಮಧ್ಯಾಯಂ ಶ್ರೀಮಾಯಣಸುತಸ್ಸುಧೀಃ ।
ವ್ಯಾಖ್ಯಾಯ ಸಾಯಣಾಚಾರ್ಯಃ ಪಂಚಮಂ ವ್ಯಾಕರೋತ್ಯಥ ॥

ವೇದದ ನಾನಾ ಭಾಗಗಳಲ್ಲಿ ಮೊದಲು ವ್ಯಾಖ್ಯಾತವಾದುದು ಯಜುರ್ವೇದ. ಇದಕ್ಕೆ ಕಾರಣವು ಅದು ಸಾಯಣರ ಸ್ವಕೀಯಶಾಖೆಯೆಂಬ ಅಭಿಮಾನವಲ್ಲ; ಶ್ರೌತ ಕರ್ಮಗಳಿಗೆ ಯಜುಸ್ಸೇ ಮೂಲಾಧಾರವೆಂಬುದು ಕಾರಣ. ಇದನ್ನು ಅವರ ವಾಕ್ಯಗಳಲ್ಲಿಯೇ ಮುಂದೆ ಕಾಣಬಹುದು. ಯಜುಸ್ಸಿನ ತರುವಾಯ ಆದುದು ಋಗ್ಭಾಷ್ಯ. ಆಮೇಲಿನವು ಸಾಮ*ಅಥರ್ವಣಗಳವು.

ಭಾಷ್ಯಪ್ರಮೇಯಗಳಲ್ಲಿ ಸಾಯಣರು ತಮಗೆ ಪೂರ್ವಿಕರಾದ ವೇದವೇದಾಂಗ ವ್ಯಾಖ್ಯಾತೃಗಳನೇಕರ ಹೆಸರುಗಳನ್ನು ಸ್ಮರಿಸಿ ಅವರ ವಾಕ್ಯಗಳನ್ನು ಉದಾಹರಿಸಿದ್ದಾರೆ. ಅಂಥವರಲ್ಲಿ ಮುಖ್ಯರಾದ ಕೆಲವರ ಹೆಸರುಗಳನ್ನು ಇಲ್ಲಿ ಕೊಡಬಹುದು:—

**ಯಾಸ್ಕಮುನಿ**—ಇವರು ನಿರುಕ್ತಾಚಾರ್ಯರು. ಇವರ ಗ್ರಂಥದಲ್ಲಿ ನೈಘಂಟುಕಕಾಂಡ, ನೈಗಮಕಾಂಡ, ದೇವತಾಕಾಂಡಗಳೆಂಬ ಮೂರು ಭಾಗಗಳಿವೆ. ಈ ಪ್ರಾಚೀನರ ಸ್ಮರಣೆಯು ಸಾಯಣ ಭಾಷ್ಯದಲ್ಲಿ ಪದೇ ಪದೇ ಬರುತ್ತಲೇ ಇರುತ್ತದೆ.

**ಆಶ್ವಲಾಯನ, ಆಪಸ್ತಂಬ**—ಇವರ ಶ್ರೌತಸೂತ್ರ ಗೃಹ್ಯಸೂತ್ರಗಳೂ ಅವುಗಳ ಮೇಲಿನ ವ್ಯಾಖ್ಯಾನಗಳೂ ಪದೇ ಪದೇ ಉದಾಹೃತಗಳಾಗಿವೆ.

**ಪಾಣಿನಿ, ಕಾತ್ಯಾಯನ, ಪತಂಜಲಿ**—ಇವರ ಪ್ರಸಿದ್ಧ ವ್ಯಾಕರಣ ಪ್ರಬಂಧಗಳೂ ಹಾಗೆಯೇ. ಇವುಗಳ ಜೊತೆಗೆ ವಾಮನಾಚಾರ್ಯರ "ಕಾಶಿಕಾ" ವೃತ್ತಿಯೂ ಅದರ ಮೇಲಿನ ಟೀಕೆಗಳಾದ (೧) ಹರದತ್ತಾಚಾರ್ಯರ "ಪದಮಂಜರಿ", (೨) ನ್ಯಾಸಕಾರರೆಂದು ಹೆಸರುಪಡೆದಿರುವ ಜಿನೇಂದ್ರಾಚಾರ್ಯರ "ಕಾಶಿಕಾವೃತ್ತಿ ಪಂಚಿಕಾ" ಇವುಗಳೂ ಅಲ್ಲಲ್ಲಿ ಉದಾಹೃತಗಳಾಗಿವೆ.

---

* ತಾಂಡ್ಯ ಬ್ರಾಹ್ಮಣ ಭಾಷ್ಯದಲ್ಲಿ ಸಾಯಣ ವಚನವು ಹೀಗಿದೆ:—

ವ್ಯಾಖ್ಯಾತಾವೃಗ್ಯಜುರ್ವೇದೌ ಸಾಮವೇದೇಽಪಿ ಸಂಹಿತಾ ।
ವ್ಯಾಖ್ಯಾತಾ ಬ್ರಾಹ್ಮಣವ್ಯಾಖ್ಯಾಂ ಕರೋಮ್ಯದ್ಯಾತ್ರ ಬುದ್ಧಯೇ ॥

**ಭಟ್ಟಭಾಸ್ಕರಮಿಶ್ರ**—ಇವರು ಕೃಷ್ಣಯಜುರ್ವೇದಕ್ಕೆ ಭಾಷ್ಯ ಬರೆದವರು. ಸಾಯಣಾಚಾರ್ಯರ ಋಕ್ಸಂಹಿತಾ ಭಾಷ್ಯದಲ್ಲಿ ಪ್ರಥಮ ಮಂಡಲದ ೬೩ನೆಯ ಸೂಕ್ತದ ೪ನೆಯ ಮಂತ್ರದಲ್ಲಿಯ "ಪರಾಚೈಃ" ಶಬ್ದದ ವಿಚಾರದಲ್ಲಿ—"ಪರಾಚೈರಿತ್ಯೇತದವ್ಯಯಂ। ನೀಚೈರುಚ್ಚೈರಿತಿವದಿತಿ ಭಟ್ಟಭಾಸ್ಕರಮಿಶ್ರಃ।" ಎಂದು ಬರೆದಿದೆ. ಅದೇ ಮಂಡಲದ ೮೪ನೆಯ ಸೂತ್ರದ ೧೫ನೆಯ ಮಂತ್ರದ ಅರ್ಥವಿಚಾರದಲ್ಲಿ—"ಅಪೀಚ್ಯೋಽಪ್ರಕಾಶ ಇತಿ ಭಟ್ಟಭಾಸ್ಕರಮಿಶ್ರಃ।" ಎಂದಿದೆ. ಹೀಗೆ ಇನ್ನೂ ಕೆಲವೆಡೆ ಇದೆ. ತೈತ್ತಿರೀಯ ಬ್ರಾಹ್ಮಣ ಭಾಷ್ಯದಲ್ಲಂತೂ ಕೆಲವು ಕಡೆ (ತೃತೀಯಾಷ್ಟಕ ಅಷ್ಟಮ ಪ್ರಪಾಠಕ) ಸಾಯಣ ವಾಕ್ಯಗಳು ಭಟ್ಟಭಾಸ್ಕರ ವಾಕ್ಯಗಳ ಅನುವಾದದಂತೆಯೇ ಇವೆ. ಧಾತುವೃತ್ತಿಯಲ್ಲಿಯೂ ಭಟ್ಟಭಾಸ್ಕರ ಸ್ಮರಣೆಯಿದೆ.

**ಭರತಸ್ವಾಮಿ**—ಇವರು ಸಾಮವೇದದ ಒಂದು ಭಾಗದ ಮೇಲೆಯೂ ಇತರ ವೇದ ಭಾಗಗಳ ಮೇಲೆಯೂ ಭಾಷ್ಯ ಬರೆದಿರುವಂತೆ ತೋರುತ್ತದೆ.

**ಸ್ಕಂದಸ್ವಾಮಿ**—ಇವರು ನಿರುಕ್ತ ಟೀಕೆಯೊಂದನ್ನು ಬರೆದಿದ್ದಾರೆ. ಬೇರೆ ವೇದಭಾಷ್ಯವನ್ನು ಬರೆದಿದ್ದರೂ ಇರಬಹುದು.

**ಉದ್ಗೀಥ**—ಇವರ ಅಭಿಪ್ರಾಯದ ಸ್ಮರಣೆಯೊಂದು ಕಡೆ ಇದೆ. ಇವರ ಕೃತಿಯ ವಿವರಗಳು ತಿಳಿಯಬಂದಿಲ್ಲ.

**ಕಪರ್ದಿಸ್ವಾಮಿ**—ಇವರು ಆಪಸ್ತಂಬರ ಗೃಹ್ಯಸೂತ್ರಗಳ ಮೇಲೆ ವ್ಯಾಖ್ಯಾನ ಬರೆದಿರುವರು. ಇವರು ವೇದಭಾಷ್ಯ ಬರೆದಿದ್ದರೋ ಇಲ್ಲವೋ ನಿಷ್ಕರ್ಷೆಯಾಗಿ ತಿಳಿದಿಲ್ಲ.

ಇವುಗಳಲ್ಲದೆ ಸಾಯಣರ ಸ್ವಕೀಯ ಕೃತಿಗಳಿಂದಲೂ ವಾಕ್ಯಗಳು ಉದ್ಧೃತಗಳಾಗಿವೆ. ಭಾಷ್ಯದ ಪೀಠಿಕೆ ಮೊದಲಾದ ಕೆಲವು ಜಿಜ್ಞಾಸಾ ಸಂದರ್ಭಗಳಲ್ಲಿ ವ್ಯಾಸ ಮಹರ್ಷಿಗಳ ಉತ್ತರಮೀಮಾಂಸಾ ಸೂತ್ರಗಳೂ, ಮಂತ್ರ ವಿನಿಯೋಗ ವಿವರಣೆಯ ಬಹು ಸಂದರ್ಭಗಳಲ್ಲಿ ಜೈಮಿನಿ ಮಹರ್ಷಿಗಳ ಪೂರ್ವಮೀಮಾಂಸಾ ಸೂತ್ರಗಳೂ ಉದಾಹೃತಗಳಾಗಬೇಕಾದುದು ಅನಿವಾರ್ಯವೇ ಸರಿ. ಇಂತಹ ಸಂದರ್ಭಗಳಲ್ಲೆಲ್ಲಾ ಆಯಾ ಸೂತ್ರಗಳ ಜೊತೆಗೆ ತಮ್ಮ—ಎಂದರೆ ಭಾರತೀತೀರ್ಥ-ವಿದ್ಯಾರಣ್ಯ-ಸಾಯಣ ತ್ರಿತಯದ—ಉಭಯ ನ್ಯಾಯಮಾಲಾ ವಿಸ್ತರಗಳ

ಸಂಗ್ರಹ ಶ್ಲೋಕಗಳನ್ನೂ ಉದಾಹರಿಸಿದ್ದಾರೆ. ವ್ಯಾಕರಣ ಪ್ರಮೇಯ ಗಳಲ್ಲಿ ಸ್ವಕೀಯ ಧಾತುವೃತ್ತಿ*ಯನ್ನೂ ಸ್ಮರಿಸಿದ್ದಾರೆ.

ಐತಿಹ್ಯ ಸಂಗತಿಗಳನ್ನು ಸ್ಪಷ್ಟಪಡಿಸುವುದಕ್ಕಾಗಿಯೂ ತಾವು ಕೊಟ್ಟಿರುವ ಅರ್ಥಗಳನ್ನು ದೃಢೀಕರಿಸುವುದಕ್ಕಾಗಿಯೂ ಎಷ್ಟೋ ಪುರಾಣಗಳಿಂದಲೂ, ಧರ್ಮಶಾಸ್ತ್ರಗಳಿಂದಲೂ, ಇತರ ಪ್ರಾಚೀನ ಗ್ರಂಥ ಗಳಿಂದಲೂ ವಾಕ್ಯಗಳನ್ನಾಯ್ದುಕೊಂಡಿದ್ದಾರೆ. ಉದಾಹರಣೆ— ಐತರೇಯ ಬ್ರಾಹ್ಮಣದ ೩೩ನೆಯ ಅಧ್ಯಾಯದ ಪ್ರಥಮ ಖಂಡ ಭಾಷ್ಯದಲ್ಲಿ,

"ತಥಾ ಚ ಸ್ಮರ್ಯತೇ—

ಸಂಭವೇ ಸ್ವಜನ ದುಃಖಕಾರಿಕಾ ।
ಸಂಪ್ರದಾನ ಸಮಯೇಽರ್ಥಹಾರಿಕಾ ॥
ಯೌವನೇಽಪಿ ಬಹುದೋಷಕಾರಿಕಾ ।
ದಾರಿಕಾ ಹೃದಯದಾರಿಕಾ ಪಿತುಃ ॥"

ಇಂಥಾ ಉದಾಹರಣೆಗಳೆಷ್ಟೋ ಇವೆ. ಇದರಿಂದೆಲ್ಲ ಬೋಧ್ಯವಾಗುವುದು ಭಾಷ್ಯ ಲೇಖಕರಿಗಿದ್ದ ಅದ್ಭುತ ವಿಸ್ತೀರ್ಣವಾದ ಗ್ರಂಥಪರಿಚಯ.

ಆದರೂ ಸಾಯಣರ ಬರೆವಣಿಗೆಯನ್ನು ಪಾಂಡಿತ್ಯದ ಆಡಂಬರ ವೆಂದು ಯಾರೂ ಹೇಳಲಾರರು. ವಿಷಯದ ಗುರುತೆಯನ್ನೂ ಗಹನತೆ ಯನ್ನೂ ಜ್ಞಾಪಕದಲ್ಲಿಟ್ಟುಕೊಂಡರೆ ಅವರ ರೀತಿಗಿಂತ ಸರಳವಾದ ರೀತಿಯಲ್ಲಿ ಬರೆಯುವುದು ಸಾಧ್ಯವೇ ಇರದೆಂದು ತೋರುತ್ತದೆ. ಋಗ್ಭಾಷ್ಯಾರಂಭದಲ್ಲಿ ಅವರು ಮಾಡಿರುವ ಪ್ರತಿಜ್ಞೆಯಿಂದಲೇ ಅವರು ಎಂತಹ ಶೈಲಿಯನ್ನುದ್ದೇಶಿಸಿದ್ದರೆಂಬುದು ಗೊತ್ತಾಗುತ್ತದೆ:—

---

* ಋಗ್ವೇದ ಪ್ರಥಮ ಮಂಡಲದ ೧ನೆಯ ಅಧ್ಯಾಯದ ೫೧ನೆಯ ಸೂಕ್ತದ ೬ನೆಯ ಮಂತ್ರದ "ಪಥಮಾದೇಷು" ಎಂಬ ಪ್ರಯೋಗದ ವಿಷಯದಲ್ಲಿ, "ಇತ್ಯತ್ರೈವ ಮದ ಇತಿ ವಕ್ತವ್ಯೇ ಯನ್ಮದೋಽನುಪಸರ್ಗ ಇತಿ ಪೃಥಗುಪಾದಾನಂ ತದ್ರ್ಯಾಪಿ ಪಕ್ಷೇ ಯಥಾಸ್ಯಾದಿತಿ ನ್ಯಾಸಕಾರೇಣ ಪ್ರತ್ಯಪಾದೀ ತ್ಯಸ್ಮಾಭಿರ್ಧಾತುವೃತ್ತಾವುಕ್ತಂ" ಎಂದು ಹೇಳಿದೆ. ಮಂಡಲ ೧, ಸೂಕ್ತ ೪೨ ರಲ್ಲಿ—"ಗ್ಲುಸ್ಚು ಷಸ್ಚ ಗತಾವಿತ್ಯತ್ರ ಸತ್ತಿಮಷ್ಯೇಕೇ ಪಠಂತೀತಿ ಧಾತುವೃತ್ತಾವುಕ್ತಂ." ಮಂಡಲ ೧, ಸೂಕ್ತ ೬೨ರಲ್ಲಿ:—"ಅಸ್ಮಾಭಿರ್ಧಾತುವೃತ್ತಾವಯಂ ಧಾತುರ್ನಿರಾಕೃತಃ."

ವ್ಯುತ್ಪನ್ನಸ್ತಾವತಾ ಸರ್ವಂ ಬೋದ್ಧುಂ ಶಕ್ನೋತಿ ಬುದ್ಧಿಮಾನ್॥

(ಈ ಅಧ್ಯಾಯವನ್ನು ಚೆನ್ನಾಗಿ ಓದಿದ ಬುದ್ಧಿಶಾಲಿಯು ಎಲ್ಲವನ್ನೂ ತಾನೆ ತಿಳಿದುಕೊಳ್ಳಲು ಶಕ್ತನಾಗುತ್ತಾನೆ.)

ಜ್ಞಾನಾರ್ಥಿಯಾದವನು ಎಲ್ಲಪನ್ನೂ ಕೂಡಿದಮಟ್ಟಿಗೂ ಅನ್ಯ ಸಹಾಯವಿಲ್ಲದೆಯೇ ಕಂಡುಕೊಳ್ಳಲಾಗುವಷ್ಟು ಮಟ್ಟಿಗೆ ವಿಷಯವನ್ನು ಸುಲಭಪಡಿಸಿಕೊಡಬೇಕೆಂಬುದು ಅವರ ಆಶಯ. ಅವರ ಪದಗಳು ನಿರಾಯಾಸವಾಗಿ, ಸಂವಾದ ಸರಣಿಯಲ್ಲಿ ಬಂದಿವೆ; ಆದರೆ ಎಷ್ಟು ಬೇಕೋ ಅಷ್ಟಕ್ಕಿಂತ ಹೆಚ್ಚಿಲ್ಲ. ವಾದಬಂಧವು ಬಿಗಿಯಾಗಿದೆ; ಆದರೆ ತರ್ಕ ಸಾಮಾನ್ಯವಾದ ಜಟಿಲತೆ ಕರ್ಕಶತೆಗಳನ್ನು ಬಿಟ್ಟಿದೆ. ಎಲ್ಲವೂ ಮಿತವಾಗಿದೆ; ಎಲ್ಲವೂ ವಿಶದವಾಗಿದೆ. ಯಾರಿಗೆ ಶಾಸ್ತ್ರಸರ್ವಸ್ವವೂ ಹಸ್ತಗತವಾಗಿ, ಬೋಧನಕಾರ್ಯವು ಲೀಲಾಪ್ರಾಯವಾಗಿ, ಪಾಂಡಿತ್ಯ ಪ್ರದರ್ಶನದ ಆತುರವೇನೇನೂ ಇಲ್ಲದೆ, ಕ್ಲಿಷ್ಟಾಂಶಗಳನ್ನು ಸ್ಪಷ್ಟಗೊಳಿಸಬೇಕೆಂಬುದೊಂದೇ ಮನೋಗತವಾಗಿರುವುದೋ ಅಂಥವರ ಕರಲಾಘವವು ಸಾಯಣ ಭಾಷ್ಯದ ಲೇಖನಶಯ್ಯೆಯಲ್ಲಿ ಕಾಣಬರುತ್ತದೆ.

ವೇದಾರ್ಥ ಪ್ರಕಾಶದ ಸಂಕ್ಷಿಪ್ತ ಪ್ರತಿಬಿಂಬವನ್ನು, ಅಥವಾ ಸಾರಾಂಶ ಸಂಗ್ರಹವನ್ನು, ಇಲ್ಲಿ ಕೊಡಲು ಪ್ರಯತ್ನಿಸಬೇಕೆಂದು ಯಾರೂ ನಿರೀಕ್ಷಿಸಲಾರರು. ಅಷ್ಟು ವಿಸ್ತಾರವಾದ ಮತ್ತು ವಿವಿಧ ವಿಷಯಾತ್ಮಕವಾದ ಮಹಾ ಪ್ರಬಂಧವನ್ನು ಮುಖ್ಯಾಂಶಗಳಿಗೆ ನ್ಯೂನತೆ ತಾರದ ರೀತಿಯಲ್ಲಿ ಸಂಕ್ಷೇಪಗೊಳಿಸುವುದು ಅಸಾಧ್ಯವೆಂದೇ ಹೇಳಬೇಕು. ವೇದಕ್ಕೆ ಸಂಬಂಧಪಟ್ಟ ಕೆಲವು ಮುಖ್ಯ ವಿಚಾರಗಳಲ್ಲಿ ಸಾಯಣರ ಅಭಿಪ್ರಾಯಗಳೆಂತಿದ್ದುವೆಂಬುದನ್ನು ಮಾತ್ರ ಸೂಕ್ಷ್ಮವಾಗಿ ನೋಡಲು ಇಲ್ಲಿ ಅವಕಾಶ ತೆಗೆದುಕೊಳ್ಳಬಹುದು.*

## ವೇದವೆಂದರೇನು?

ಇಷ್ಟಪ್ರಾಪ್ತ್ಯನಿಷ್ಟ ಪರಿಹಾರಯೋ ರಲೌಕಿಕಮುಪಾಯಂ ಯೋ ಗ್ರಂಥೋ ವೇದಯತಿ ಸ ವೇದಃ। ಅಲೌಕಿಕ ಪದೇನ ಪ್ರತ್ಯಕ್ಷಾನುಮಾನೇ ವ್ಯಾವರ್ತ್ಯೇತೇ। ಅನುಭೂಯ

* ಈ ಮುಂದೆ ಸಂಸ್ಕೃತ ವಾಕ್ಯಗಳ ಕೆಳಗೆ ಇರುವ ಕನ್ನಡ ವಾಕ್ಯಗಳು ಭಾಷಾಂತರವಲ್ಲ; ಶಾಸ್ತ್ರ ಜಜ್ಞಾಸೆಯನ್ನು ಬಿಟ್ಟುಳಿದ ಸಾರಾಂಶ ಮಾತ್ರ.

ಮಾನ ಸ್ರಕ್ಚಂದನ ವನಿತಾದೇರಿಷ್ಟಪ್ರಾಪ್ತಿ ಹೇತುತ್ವಮೌಷಧ ಸೇವನಾದೇ ರನಿಷ್ಟ ಪರಿಹಾರ ಹೇತುತ್ವಂ ಚ ಪ್ರತ್ಯಕ್ಷತಃ ಸಿದ್ಧಮ್ । ಸ್ವೇನಾನು ಭವಿಷ್ಯಮಾಣಸ್ಯ ಪುರುಷಾಂತರ ಗತಸ್ಯ ಚ ತಥಾತ್ವಮನುಮಾನ ಗಮ್ಯಮ್ । . . . . . . । ನ ಖಲು ಜ್ಯೋತಿಷ್ಟೋಮಾದಿರಿಷ್ಟ ಪ್ರಾಪ್ತಿಹೇತುಃ ಕಲಂಜ ಭಕ್ಷಣ ವರ್ಜನಾದಿರನಿಷ್ಟ ಪರಿಹಾರ ಹೇತು ರಿತ್ಯಮುಮರ್ಥಂ ವೇದವ್ಯತಿರೇಕೇಣಾನುಮಾನ ಸಹಸ್ರೇಣಾಪಿ ತಾರ್ಕಿಕ ಶಿರೋಮಣಿ ರಪ್ಯನುಮಾತುಂ ಶಕ್ನೋತಿ । ತಸ್ಮಾದಲೌಕಿಕೋಪಾಯ ಬೋಧಕೋ ವೇದ ಇತಿ ನ ಲಕ್ಷಣಸ್ಯಾತಿವ್ಯಾಪ್ತಿಃ । ಅತ ಏವೋಕ್ತಮ್—

ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥

ಸ ಏವೋಪಾಯೋ ವೇದಸ್ಯ ವಿಷಯಃ । ತದ್ಬೋಧ ಏವ ಪ್ರಯೋಜನಂ । ತದ್ಬೋಧಾರ್ಥೀ ಚಾಧಿಕಾರೀ । ತೇನ ಸಹೋಪಕಾರ್ಯೋಪಕಾರಕ ಭಾವಃ ಸಂಬಂಧಃ ॥ ನನ್ವೇವಂ ಸತಿ ಸ್ತ್ರೀ ಶೂದ್ರ ಸಹಿತಾಃ ಸರ್ವೇಽಧಿಕಾರಿಣಃ ಸ್ಯುಃ । ಇಷ್ಟಂ ಮೇ ಭವತ್ವನಿಷ್ಟಂ ಮೇ ಮಾಭೂದಿತ್ಯಾಶಿಷಃ ಸರ್ವಜನೀನತ್ವಾತ್ । ಮೈವಂ । ಸ್ತ್ರೀಶೂದ್ರಯೋಃ ಸತ್ಯುಪಾಯಬೋಧಾರ್ಥಿತ್ವೇ ಹೇತ್ವಂತರೇಣ ವೇದಾಧಿಕಾರ ಪ್ರತಿಷೇಧಾತ್ । ಉಪನೀತಸ್ಯೈವಾಧ್ಯಯನಾಧಿಕಾರಂ ಬ್ರುವನ್ನನುಪನೀತಯೋ ಸ್ತಯೋ ರ್ವೇದಾಧ್ಯಯನ ಮನಿಷ್ಟಪ್ರಾಪ್ತಿ ಹೇತುರಿತಿ ಬೋಧಯತಿ । ಕಥಂ ತರ್ಹಿ ತಯೋ ಸ್ತದುಪಾಯಾವಗಮಃ । ಪುರಾಣಾದಿಭಿರಿತಿ ಬ್ರೂಮಃ । ಅತ ಏವೋಕ್ತಮ್—

ಸ್ತ್ರೀ ಶೂದ್ರ ದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥

—ಇತಿ । ತಸ್ಮಾದುಪನೀತ್ಯೈರೇವ ತ್ರೈವರ್ಣಿಕೈರ್ವೇದಸ್ಯ ಸಂಬಂಧಃ ॥

[ ಇಷ್ಟಪ್ರಾಪ್ತಿಗಾಗಿಯೂ ಅನಿಷ್ಟ ನಿವಾರಣೆಗಾಗಿಯೂ ಅಲೌಕಿಕವಾದ ಉಪಾಯವನ್ನು ಯಾವ ಗ್ರಂಥವು ಬೋಧಿಸುತ್ತದೆಯೋ ಅದು ವೇದ. '' ಅಲೌಕಿಕ '' ಎಂಬ ಮಾತಿನಿಂದ ಪ್ರತ್ಯಕ್ಷ, ಅನುಮಾನ ಎಂಬೆರಡು ಬಗೆಯ ಪ್ರಮಾಣ (ರುಜುವಾತು, ನಿದರ್ಶನ) ಗಳನ್ನೂ ಬಿಟ್ಟುಬಿಟ್ಟಹಾಗಾಯಿತು. ನಮ್ಮ ಅನುಭವಕ್ಕೆ ಸಿಕ್ಕುವ ಹುವ್ವು ಗಂಧ ಮೊದಲಾದವುಗಳಿಂದ ಇಷ್ಟಪ್ರಾಪ್ತಿಯೂ ಔಷಧ ಮೊದಲಾದವುಗಳಿಂದ ಅನಿಷ್ಟ ಪರಿಹಾರವೂ ಆಗುವುದು ಪ್ರತ್ಯಕ್ಷವಾಗಿಯೇ ಇದೆ. ಒಬ್ಬರಿನ್ನೊಬ್ಬರ ಅನುಭವವನ್ನು ಕೇಳಿ ಅದರಿಂದ ಊಹೆಮಾಡಿಕೊಳ್ಳುವುದು ಅನುಮಾನ. ಆದರೆ ಜ್ಯೋತಿಷ್ಟೋಮ ಮೊದಲಾದ ಯಾಗಗಳಿಂದ ಸ್ವರ್ಗಲಾಭವಾಗುವುದೆಂಬುದನ್ನೂ, ಕಳಂಜ ಮಾಂಸಾಹಾರವನ್ನು ಬಿಡುವುದರಿಂದ ಅನಿಷ್ಟವು ತಪ್ಪುವುದೆಂಬು

ದನ್ನೂ, ವೇದದ ವಿನಾ ಬೇರೆ ಯಾವ ಊಹಾ ವಿಧಾನದಿಂದಲೂ ಎಂಥಾ ತಾರ್ಕಿಕ ಶಿಖಾಮಣಿಯೂ ಸಾಧಿಸಲಾಗುವುದಿಲ್ಲ. ಆದುದರಿಂದ ಅಲೌಕಿಕೋಪಾಯವನ್ನು (ಎಂದರೆ ಈ ಲೋಕವನ್ನು ಮೀರಿರುವಂಥಾ ಉಪಾಯವನ್ನು) ಬೋಧಿಸುವುದೇ ವೇದ—ಎಂಬ ಲಕ್ಷಣ ನಿರ್ದೇಶವು ಒಪ್ಪತಕ್ಕುದಾಗಿದೆ. ಪೂರ್ವಿಕರಿಂದಲೂ ಹೀಗೆಯೇ ಹೇಳಲ್ಪಟ್ಟಿದೆ. ಹಾಗಾದರೆ ಸ್ತ್ರೀ ಶೂದ್ರರೂ ಸೇರಿ ಎಲ್ಲರೂ ಅದಕ್ಕೆ ಅಧಿಕಾರಿಗಳಾಗಬಹುದಲ್ಲವೆ? ಏಕೆಂದರೆ, "ನನ್ನ ಇಷ್ಟ ನೆರವೇರಲಿ, ಅನಿಷ್ಟವು ಆಗದಿರಲಿ" ಎಂಬ ಆಶೆಯು ಎಲ್ಲ ಜನರಿಗೂ ಸಾಮಾನ್ಯವಾಗಿರುವುದು—ಎಂದರೆ, ಈ ವಾದವು ಸಾಗತಕ್ಕುದಲ್ಲ. ಸ್ತ್ರೀ ಶೂದ್ರರಿಗೆ ಉಪಾಯ ಜ್ಞಾನದ ಅಪೇಕ್ಷೆಯಿದ್ದರೂ, ಬೇರೆ ಕಾರಣದಿಂದ ಅವರಿಗೆ ವೇದಾಧಿಕಾರವು ವರ್ಜಮಾಡಲ್ಪಟ್ಟಿದೆ. ಉಪನಯನವಾದವರಿಗೇ ವೇದಾಧ್ಯಯನ ಯೋಗ್ಯತೆಯೆಂದೂ ಉಪನಯನವಿಲ್ಲದವರಿಗೆ ವೇದಾಧ್ಯಯನವು ಅನಿಷ್ಟಕರವೆಂದೂ ಶಾಸ್ತ್ರದಲ್ಲಿ ಹೇಳಿದೆ. ಹಾಗಾದರೆ ಅವರಿಗೆ ಇಷ್ಟಸಾಧನೋಪಾಯವೋ—ಎಂದರೆ, ಅದು ಪುರಾಣಾದಿಗಳಿಂದ ಎಂದು ಹೇಳುತ್ತೇವೆ. ಹೀಗಿರುವುದರಿಂದಲೇ, "ಹೆಂಗಸರು, ಶೂದ್ರರು, ನಾಮಮಾತ್ರ ಬ್ರಾಹ್ಮಣರು—ಇವರಿಗೆ ವೇದವು ದೊರೆಯಲಾರದಲ್ಲಾ ಎಂಬ ಕನಿಕರದಿಂದ ವ್ಯಾಸಮಹರ್ಷಿಗಳು ಭಾರತವನ್ನು ರಚಿಸಿದರು" ಎಂಬುದಾಗಿ ಹೇಳಲ್ಪಟ್ಟಿದೆ. ಆದಕಾರಣದಿಂದ ಉಪನಯನ ಸಂಸ್ಕಾರವನ್ನು ಪಡೆದಿರುವ ತ್ರೈವರ್ಣಿಕರಿಗೆ ಮಾತ್ರವೇ ವೇದದ ಸಂಬಂಧವು.]

## ವೇದ ಪ್ರಾಮಾಣ್ಯ

**ಪೌರುಷೇಯವಾಕ್ಯಂ ತು ಬೋಧಕಮಪಿ ಸತ್ಪುರುಷಗತ ಭ್ರಾಂತಿಮೂಲತ್ವ ಸಂಭವಾತ್ತತ್ಪರಿಹಾರಾಯ ಮೂಲಪ್ರಮಾಣಮಪೇಕ್ಷತೇ । ನತು ವೇದಸ್ತಸ್ಯ ನಿತ್ಯತ್ವೇನ ವಕ್ತೃದೋಷ ಶಂಕಾನುದಯಾತ್ ।**

[ಒಬ್ಬ ಒಳ್ಳೆಯ ಮನುಷ್ಯನ ಮಾತಿನಲ್ಲಿ ಒಂದು ಉಪದೇಶವಿದ್ದಾಗ್ಯೂ ಅದರಲ್ಲಿ ಆತನ ಬುದ್ಧಿ ಭ್ರಮಣೆಯು ಅಂತನೇನಾದರೂ ಸೇರಿದ್ದರೂ ಇರಬಹುದೆಂಬ ಶಂಕೆಗೆ ಅವಕಾಶವುಂಟಾದ ಕಾರಣ ಅಂಥವನ ಮಾತಿಗೆ ಬೇರೊಂದು ದೃಷ್ಟಾಂತವು ಬೇಕಾಗುತ್ತದೆ. ವೇದಕ್ಕೆ ಹಾಗಿಲ್ಲ; ಅದು ನಿತ್ಯವಾದುದು (ಎಂದರೆ, ಸೃಷ್ಟಿ ಸಂಹಾರಗಳಿಲ್ಲದೆ ಎಂದೆಂದೂ ಒಂದೇ ಪ್ರಕಾರವಾಗಿರತಕ್ಕುದು). ಆದಕಾರಣ ಹೇಳಿದವನ ಪ್ರಮಾದವು ಅದರಲ್ಲಿ ಸೇರಿದ್ದೀತೆಂಬ ಸಂಶಯವೇ ಹುಟ್ಟಲಾರದು.]

## ವೇದ ನಿತ್ಯತ್ವ

**ಸೃಷ್ಟೇರೂರ್ಧ್ವಂ ಸಂಹಾರಾತ್ಪೂರ್ವಂ ವ್ಯವಹಾರ ಕಾಲಃ । ತಸ್ಮಿನ್ನುತ್ಪಾದ ವಿನಾಶಾದರ್ಶನಾತ್ । ಕಾಲಾಕಾಶಾದಯೋ ಯಥಾ ನಿತ್ಯಾ ಏವಂ ವೇದೋಪಿ ವ್ಯವಹಾರ ಕಾಲೇ ಕಾಲಿದಾಸಾದಿ ವಾಕ್ಯವತ್ ಪುರುಷ ವಿರಚಿತತ್ವಾಭಾವೇನ ನಿತ್ಯಃ । ಆದಿ ಸೃಷ್ಟೌತು ಕಾಲಾಕಾಶಾದಿವದೇವ ಬ್ರಹ್ಮಣಃ ಸಕಾಶಾದ್ವೇದೋತ್ಪತ್ತಿರಾಮ್ನಾಯತೇ । . . . . । ಬ್ರಹ್ಮಣೋ**

ನಿರ್ದೋಷತ್ವೇನ ವೇದಸ್ಯ ವಕ್ತೃದೋಷಾಸಂಭವಾತ್ ಸ್ವತಃಸಿದ್ಧಂ ಪ್ರಾಮಾಣ್ಯಂ ತದವಸ್ಥಮ್ |

[ಜಗತ್ಸೃಷ್ಟಿಯಿಂದೀಚೆಗೆ ಪ್ರಳಯಕ್ಕೆ ಮುಂಚಿತವಾಗಿರುವ ಕಾಲವನ್ನು ವ್ಯವಹಾರಕಾಲವೆನ್ನುತ್ತೇವೆ. ಈ ಕಾಲದಲ್ಲಿ ಆಕಾಶಾದಿ ಮಹಾಭೂತಗಳು ಹೇಗೆಯೋ ವೇದವೂ ಹಾಗೆಯೇ ಉತ್ಪತ್ತಿ ವಿನಾಶಗಳಿಲ್ಲದೆ ಇರತಕ್ಕುದು. ಕಾಳಿದಾಸಾದಿಗಳ ಕೃತಿಗಳಿಗೆ ಮಾನುಷ ಕರ್ತೃವೊಬ್ಬನಿರುವಂತೆ ವೇದಕ್ಕೆ ಇಲ್ಲ. ಆದುದರಿಂದ ವೇದವು ನಿತ್ಯ. ಜಗತ್ಸೃಷ್ಟಿಯ ಮೊದಲಲ್ಲಿ ಆಕಾಶಾದಿಗಳು ಬ್ರಹ್ಮನಿಂದ ಉತ್ಪನ್ನವಾದಂತೆಯೇ ವೇದಗಳೂ ಆದುವೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ. ಬ್ರಹ್ಮನು ದೋಷರಹಿತನಾದಕಾರಣ ವೇದದಲ್ಲಿ ವಕ್ತೃದೋಷಕ್ಕೆ ಅವಕಾಶವಿಲ್ಲದೆ ಅದು ಸ್ವತಃ ಪ್ರಮಾಣವಾಗಿರುವುದು.]

## ಅರ್ಥಜ್ಞಾನದ ಆವಶ್ಯಕತೆ

“ಸ್ವಾಧ್ಯಾಯೋಽಧ್ಯೇತವ್ಯಃ” ಇತ್ಯಧ್ಯಯನಂ ವಿಧೀಯತೇ | ಪಾಠಮಾತ್ರಸ್ಯಾಧ್ಯಯನ ಶಬ್ದವಾಚ್ಯತ್ವೇನಾರ್ಥಾವಬೋಧಸ್ಯಾವಿಹಿತತ್ವಾದ್ವೇದ ವ್ಯಾಖ್ಯಾನ ಮಪ್ರಸಕ್ತಮಿತಿ ಚೇತ್ | ನ | ವಿಧೇರ್ಬೋಧ ಪರ್ಯವಸಾಯಿತ್ವಾತ್ |

[“ಸ್ವಕೀಯ ವೇದಶಾಖೆಯನ್ನು ಓದತಕ್ಕುದು” ಎಂಬ ವೇದವಾಕ್ಯದಿಂದ ವೇದಾಧ್ಯಯನ ಕರ್ತವ್ಯವು ವಿಧಿಸಲ್ಪಟ್ಟಿದೆ; ಓದುವುದೆಂದರೆ ಅರ್ಥವನ್ನು ತಿಳಿದುಕೊಳ್ಳಬೇಕೆಂದಾಗುವುದಿಲ್ಲ, ಆದುದರಿಂದ ವ್ಯಾಖ್ಯಾನಮಾಡತಕ್ಕುದು ಅಪ್ರಸಕ್ತ—ಎಂದು ಯಾರಾದರೂ ಹೇಳಿದರೆ,—ಅದು ಹಾಗಲ್ಲವೆನ್ನುತ್ತೇವೆ. ಆ ವಿಧಿಗೆ ವೇದದ ಅರ್ಥವನ್ನು ತಿಳಿದುಕೊಳ್ಳಬೇಕೆಂಬುದೇ ಉದ್ದೇಶ.]

ಶ್ರೂಯತೇ ಹ್ಯನುಷ್ಠಾನ ಜ್ಞಾನಯೋಃ ಸ್ವತಂತ್ರಂ ಪೃಥಕ್ಫಲಮ್—“ಸರ್ವಂ ಪಾಪ್ಮಾನಂ ತರತಿ ತರತಿ ಬ್ರಹ್ಮಹತ್ಯಾಂ ಯೋಽಶ್ವಮೇಧೇನ ಯಜತೇ ಯ ಉ ಚೈನಮೇವಂ ವೇದ” ಇತಿ | ಅಲ್ಪಪ್ರಯಾಸ ಸಾಧ್ಯೇನ ವೇದನೇನ ತತ್ಸಿದ್ಧೌ ಬಹ್ವಾಯಾಸ ಸಾಧ್ಯಮನುಷ್ಠಾನಂ ವ್ಯರ್ಥಂ ಸ್ಯಾದಿತಿ ಚೇನ್ನ | ತರಣೀಯಾಯಾ ಬ್ರಹ್ಮಹತ್ಯಾಯಾ ಮಾನಸ ವಾಚಿಕತ್ವಾದಿ ಭೇದೇನ ತಾರತಮ್ಯೋಪಪತ್ತೇಃ | ಮನಸಾ ಸಂಕಲ್ಪಿತಾ ವಾಚಾಽಭ್ಯನುಜ್ಞಾತಾ ಪರಹಸ್ತೇನ ಕಾರಿತಾ ಸ್ವಯಂಕೃತಾ ಪುನಃಪುನಃ ಕೃತಾಚೇತ್ಯೇವಂ ತಾರತಮ್ಯೇನ ವ್ಯವಸ್ಥಿತಾ ಬ್ರಹ್ಮಹತ್ಯಾಽನೇಕವಿಧಾ | ಅತಸ್ತತ್ತರಣಮಪ್ಯನೇಕವಿಧಂ ಯಥಾ ಸ್ವರ್ಗೋ ಬಹುವಿಧಸ್ತದ್ವತ್ | . . . . | ಯತ್ತು ಕರ್ಮಾನುಷ್ಠಾನ ಕಾಲೀನಂ ವೇದನಂ ತತ್ಕರ್ಮಫಲ ಏವಾತಿಶಯಂ ಜನಯತಿ |

[ವೈದಿಕ ಕರ್ಮಾನುಷ್ಠಾನಕ್ಕೂ ಅದನ್ನು ಕುರಿತ ಜ್ಞಾನಕ್ಕೂ ಬೇರೆಬೇರೆ ಸ್ವತಂತ್ರ ಫಲಗಳು ಹೇಳಲ್ಪಟ್ಟಿವೆ. ಉದಾಹರಣೆಯಾಗಿ—“ಯಾರು ಅಶ್ವಮೇಧ ಯಾಗವನ್ನು ಮಾಡು

ತ್ತಾನೆಯೋ ಅವನು ಬ್ರಹ್ಮಹತ್ಯೆ ಮೊದಲಾದ ಎಲ್ಲ ಪಾಪಗಳನ್ನೂ ದಾಟುತ್ತಾನೆ; ಇದನ್ನು ಯಾರು ತಿಳಿದುಕೊಳ್ಳುತ್ತಾನೆಯೋ ಅವನೂ ಹಾಗೆಯೇ ಸರಿ ''—ಎಂದು ವೇದದಲ್ಲಿ ಹೇಳಿದೆ. ''ಸ್ವಲ್ಪ ಪ್ರಯಾಸ ಸಾಧ್ಯವಾದ ತಿಳಿವಳಿಕೆಯಿಂದಲೇ ಬೇಕಾದ ಫಲವು ಕೈಗೂಡುವ ಪಕ್ಷದಲ್ಲಿ ಬಹು ಪ್ರಯಾಸದಿಂದ ಆಗುವ ಕರ್ಮಾನುಷ್ಠಾನವು ವ್ಯರ್ಥತಾನೆ?''—ಎಂದು ಯಾರಾದರೂ ಕೇಳುವುದಾದರೆ, ಹಾಗಲ್ಲವೆನ್ನುತ್ತೇವೆ. ಯಾವ ಬ್ರಹ್ಮಹತ್ಯೆಯನ್ನು ದಾಟ ಬೇಕಾಗಿದೆಯೋ ಅದರಲ್ಲಿ, ಆ ಪಾಪವು ಮನಸ್ಸಿನಿಂದಾದುದೆ, ಮಾತಿನಿಂದಲೆ, ಎಂಬುದೇ ಮೊದಲಾದ ಕಾರಣಗಳಿಗನುಸಾರವಾಗಿ ತಾರತಮ್ಯ ಭೇದಗಳಿರುತ್ತವೆ. ತಾನು ಸಂಕಲ್ಪಿಸಿದುದು, ಬಾಯಿಂದ ಇತರರಿಗೆ ಹೇಳಿದುದು, ಇತರರ ಕೈಯಿಂದ ಮಾಡಿಸಿದುದು, ತಾನೇ ಮಾಡಿದುದು, ತಾನು ಪುನಃಪುನಃ ಮಾಡಿದುದು—ಹೀಗೆ ಬ್ರಹ್ಮಹತ್ಯಾ ದೋಷವು ಅನೇಕ ವಿಧವಾಗಿರುತ್ತದೆ. ಅದನ್ನು ಹೋಗಲಾಡಿಸಿಕೊಳ್ಳುವ ಉಪಾಯಗಳೂ ಹಾಗೆಯೇ ಅನೇಕ ವಿಧ. ಸ್ವರ್ಗವೂ ಅದರಂತೆಯೇ ಸರಿ. ಯಾವ ಕರ್ಮವನ್ನು ಅನುಷ್ಠಿಸುವ ಕಾಲದಲ್ಲಿ ಅರ್ಥಜ್ಞಾನವೂ ಜೊತೆಗೂಡಿರುವುದೋ ಅಂಥಾ ಕರ್ಮದಿಂದಲೇ ಅತಿಶಯವಾದ ಫಲಸಿದ್ಧಿ.]

## ವೇದ ವಿಭಾಗಗಳು

ವೇದ ಸ್ತಾವತ್ಕಾಂಡ ದ್ವಯಾತ್ಮಕಃ। ತತ್ರ ಪೂರ್ವತ್ರ ಕಾಂಡೇ ನಿತ್ಯ ನೈಮಿತ್ತಿಕ ಕಾಮ್ಯ ನಿಷಿದ್ಧರೂಪಂ ಚತುರ್ವಿಧಂ ಕರ್ಮ ಪ್ರತಿಪಾದ್ಯಮ್। ''ಯಾವಜ್ಜೀವಮಗ್ನಿಹೋತ್ರಂ ಜುಹೋತಿ'' ಇತ್ಯಾದಿಕಂ ನಿತ್ಯಂ ತಸ್ಯ ನಿಯತ ನಿಮಿತ್ತತ್ವಾತ್ । ''ಯಸ್ಯ ಗೃಹಾನ್ ದಹತ್ಯಗ್ನಯೇ ಕ್ಷಾಮವತೇ ಪುರೋಡಾಶ ಮಷ್ಟಾಕಪಾಲಂ ನಿರ್ವಪೇತ್'' ಇತ್ಯಾದಿ ನೈಮಿತ್ತಿಕಂ ತಸ್ಯಾನಿಯತ ನಿಮಿತ್ತತ್ವಾತ್ । ''ಚಿತ್ರಯಾ ಯಜೇತ ಪಶುಕಾಮಃ'' ಇತ್ಯಾದಿ ಕಾಮ್ಯಮ್। ''ತಸ್ಮಾನ್ಮಲವದ್ವಾಸಸಾ ನ ಸಂವದೇತ ನ ಸಹಾಽಽಸೀತ'' ಇತ್ಯಾದಿ ನಿಷಿದ್ಧಮ್।

[ವೇದವು ಎರಡು ಕಾಂಡ(ಭಾಗ)ಗಳನ್ನೊಳಗೊಂಡಿದೆ. ಅದರಲ್ಲಿ ಪೂರ್ವಕಾಂಡದೊಳಗೆ—(೧) ನಿತ್ಯ, (೨) ನೈಮಿತ್ತಿಕ, (೩) ಕಾಮ್ಯ, (೪) ನಿಷಿದ್ಧ—ಎಂಬ ನಾಲ್ಕು ಬಗೆಯ ಕರ್ಮಗಳು ಪ್ರತಿಪಾದಿತಗಳಾಗಿವೆ. '' ಬದುಕಿರುವಷ್ಟು ದಿನವೂ ಅಗ್ನಿಹೋತ್ರದಲ್ಲಿ ಹೋಮ ಮಾಡತಕ್ಕದು '' ಎಂಬುದು ನಿತ್ಯ; ಇದು ಕ್ಲೃಪ್ತವಾಗಿ ಗೊತ್ತಾದದ್ದು. '' ಗೃಹದಾಹ ಸಂದರ್ಭದಲ್ಲಿ ಆಗ್ನೇಯ ಯಾಗವನ್ನು ಮಾಡತಕ್ಕದು ''—ಎಂಬುದು ನೈಮಿತ್ತಿಕ; ಇದು ಕ್ಲೃಪ್ತವಾದುದಲ್ಲ. '' ಪಶುಧನವನ್ನು ಬಯಸುವವನು ಚಿತ್ರವೆಂಬ ಯಜ್ಞವನ್ನು ಮಾಡತಕ್ಕದು ''—ಎಂಬುದು ಕಾಮ್ಯ. ''ಮೈಲಿಗೆ ಬಟ್ಟೆಯವರೊಡನೆ ಸಂಭಾಷಣೆ ಸಹವಾಸಗಳು ಕೂಡದು ''—ಎಂಬುದು ನಿಷಿದ್ಧ.]

## ಕರ್ಮಕ್ಕೂ ಮೋಕ್ಷಕ್ಕೂ ಸಂಬಂಧ

ನ ಕೇವಲಂ ನಿತ್ಯ ನೈಮಿತ್ತಿಕಾಭ್ಯಾ ಮಾನುಷಂಗಿಕ ಸ್ವರ್ಗಪ್ರಾಪ್ತಿಃ । ಕಿಂ ತು ಧೀಶುದ್ಧ್ಯಾ ವಿವಿದಿಷೋತ್ಪಾದನದ್ವಾರಾ ಬ್ರಹ್ಮಜ್ಞಾನ ಹೇತುತ್ವಮಪಿ ತಯೋರಸ್ತಿ। ತಥಾ ಚ ವಾಜಸನೇಯಿನಃ ಸಮಾಮನಂತಿ—"ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ"—ಇತಿ। ಏವಂ ತರ್ಹಿ ಪೂರ್ವ ಕಾಂಡ ಏವಾಶೇಷ ಪುರುಷಾರ್ಥಸಿದ್ಧೇಃ ಕೃತಮುತ್ತರಕಾಂಡೇನೇತಿ ಚೇನ್ನ। ಅಪುನ ರಾವೃತ್ತಿ ಲಕ್ಷಣಸ್ಯಾಽಽತ್ಯಂತಿಕ ಪುರುಷಾರ್ಥಸ್ಯ ತತ್ರಾ ಸಿದ್ಧೇಃ। ಅತ ಏವಾಥರ್ವಣಿಕಾಃ ಕರ್ಮಿಣೋ ದಕ್ಷಿಣಮಾರ್ಗೇಣ ಚಂದ್ರಪ್ರಾಪ್ತಿಂ ಪುನರಾವೃತ್ತಿಂ ಚಾಽಽಮನಂತಿ—"ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ"—ಇತಿ। ಅತ ಉತ್ತರಕಾಂಡ ಸ್ತದರ್ಥಕೋ ದ್ರಷ್ಟವ್ಯಃ। ಆತ್ಯಂತಿಕ ಪುರುಷಾರ್ಥಶ್ಚ ದ್ವಿವಿಧಃ ಸದ್ಯೋಮುಕ್ತಿಃ ಕ್ರಮ ಮುಕ್ತಿಶ್ಚೇತಿ । ವರ್ತಮಾನ ದೇಹಪಾತನಾನಂತರಮೇವ ಸಿಧ್ಯತಿ ಸದ್ಯೋಮುಕ್ತಿಃ। ಉತ್ತರ ಮಾರ್ಗೇಣ ಗತ್ವಾ ಬ್ರಹ್ಮಲೋಕೇ ಚಿರಂ ಭೋಗಾನನುಭೂಯ ತತ್ರೋತ್ಪನ್ನ ಜ್ಞಾನಸ್ಯ ಬ್ರಹ್ಮಲೋಕಾವಸಾನೇ ಸಿಧ್ಯತಿ ಕ್ರಮಮುಕ್ತಿಃ । ತಸ್ಮಾದುತ್ತರಕಾಂಡೇ ಬ್ರಹ್ಮೋಪದೇಶೋ ಬ್ರಹ್ಮೋಪಾಸ್ತಿಶ್ಚೇತ್ಯುಭಯಂ ಪ್ರತಿಪಾದ್ಯತೇ। ಬ್ರಹ್ಮೋಪಾಸ್ತಿ ಪ್ರಸಂಗೇನ ಬ್ರಹ್ಮದೃಷ್ಟ್ಯಾ ಪ್ರತೀಕಮುಪಾಸ್ಯತ್ವೇನ ಸಾಂಸಾರಿಕಫಲ ಕಾಮಿನಮುದ್ದಿಶ್ಯ ಪ್ರತಿಪಾದ್ಯತೇ। ಬ್ರಹ್ಮೋಪಾಸಕ ಪ್ರತೀಕೋಪಾಸಕಯೋಃ ಸಮಾನೇಪ್ಯುತ್ತರಮಾರ್ಗೇ ಪ್ರತೀಕೋಪಾಸಕಸ್ಯ ವಿದ್ಯುಲ್ಲೋಕಾದೂರ್ಧ್ವಂ ಬ್ರಹ್ಮಲೋಕಗಮನಾಭಾವೇನ ಕ್ರಮ ಮುಕ್ತೇರಪ್ಯಸಿದ್ಧತ್ವಾದಸ್ತಿ ಪುನರಾವೃತ್ತಿಃ। ನನ್ವಸ್ತ್ವೇವಂ ಪೂರ್ವೋತ್ತರಕಾಂಡಯೋ ರ್ವಿಷಯ ವಿಶೇಷಃ ಪ್ರಯೋಜನ ವಿಶೇಷಶ್ಚ।

[ನಿತ್ಯ ನೈಮಿತ್ತಿಕ ಕರ್ಮಗಳ ಅನುಷ್ಠಾನದಿಂದ ಸ್ವರ್ಗಪ್ರಾಪ್ತಿಯಾಗುವುದು ಮಾತ್ರವೇ ಅಲ್ಲದೆ ಆ ಮೂಲಕ ಚಿತ್ತಶುದ್ಧಿಯೂ ಆಗಿ ಬ್ರಹ್ಮಜ್ಞಾನಾಸಕ್ತಿಗೆ ಅವಕಾಶವಾಗುವುದು. ವಾಜಸನೇಯವೆಂಬ ವೇದಶಾಖೆಯವರು ಹೀಗೆ ಹೇಳಿದ್ದಾರೆ.—"ವೇದ ಪಠನೆಯಿಂದಲೂ ಯಜ್ಞದಿಂದಲೂ ದಾನತಪಸ್ಸುಗಳಿಂದಲೂ ಬ್ರಹ್ಮವನ್ನು ಕುರಿತು ವಿಚಾರಮಾಡಲರ್ಹರಾಗು ತ್ತಾರೆ." ಆದರೆ ಹೀಗೆ ವೇದದ ಪೂರ್ವಕಾಂಡದಿಂದಲೇ ಲೋಕದಲ್ಲಿ ಎಲ್ಲ ಪುರುಷಾರ್ಥಗಳೂ ಸಿದ್ಧಿಸಿದರೆ ಉತ್ತರಕಾಂಡವೇತಕ್ಕೆ ?—ಎಂದು ಕೇಳಬಹುದು. ಅದು ಹಾಗಲ್ಲವೆನ್ನುತ್ತೇವೆ. ಪುನರ್ಜನ್ಮರಹಿತವಾದ ಪರಮಪುರುಷಾರ್ಥವೆಂಬ ಮೋಕ್ಷವು ಪೂರ್ವ (ಕರ್ಮ) ಕಾಂಡದಿಂದ ಸಿದ್ಧಿಸಲಾರದು. ಆದುದರಿಂದಲೇ ಅಥರ್ವಣ ಶಾಖೆಯವರು—"ಪುಣ್ಯಕರ್ಮಗಳನ್ನಾಚರಿಸಿ ದವರು ಚಂದ್ರಲೋಕದಲ್ಲಿ ಸುಖಗಳನ್ನನುಭವಿಸಿ ಮರಳಿ ಭೂಲೋಕದಲ್ಲಿ ಹುಟ್ಟುವರು" ಎಂದು ಹೇಳಿದ್ದಾರೆ. ಆದಕಾರಣ ಮೋಕ್ಷಕ್ಕೆ ಉತ್ತರ (ಜ್ಞಾನ) ಕಾಂಡವು ಅವಶ್ಯವೆಂಬುದು

ಸ್ಪಷ್ಟವಾಗಿದೆ. ಆ ಪರಮಪುರುಷಾರ್ಥವು ಸದ್ಯೋಮುಕ್ತಿಯೆಂದೂ ಕ್ರಮಮುಕ್ತಿಯೆಂದೂ ಎರಡು ವಿಧ. ಈಗಿರುವ ದೇಹವು ಬಿದ್ದೊಡನೆಯೆ ಮೋಕ್ಷವಾದರೆ ಅದು ಸದ್ಯೋಮುಕ್ತಿ. ಹಾಗಲ್ಲದೆ ಬ್ರಹ್ಮಲೋಕಾದಿ ದಿವ್ಯಲೋಕಗಳನ್ನು ಸೇರಿ, ಅಲ್ಲಿಯ ವೈಭವಗಳನ್ನನುಭವಿಸಿ, ಆ ಮೂಲಕ ಉತ್ತಮ ಜ್ಞಾನವನ್ನು ಪಡೆದ ಬಳಿಕ, ಆ ಲೋಕವನ್ನು ಬಿಟ್ಟಮೇಲೆ ಆಗುವ ಮೋಕ್ಷವು ಕ್ರಮಮುಕ್ತಿ. ಹೀಗಿರುವುದರಿಂದಲೇ ಜ್ಞಾನಕಾಂಡದಲ್ಲಿ ಬ್ರಹ್ಮಸ್ವರೂಪ ವಿಚಾರವೂ ಬ್ರಹ್ಮೋಪಾಸನೆಯ ಕ್ರಮವೂ ಎರಡೂ ಹೇಳಲ್ಪಟ್ಟಿದೆ. ಐಹಿಕ ಫಲಕ್ಕಾಗಿ ಕರ್ಮಮಾಡು ವವನು ಅದನ್ನು ಬ್ರಹ್ಮೋಪಾಸನೆಯೆಂಬ ಬುದ್ಧಿಯಿಂದಲೇ ಮಾಡಬಹುದೆಂದು ಅಲ್ಲಿ ಉಪ ದಿಷ್ಟವಾಗಿದೆ. ಆದರೆ ಯಾರು ಈ ಬ್ರಹ್ಮೋಪಾಸನೆಯ ಭಾವನೆಯನ್ನಿಟ್ಟುಕೊಳ್ಳಲಾರರೋ ಅವರ ಮೇಲ್ಮೆಯು ವಿದ್ಯುಲ್ಲೋಕದಲ್ಲಿ ನಿಂತುಹೋಗಿ, ಅವರಿಗೆ ಬ್ರಹ್ಮಲೋಕವು ದೊರೆ ಯದೆ, ಕ್ರಮಮುಕ್ತಿಯು ಇಲ್ಲದೆಹೋಗುವಕಾರಣ ಅವರಿಗೆ ಪುನರ್ಜನ್ಮವುಂಟು. ಇದನ್ನು ವ್ಯಾಸ (ಬ್ರಹ್ಮ)ಸೂತ್ರದಲ್ಲಿ (೪-೩-೧೪) ಕಾಣಬಹುದು. ಹೀಗೆ ವೇದದ ಪೂರ್ವಕಾಂಡ ಉತ್ತರಕಾಂಡಗಳಿಗೆ ಬೇರೆ ಬೇರೆ ವಿಷಯವೂ ಬೇರೆ ಬೇರೆ ಪ್ರಯೋಜನವೂ ಉಂಟು.]

## ಯಜುರ್ವೇದ ಋಗ್ವೇದಗಳ ಸಂಬಂಧ

ಆನುಪೂರ್ವ್ಯಾತ್ಕರ್ಮಣಾಂ ಸ್ವರೂಪಂ ಯಜುರ್ವೇದೇ ಸಮಾಮ್ನಾತಮ್। ತತ್ರ ತತ್ರ ವಿಶೇಷಾಪೇಕ್ಷಾಯಾಮಪೇಕ್ಷಿತಾ ಯಾಜ್ಯಾನುವಾಕ್ಯಾದಯ ಋಗ್ವೇದೇ ಸಮಾಮ್ನಾಯಂತೇ। ಸ್ತೋತ್ರಾದೀನಿ ತು ಸಾಮವೇದೇ। ತಥಾ ಸತಿ ಭಿತ್ತಿಸ್ಥಾನೀಯೋ ಯಜುರ್ವೇದ ಶ್ಚಿತ್ರಸ್ಥಾನೀಯಾ ವಿತರೌ। ತಸ್ಮಾತ್ಕರ್ಮಸು ಯಜುರ್ವೇದಸ್ಯೈವ ಪ್ರಾಧಾನ್ಯಮ್। ತಸ್ಮಿಂಶ್ಚ ದರ್ಶಪೂರ್ಣಮಾಸೇಷ್ಟಿ ರಾದೌ ಸಮಾಮ್ನಾತಾ। ಯದ್ಯಪಿ ಮನ್ತ್ರ ಬ್ರಾಹ್ಮಣಾತ್ಮಕೋ ವೇದಸ್ತಥಾಽಪಿ ಬ್ರಾಹ್ಮಣಸ್ಯ ಮನ್ತ್ರವ್ಯಾಖ್ಯಾನ ರೂಪತ್ವಾ ನ್ಮನ್ತ್ರಾ ಏವಾಽಽದೌ ಸಮಾಮ್ನಾತಾಃ। ತೇ ಚ ತ್ರಿವಿಧಾ ಋಚಃ ಸಾಮಾನಿ ಯಜೂಂಷಿ ಚೇತಿ। ತತ್ರ ಯಜುಷಾಮಧ್ವರ್ಯುರ್ವೇದೇ ಬಹುಲತ್ವಾ ತ್ಕ್ವಚಿದೃಚಾಂ ಸದ್ಭಾವೇಽಪಿ ಯಜುರ್ವೇದ ಇತ್ಯೇವಾಽಽಖ್ಯಾಯತೇ। ಅಧ್ವರ್ಯುರ್ವೇದತ್ವಂ ಚಾಸ್ಯಾನಾದಿಸಿದ್ಧ ಯಾಜ್ಞಿಕ ಸಮಾಖ್ಯಯಾಽವಗಂತವ್ಯಮ್।

[ಕರ್ಮಗಳ ಸ್ವರೂಪವು ಯಜುರ್ವೇದದಲ್ಲಿ ಕ್ರಮವಾಗಿ ತಿಳಿಸಲ್ಪಟ್ಟಿದೆ. ಆ ಕರ್ಮ ಗಳಲ್ಲಿ ಅಲ್ಲಲ್ಲಿ ವಿಶೇಷವಾಗಿ ಉಪಯೋಗಕ್ಕೆ ಬರುವ ಅನುವಾಕಗಳು ಋಗ್ವೇದದಲ್ಲಿಯೂ, ಸ್ತೋತ್ರಗಳು ಸಾಮವೇದದಲ್ಲಿಯೂ ಇವೆ. ಹೀಗಿರುವುದರಿಂದ ಯಜುರ್ವೇದವು ಗೋಡೆ ಯಂತೆ ಆಧಾರವಾಗಿರತಕ್ಕದು; ಇತರ ವೇದಗಳು ಅದರ ಮೇಲಣ ಚಿತ್ರಗಳಂತೆ ಆಧೇಯ ವಾಗಿರತಕ್ಕವು. ಆದಕಾರಣ ಕರ್ಮ ವಿಚಾರದಲ್ಲಿ ಯಜುರ್ವೇದಕ್ಕೇ ಪ್ರಾಧಾನ್ಯ. ಇದರಲ್ಲಿ ದರ್ಶಪೂರ್ಣಮಾಸವೆಂಬ ಯಜ್ಞದ ವಿಚಾರವು ಮೊದಲು ತಿಳಿಸಲ್ಪಡುತ್ತದೆ. ಹೀಗಿರು ವುದೇ ಅಲ್ಲದೆ ವೇದದಲ್ಲಿ ಮಂತ್ರ ಮತ್ತು ಬ್ರಾಹ್ಮಣ ಎಂಬ ಎರಡು ವಿಭಾಗಗಳುಂಟು.

ಬ್ರಾಹ್ಮಣವೆಂಬುದು ಮಂತ್ರಗಳಿಗೆ ವ್ಯಾಖ್ಯಾನಪ್ರಾಯವಾಗಿದೆ. ಆದಕಾರಣ ಮಂತ್ರವೇ ಮೊದಲು ಹೇಳಲ್ಪಡುತ್ತದೆ. ಮಂತ್ರಗಳು ಋಕ್ಕು, ಸಾಮ, ಯಜುಸ್ಸು ಎಂದು ಮೂರು ತೆರನಾಗಿವೆ. ಇವುಗಳೊಳಗೆ ಋಕ್ಕುಗಳ ಉಪಯೋಗವು ಯಜ್ಞಗಳಲ್ಲಿ ಸ್ವಲ್ಪವಿದ್ದಾಗ್ಯೂ ಯಜುಸ್ಸೇ ಅಲ್ಲಿ ಬಹಳವಾಗಿರುವ ಕಾರಣದಿಂದ ಈ ಯಜ್ಞಪ್ರಯುಕ್ತವಾದ ಮಂತ್ರಗಳಿಗೆ ಯಜುರ್ವೇದವೆಂದು ಹೆಸರಾಗಿದೆ. ಇದಕ್ಕೆ ಅಧ್ವರ್ಯುವೇದವೆಂಬ ಪ್ರಸಿದ್ಧಿಯೂ ಅನಾದಿಯಾದ ಯಾಜ್ಞಿಕ ಸಂಪ್ರದಾಯದಿಂದ ಬಂದಿದೆ.]

ಈ ಮೇಲಣ ವಾಕ್ಯಗಳು ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತಾ ಭಾಗದ ಮೇಲಿನ ಭಾಷ್ಯದ* ಉಪೋದ್ಘಾತದಿಂದ ಉದ್ಧೃತಗಳಾದುವು. ಸಮಗ್ರ ವೇದಭಾಷ್ಯಕ್ಕೆ ಇದೇ ಆರಂಭವೆಂಬುದು ಮೇಲಿನ ಜಿಜ್ಞಾಸೆಯಿಂದಲೇ ಸ್ಪಷ್ಟವಾಗಿದೆ. ಋಗ್ವೇದದ ಒಂದು ಭಾಗವಾದ "ಐತರೇಯ ಬ್ರಾಹ್ಮಣ"ದ ಮೇಲಿನ ಭಾಷ್ಯದ ಪೀಠಿಕೆಯಲ್ಲಿಯೂ ಮೇಲಣ ವಾಕ್ಯಗಳೇ ಬಹುಮಟ್ಟಿಗೆ ಅಕ್ಷರಶಃ ಕಾಣಬರುತ್ತವೆ. ಬಹುಶಃ ಐತರೇಯ ಬ್ರಾಹ್ಮಣ ಐತರೇಯಾರಣ್ಯಕಗಳ ಮೇಲಣ ಭಾಷ್ಯವು ತೈತ್ತಿರೀಯ ಭಾಷ್ಯದ ಅನಂತರದ್ದು. ಅದರ ತರುವಾಯ ಆದುದು ಋಕ್ಸಂಹಿತಾಭಾಷ್ಯ. ಈ ಋಕ್ಸಂಹಿತಾಭಾಷ್ಯದ ಭೂಮಿಕೆಯು ಯಜುಸ್ಸಂಹಿತೆಯದಕ್ಕಿಂತ ಬಹು ವಿಸ್ತಾರವಾದುದು. ಅದರಿಂದ ಕೆಲವು ವಾಕ್ಯಗಳನ್ನಿಲ್ಲಿ ಕೊಡಬಹುದು† :—

## ಋಗ್ಯಜುಸ್ಸುಗಳ ಸಂಬಂಧ

ಆಧ್ವರ್ಯವಸ್ಯ ಯಜ್ಞೇಷು ಪ್ರಾಧಾನ್ಯಾದ್ವ್ಯಾಕೃತಃ ಪುರಾ |
ಯಜುರ್ವೇದೋಽಥ ಹೌತ್ರಾರ್ಥಮೃಗ್ವೇದೋ ವ್ಯಾಕರಿಷ್ಯತೇ ||
ಏತಸ್ಮಿನ್ ಪ್ರಥಮೋಽಧ್ಯಾಯಃ ಶ್ರೋತವ್ಯಃ ಸಂಪ್ರದಾಯತಃ |
ವ್ಯುತ್ಪನ್ನಸ್ತಾವತಾ ಸರ್ವಂ ಬೋದ್ಧುಂ ಶಕ್ನೋತಿ ಬುದ್ಧಿಮಾನ್ ||

ಅತ್ರ ಕೇಚಿದಾಹುಃ | ಋಗ್ವೇದಸ್ಯ ಪ್ರಾಥಮ್ಯೇನ ಸರ್ವತ್ರಾಮ್ನಾತತ್ವಾದಭ್ಯರ್ಹಿತಂ ಪೂರ್ವಮಿತಿ ನ್ಯಾಯೇನಾಭ್ಯರ್ಹಿತತ್ವಾತ್ತದ್ವ್ಯಾಖ್ಯಾನಮಾದೌ ಯುಕ್ತಮ್ |

---

* ಪೂನಾ ಪಟ್ಟಣದ 'ಆನಂದಾಶ್ರಮ ಗ್ರಂಥಾವಲಿ'ಯಲ್ಲಿ ೪೨ನೆಯ ಸಂಪುಟ (ಕ್ರಿ. ಶ. ೧೯೦೦).

† ನಾವು ತೆಗೆದುಕೊಂಡಿರುವ ಪಾಠಗಳು—೧. ಮ್ಯಾಕ್ಸ್‌ಮುಲ್ಲರ್ ಪಂಡಿತರ ಪ್ರತಿ (ಕ್ರಿ. ಶ. ೧೮೯೦—ಆಕ್ಸ್‌ಫರ್ಡ್), ೨. ಪೀಟರ್‌ಸನ್ ಪಂಡಿತರ ಪ್ರತಿ (ಕ್ರಿ. ಶ. ೧೮೯೦, ಬೊಂಬಾಯಿ)—ಇವುಗಳವು.

ಪ್ರಾಥಮ್ಯಂ ಚ ಪುರುಷಸೂಕ್ತೇ ವಿಸ್ಪಷ್ಟಮ್ । "ಋಚಸ್ಸಾಮಾನಿ ಜಜ್ಞಿರೇ".. ಇತಿ। ನ ಕೇವಲ ಮೃಚಾಂ ಪಾರಪ್ರಾಥಮ್ಯೇನಾ ಭ್ಯರ್ಹಿತತ್ವಂ ಕಿಂ ತು ಯಜ್ಞಾಂಗ ದಾರ್ಢ್ಯ ಹೇತುತ್ವಾದಪಿ।.........। ಛಂದೋಗಾಸ್ತು ಪ್ರಾಥಮ್ಯೇನ ಸನತ್ಕುಮಾರಂ ಪ್ರತಿ ನಾರದವಾಕ್ಯಮೇವಾಮನಂತಿ । "ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮ ವೇದಮಾಥರ್ವಣಂಚ"—ಇತಿ । ಮುಂಡಕೋಪನಿಷದ್ಯಪ್ಯೇವಮಾಮ್ನಾಯತೇ '.... ..... .। ಅಸ್ತ್ವೇವಂ ಸರ್ವ ವೇದಾಧ್ಯಯನ ತತ್ಪಾರಾಯಣ ಬ್ರಹ್ಮಯಜ್ಞ ಜಪಾದಾ ವೃಗ್ವೇದಸ್ಯೈವ ಪ್ರಾಥಮ್ಯಂ । ಅರ್ಥಜ್ಞಾನಸ್ಯ ತು ಯಜ್ಞಾನುಷ್ಠಾನಾರ್ಥತ್ವಾತ್ತತ್ರ ತು ಯಜುರ್ವೇದಸ್ಯೈವ ಪ್ರಧಾನತ್ವಾ ತ್ತದ್ವ್ಯಾಖ್ಯಾನಮೇವಾದೌ ಯುಕ್ತಮ್। ತತ್ಪ್ರಾಧಾನ್ಯಂ ಚ ಕಾಚಿದೃಗೇವಾಹ ।............ । ಏತದೇವಾಭಿಪ್ರೇತ್ಯಾಧ್ವರ್ಯು ವೇದಸ್ಯ ಯಾಗನಿಷ್ಪಾದಕ ದ್ಯೋತಕಂ ನಿರ್ವಚನಂ ಯಾಸ್ಕೋ ದರ್ಶಯತಿ । ಮಂತ್ರಾ ಮನನಾತ್। ಛಂದಾಂಸಿ ಛಾದನಾತ್। ಸ್ತೋಮಃ ಸ್ತವನಾತ್। ಯಜುರ್ಯಜತೇರಿತಿ। ಏವಂ ಸತ್ಯ ಧ್ವರ್ಯು ಸಂಬಂಧಿನಿ ಯಜುರ್ವೇದೇ ನಿಷ್ಪನ್ನಂ ಯಜ್ಞಶರೀರಮುಪಜೀವ್ಯ ತದಪೇಕ್ಷಿತೌ ಸ್ತೋತ್ರ ಶಸ್ತ್ರರೂಪಾವಯವಾವಿತರೇಣ ವೇದದ್ವಯೇನ ಪೂರ್ಯೇತೇ ಇತ್ಯುಪಜೀವ್ಯಸ್ಯ ಯಜುರ್ವೇದಸ್ಯ ಪ್ರಥಮತೋ ವ್ಯಾಖ್ಯಾನಂ ಯುಕ್ತಮ್। ತತ ಊರ್ಧ್ವಂ ಸಾಮ್ನಾ ಮೃಗಾಶ್ರಿತತ್ವಾದುಭಯೋರ್ಮಧ್ಯೇ ಪ್ರಥಮತ ಋಗ್ವ್ಯಾಖ್ಯಾನಂ ಯುಕ್ತಮಿತ್ಯೃಗ್ವೇದ ಇದಾನೀಂ ವ್ಯಾಖ್ಯಾಯತೇ ॥

ಮಂತ್ರ ಬ್ರಾಹ್ಮಣಾತ್ಮಕೇ ವೇದೇ ಬ್ರಾಹ್ಮಣಸ್ಯ ಮಂತ್ರ ವ್ಯಾಖ್ಯಾನೋಪಯೋಗಿತ್ವಾದಾದೌ ಬ್ರಾಹ್ಮಣಮಾರಣ್ಯಕಾಂಡ ಸಹಿತಂ ವ್ಯಾಖ್ಯಾತಂ। ಅಥ ತತ್ರ ಬ್ರಾಹ್ಮಣೋದಾಹರಣೇನ ಮಂತ್ರಾತ್ಮಕಃ ಸಂಹಿತಾ ಗ್ರಂಥೋ ವ್ಯಾಖ್ಯಾತವ್ಯಃ ॥

ಸ ಚಾಗ್ನಿಮೀಳ ಇತ್ಯಾರಭ್ಯ ಯಥಾವಃ ಸುಸಹಾಸತೀತ್ಯಂತೋಽಷ್ಟಕಾಂಡ್ಯೈ ರ್ದಶಮಂಡಲ್ಯೈ ಶ್ಚತುಷ್ಷಷ್ಟ್ಯಧ್ಯಾಯ್ಯೈ ರೀಷದಧಿಕ ಸಹಸ್ರಸೂಕ್ತ್ಯೈ ರೀಷದಧಿಕ ದ್ವಿಸಹಸ್ರವರ್ಗ್ಯೈ ರೀಷದಧಿಕಾಭಿರ್ದಶ ಸಹಸ್ರ ಸಂಖ್ಯಾಭಿರ್ಋಗ್ಭಿಶ್ಚೋಪೇತಃ। ತಸ್ಯ ಚ ಗ್ರಂಥಸ್ಯ ಕೃತ್ಸ್ನಸ್ಯಾಪ್ಯಾಮ್ನಾತಕ್ರಮೇಣೈವ ಸಾಮಾನ್ಯ ವಿನಿಯೋಗೋ ಬ್ರಹ್ಮಯಜ್ಞ ಜಪಾದೌ ಪೂರ್ವಮೇವಾಭಿಹಿತಃ। ವಿಶೇಷ ವಿನಿಯೋಗಸ್ತು ತತ್ತತ್ಕ್ರತೌ ಸೂತ್ರಕಾರೇಣ ಪ್ರದರ್ಶಿತಃ ॥

[ಯಜ್ಞಗಳಲ್ಲಿ ಅಧ್ವರ್ಯುವೆಂಬ ಪುರೋಹಿತರೇ ಮುಖ್ಯತಮರಾದುದರಿಂದ ಅವರಿಗೆ ಸಂಬಂಧಪಟ್ಟುದಾದ ಯಜುರ್ವೇದಕ್ಕೆ ಮೊದಲೇ ವ್ಯಾಖ್ಯಾನಮಾಡಿದೆ. ಈಗ ಹೋತೃವೆಂಬ ಉಪಪುರೋಹಿತರಿಗೆ ಅವಶ್ಯವಾಗಿರುವ ಋಗ್ವೇದಕ್ಕೆ ವ್ಯಾಖ್ಯಾನಮಾಡಲಾಗುತ್ತಿದೆ. ಇದರಲ್ಲಿ

ಮೊದಲನೆಯ ಅಧ್ಯಾಯವನ್ನು ಸಂಪ್ರದಾಯ ಪ್ರಕಾರ ಕೇಳತಕ್ಕದು. ಅದರಲ್ಲಿ ಜ್ಞಾನ ಸಂಪಾದಿಸಿದ ಬುದ್ಧಿಶಾಲಿಯು ಎಲ್ಲವನ್ನೂ ತಿಳಿದುಕೊಳ್ಳಲು ಶಕ್ತನಾಗುತ್ತಾನೆ. ಇಲ್ಲಿ ಕೆಲವರು ಹೀಗೆ ಹೇಳುತ್ತಾರೆ:—ಎಲ್ಲೆಲ್ಲಿಯೂ ಋಗ್ವೇದವನ್ನೇ ಮೊದಲು ಹೇಳಿದೆ. ಮೊದಲು ಹೇಳಿಸಿಕೊಳ್ಳುವುದು ಹೆಚ್ಚು ಪ್ರಾಶಸ್ತ್ಯದ ಸೂಚನೆ. ಪುರುಷಸೂಕ್ತದಲ್ಲಿ "ಋಚಸ್ಸಾಮಾನಿ ಜಜ್ಞಿರೇ" ಎಂದು ಋಗ್ವೇದವನ್ನು ಮೊದಲು ಹೇಳಿದೆ. ಅಷ್ಟೇ ಅಲ್ಲದೆ ಯಜ್ಞವು ದೃಢಪಡುವುದಕ್ಕೂ ಋಗ್ವೇದವು ಬೇಕು. ಆದಕಾರಣ ಮೊದಲು ಋಗ್ವೇದಕ್ಕೆ ವ್ಯಾಖ್ಯಾನ ಮಾಡುವುದೇ ಯುಕ್ತವು.—ಈ ವಾದಕ್ಕೆ ನಮ್ಮ ಉತ್ತರವೇನೆಂದರೆ, ಪಾರಾಯಣ ಜಪ ಮೊದಲಾದ ಸಂದರ್ಭಗಳಲ್ಲಿ ಋಗ್ವೇದಕ್ಕೇ ಪ್ರಥಮ ಸ್ಥಾನವು ಸಲ್ಲತಕ್ಕದು ಸರಿಯೇ. ಆದರೆ ಆದರ ಅರ್ಥಜ್ಞಾನದ ವಿನಿಯೋಗವಿರುವುದು ಯಜ್ಞದಲ್ಲಿ, ಇದು ಋಗ್ವೇದದಲ್ಲಿಯೇ ಹೇಳಿದೆ. ಇದೇ ಅಭಿಪ್ರಾಯದಿಂದಲೇ ಯಾಸ್ಕಾಚಾರ್ಯರು ಮನನದಿಂದ ಮಂತ್ರ, ಯಜನದಿಂದ ಯಜುಸ್ಸು ಎಂಬ ರೀತಿಯಲ್ಲಿ ಶಬ್ದನಿಷ್ಪತ್ತಿ ಮಾಡಿದ್ದಾರೆ. ಯಜ್ಞಕಾರ್ಯಕ್ಕೆ ಯಜುರ್ವೇದವು ಶರೀರದಂತೆಯೂ, ಋಕ್ಸಾಮಗಳು ಆ ಶರೀರವನ್ನು ನಂಬಿಕೊಂಡು ಅದಕ್ಕೆ ಬೇಕಾಗಿರುವ ಉಪಕರಣಗಳಂತೆಯೂ ಇರುವಕಾರಣ, ಯಜುಸ್ಸಿಗೆ ಮೊದಲು ವ್ಯಾಖ್ಯಾನ ಮಾಡಿರುವುದೇ ಯುಕ್ತವು. ಆಮೇಲೆ ಮಿಕ್ಕಿರುವ ಋಕ್ಸಾಮವೇದಗಳಲ್ಲಿ ಸಾಮವು ಋಕ್ಕನ್ನೇ ಆಶ್ರಯಿಸಿಕೊಂಡಿರತಕ್ಕುದಾದಕಾರಣ ಈಗ ಮೊದಲು ಋಗ್ವ್ಯಾಖ್ಯಾನವೇ ಯುಕ್ತವು.

ಮಂತ್ರ, ಬ್ರಾಹ್ಮಣ ಎಂಬೆರಡು ವೇದ ವಿಭಾಗಗಳಲ್ಲಿ ಬ್ರಾಹ್ಮಣವು ಮಂತ್ರಾರ್ಥ ವಿವರಣೆಗೆ ಅವಶ್ಯವಾದುದರಿಂದ (ಋಗ್ವೇದದ) ಬ್ರಾಹ್ಮಣಗಳು ಆರಣ್ಯಕಾಂಡ ಸಹಿತವಾಗಿ ಮೊದಲೇ ವ್ಯಾಖ್ಯಾತಗಳಾಗಿವೆ. ಈಗ ಆ ಬ್ರಾಹ್ಮಣ ವಾಕ್ಯಗಳನ್ನಲ್ಲಲ್ಲು ದಾಹರಿಸಿ, (ಋಗ್ವೇದದ) ಮಂತ್ರಗಳನ್ನೊಳಗೊಂಡಿರುವ ಸಂಹಿತಾ ಗ್ರಂಥಕ್ಕೆ ವ್ಯಾಖ್ಯಾನಮಾಡಲಾಗುತ್ತದೆ. ಆ ಗ್ರಂಥವು "ಅಗ್ನಿಮೀಳೇ" ಎಂಬುದರಿಂದ ಆರಂಭವಾಗಿ "ಯಥಾವಃ. . . ." ಎಂಬಲ್ಲಿಯವರೆಗೆ ಎಂಟು ಕಾಂಡಗಳನ್ನೂ ಹತ್ತು ಮಂಡಲಗಳನ್ನೂ ಅರವತ್ತುನಾಲ್ಕಧ್ಯಾಯಗಳನ್ನೂ, ಸಾವಿರಕ್ಕಿಂತ ಸ್ವಲ್ಪ ಹೆಚ್ಚು ಸೂಕ್ತಗಳನ್ನೂ, ಎರಡು ಸಾವಿರಕ್ಕಿಂತ ಸ್ವಲ್ಪ ಹೆಚ್ಚು ವರ್ಗಗಳನ್ನೂ ಹತ್ತು ಸಾವಿರಕ್ಕಿಂತ ಸ್ವಲ್ಪ ಹೆಚ್ಚು ಋಕ್ಕುಗಳನ್ನೂ ಒಳಗೊಂಡುದಾಗಿದೆ. ಈ ಗ್ರಂಥವೆಲ್ಲವೂ ಸಾಮಾನ್ಯವಾಗಿ ಬ್ರಹ್ಮಯಜ್ಞ ಜಪಗಳಲ್ಲಿಯೂ, ವಿಶೇಷವಾಗಿ ಕ್ರತುಯಜ್ಞಗಳಲ್ಲಿಯೂ ವಿನಿಯೋಗವಾಗುತ್ತದೆ ಎಂಬುದನ್ನು ಹಿಂದೆ ಹೇಳಿದೆ. ಸೂತ್ರಕಾರರೂ (ಜೈಮಿನಿ) ಅದನ್ನು ತೋರಿಸಿದ್ದಾರೆ.]

## ವೇದಕ್ಕೆ ಲಕ್ಷಣವೇನು?

ನನು ವೇದ ಏವ ತಾವನ್ನಾಸ್ತಿ। . . . . . . ।ಕೋಽಯಂ ವೇದೋನಾಮ।ನ ಹಿ ತತ್ರ ಲಕ್ಷಣಂ ಪ್ರಮಾಣಂ ವಾಽಸ್ತಿ। . . . . . . ।ಲಕ್ಷಣ ಪ್ರಮಾಣಾಭ್ಯಾಂ ಹಿ ವಸ್ತುಸಿದ್ಧಿರಿತಿ ನ್ಯಾಯವಿದಾಂ ಮತಂ। . . . . . . ।ಅತ್ರೋಚ್ಯತೇ । ಮಂತ್ರ ಬ್ರಾಹ್ಮಣಾತ್ಮಕಂ ತಾವದದುಷ್ಟಂ ಲಕ್ಷಣಂ । ಅತಏವಾಪಸ್ತಂಬೋ ಯಜ್ಞಪರಿಭಾಷಾಯಾಮೇವಮಾಹ।

ಮಂತ್ರಬ್ರಾಹ್ಮಣಯೋರ್ವೇದ ನಾಮಧೇಯಮಿತಿ । ತಯೋಸ್ತು ಸ್ವರೂಪಮುಪರಿಷ್ಟಾನ್ನಿರ್ಣೇಷ್ಯತೇ । ಅಪೌರುಷೇಯ ವಾಕ್ಯತ್ವಮಿದಮಪಿ ಯಾದೃಶಮಸ್ಮಾಭಿರ್ವಿವಕ್ಷಿತಂ ತಾದೃಶಮುತ್ತರತ್ರ ಸ್ಪಷ್ಟೀ ಭವಿಷ್ಯತಿ । ಪ್ರಮಾಣಾನ್ಯಪಿ ಯಥೋಕ್ತ ಶ್ರುತಿ ಸ್ಮೃತಿ ಲೋಕಪ್ರಸಿದ್ಧಿರೂಪಾಣಿ ವೇದಸದ್ಭಾವೇ ದ್ರಷ್ಟವ್ಯಾನಿ । ಯಥಾ ಘಟ ಪಟಾದಿ ದ್ರವ್ಯಾಣಾಂ ಸ್ವಪ್ರಕಾಶಕತ್ವಾಭಾವೇಽಪಿ ಸೂರ್ಯಚಂದ್ರಾದೀನಾಂ ಸ್ವಪ್ರಕಾಶಕತ್ವಮವಿರುದ್ಧಮ್ । ತಥಾ ಮನುಷ್ಯಾದೀನಾಂ ಸ್ವಸ್ಕಂಧಾರೋಹಾ ಸಂಭವೇಽಪ್ಯಕುಂಠಿತ ಶಕ್ತೇರ್ವೇದಸ್ಯೇತರ ವಸ್ತುಪ್ರತಿಪಾದಕತ್ವವತ್ಸ್ವಪ್ರತಿಪಾದಕತ್ವಮಪ್ಯಸ್ತು । ಅತ ಏವ ಸಂಪ್ರದಾಯವಿದೋಽಕುಂಠಿತಾಂ ಶಕ್ತಿಂ ವೇದಸ್ಯ ದರ್ಶಯಂತಿ । ಚೋದನಾ ಹಿ ಭೂತಂ ಭವಂತಂ ಭವಿಷ್ಯಂತಂ ಸೂಕ್ಷ್ಮಂ ವ್ಯವಹಿತಂ ವಿಪ್ರಕೃಷ್ಟಮಿತ್ಯೇವಂ ಜಾತೀಯಮರ್ಥಂ ಶಕ್ನೋತ್ಯವಗಮಯಿತುಮಿತಿ । ತಥಾ ಸತಿ ವೇದ ಮೂಲಾಯಾಃ ಸ್ಮೃತೇ ಸ್ತದುಭಯ ಮೂಲಾಯಾ ಲೋಕಪ್ರಸಿದ್ಧೇಶ್ಚ ಪ್ರಾಮಾಣ್ಯಂ ದುರ್ವಾರಂ । ತಸ್ಮಾಲ್ಲಕ್ಷಣ ಪ್ರಮಾಣ ಸಿದ್ಧೋ ವೇದೋ ನ ಕೇನಾಪಿ ಚಾರ್ವಾಕಾದಿನಾಪೋಢುಂ ಶಕ್ಯತ ಇತಿ ಸ್ಥಿತಮ್ ।

[ವೇದವೆಂಬ ವಸ್ತುವೇ ಇಲ್ಲವಲ್ಲವೆ? ವೇದವೆಂಬುದೇನು? ಅದಕ್ಕೆ ಗೊತ್ತಾದ ಲಕ್ಷಣವಾಗಲಿ ನಿದರ್ಶನವಾಗಲಿ ಇಲ್ಲವಲ್ಲ—ಎಂದು ಹೇಳಿದರೆ, ಅದಕ್ಕೆ ನಮ್ಮ ಉತ್ತರವು ಹೀಗಿರುವುದು :—ಮಂತ್ರ ಬ್ರಾಹ್ಮಣಗಳ ಸಮೂಹವೇ ವೇದವೆಂಬುದು. ಆಪಸ್ತಂಬರು ಇದೇ ಅಭಿಪ್ರಾಯವನ್ನು ಹೇಳಿದ್ದಾರೆ. ಅವುಗಳ ಸ್ವರೂಪವನ್ನು ಮುಂದೆ ನಿರ್ಣಯಿಸುವುದಾಗುತ್ತದೆ. ಅವು ಅಪೌರುಷೇಯವೆಂಬುದರಲ್ಲಿ ನಮ್ಮ ಅರ್ಥವೇನೆಂಬುದೂ ಈ ಕೆಳಗೆ ಸ್ಪಷ್ಟವಾಗುತ್ತದೆ. ಶ್ರುತಿ, ಸ್ಮೃತಿ, ಲೋಕಪ್ರಸಿದ್ಧಿ ಎಂಬಿವು ವೇದದ ಇರುವಿಕೆಯ ವಿಷಯದಲ್ಲಿ ಪ್ರಮಾಣಗಳಾಗಿವೆ. ಘಟ (ಮಡಕೆ), ಪಟ (ಬಟ್ಟೆ) ಮೊದಲಾದುವು ತಮ್ಮಷ್ಟಕ್ಕೆ ತಾವೇ (ಎಂದರೆ, ಬೆಳಕಿಲ್ಲದಿದ್ದಲ್ಲಿ) ಪ್ರಕಾಶಿಸಲಾರದಿದ್ದರೂ ಸೂರ್ಯಚಂದ್ರಾದಿಗಳು ಹೇಗೆ ಸ್ವತಃ ಪ್ರಕಾಶಿಸಬಲ್ಲರೋ ಅದೇ ರೀತಿಯಲ್ಲಿ—ಮನುಷ್ಯರು ತಮ್ಮ ಹೆಗಲಿನಮೇಲೆ ತಾವೇ ಹತ್ತಿಕೊಳ್ಳಲು ಶಕ್ತರಲ್ಲದಿದ್ದರೂ—ವೇದವು ಮಾತ್ರ ಇತರ ವಸ್ತುಗಳನ್ನು ಪ್ರತಿಪಾದನೆ ಮಾಡಲು ಶಕ್ತಿಯುಳ್ಳುದಾಗಿರುವಂತೆಯೇ ತನ್ನ ವಿಷಯವನ್ನೂ ಪ್ರತಿಪಾದಿಸಿಕೊಳ್ಳಲು ಶಕ್ತವಾಗಿದೆ. ಆದುದರಿಂದಲೇ ಸಂಪ್ರದಾಯವನ್ನರಿತ ಹಿರಿಯರು ವೇದಕ್ಕೆ ಕುಂದಿಲ್ಲದ ಶಕ್ತಿಯುಂಟೆಂದು ಹೇಳಿರುವರು. ವೇದ ಪ್ರೇರಣೆಯು (ಚೋದನೆಯು) ಭೂತ ವರ್ತಮಾನ ಭವಿಷ್ಯತ್ಕಾಲದ ಸಂಗತಿಗಳನ್ನೂ ಸೂಕ್ಷ್ಮವಾದುದನ್ನೂ ದೂರವಾದುದನ್ನೂ ಸಮೀಪವಾದುದನ್ನೂ ತಿಳಿಸಲು ಶಕ್ತಿಯುಳ್ಳುದು ಎಂಬುದು ಅವರ (ಸ್ಮೃತಿಯ) ಮಾತು. ಹೀಗಿರುವಲ್ಲಿ ವೇದದ ಆಧಾರದಿಂದ ಹುಟ್ಟಿರುವ ಸ್ಮೃತಿಯ ಮತ್ತು ವೇದ ಸ್ಮೃತಿಗಳೆರಡರ ಆಧಾರದಿಂದ ಹುಟ್ಟಿರುವ ಲೋಕಪ್ರಸಿದ್ಧಿಯ ಪ್ರಮಾಣ(ನಿದರ್ಶನ)ವನ್ನು ತಿರಸ್ಕರಿಸುವುದು ಅಸಾಧ್ಯ. ಹೀಗಿರಲಾಗಿ, ವೇದವು ಲಕ್ಷಣ ಪ್ರಮಾಣಗಳಿಂದ ಗೊತ್ತಾಗಿಯೇ ಇರುವುದೆಂಬ ಸಿದ್ಧಾಂತವನ್ನು ಖಂಡಿಸುವುದು ಚಾರ್ವಾಕಾದಿಗಳಿಗೆ ಶಕ್ಯವಲ್ಲ.]

## ಉಚ್ಚಾರಣೆ ಮುಖ್ಯವೋ ಅರ್ಥ ಮುಖ್ಯವೋ

"ಅನಿತ್ಯ ಸಂಯೋಗಾನ್ಮಂತ್ರಾನರ್ಥಕ್ಯಮ್"—ಇತಿ। ಕಿಂ ತೇ ಕೃಣ್ವಂತಿ ಕೀಕಟೇಷ್ವಿತಿ ಮಂತ್ರೇ ಕೀಕಟೋ ನಾಮ ಜನಪದ ಆಮ್ನಾತಃ। ತಥಾ ನೈಚಾಶಾಖಂ ನಾಮ ನಗರಂ ಪ್ರಮಗಂದೋ ರಾಜೇತ್ಯೇತೇಽರ್ಥಾ ಅನಿತ್ಯಾ ಆಮ್ನಾತಾಃ। ತಥಾ ಸತಿ ಪ್ರಾಕ್ಪ್ರಮಗಂದಾನ್ನಾಯಂ ಮಂತ್ರೋ ಭೂತಪೂರ್ವ ಇತಿ ಗಮ್ಯತೇ। ತದೇವಮೇತೈಸ್ತದರ್ಥಶಾಸ್ತ್ರಾದಿಭಿರ್ಹೇತುಭಿರ್ಮಂತ್ರಾಣಾಮರ್ಥ ಪ್ರತ್ಯಾಯನಾರ್ಥತ್ವಂ ನಾಸ್ತಿ। ಕಿಂ ತೂಚ್ಚಾರಣಾದದೃಷ್ಟಾರ್ಥಾ ಏವೇತಿ ಪೂರ್ವಪಕ್ಷಃ। ತತ್ರ ಸಿದ್ಧಾಂತಂ ಸೂತ್ರಯತಿ। "ಅವಿಶಿಷ್ಟಸ್ತು ವಾಕ್ಯಾರ್ಥಃ"—ಇತಿ। ತು ಶಬ್ದೇನ ಮಂತ್ರಾಣಾಮದೃಷ್ಟಾರ್ಥಮುಚ್ಚಾರಣಮಾತ್ರಂ ವಾರಯತಿ। ಕ್ರಿಯಾ ಕಾರಕ ಸಂಬಂಧೇನ ಪ್ರತೀಯಮಾನೋ ವಾಕ್ಯಾರ್ಥೋ ಲೋಕವೇದಯೋರವಿಶಿಷ್ಟಃ। ತಥಾ ಸತಿ ಯಥಾ ಲೋಕೇಽರ್ಥಪ್ರತ್ಯಾಯನಾಯೈವ ವಾಕ್ಯಮುಚ್ಚಾರ್ಯತೇ ತಥಾ ವೈದಿಕೇ ಯಾಗಪ್ರಯೋಗೇಽಪಿ ದ್ರಷ್ಟವ್ಯಮ್। ಮಂತ್ರೇಣ ಪ್ರಕಾಶಿತಸ್ತ್ವರ್ಥೋಽನುಷ್ಠಾತುಂ ಶಕ್ಯತೇ ನತ್ವಪ್ರಕಾಶಿತಃ। ತಸ್ಮಾನ್ಮಂತ್ರೋಚ್ಚಾರಣಸ್ಯಾರ್ಥ ಪ್ರಕಾಶಮಾನ ರೂಪಂ ದೃಷ್ಟಮೇವ ಪ್ರಯೋಜನಮ್।

[ವೇದದ ವಿಷಯದಲ್ಲಿ ಬರಬಹುದಾದ ಇನ್ನೊಂದಾಕ್ಷೇಪಣೆಯನ್ನು ಜೈಮಿನಿ ಮಹರ್ಷಿಗಳು ಈ ರೀತಿ ಸೂಚಿಸಿದ್ದಾರೆ.—"ವೇದಮಂತ್ರಗಳಲ್ಲಿ ಅನಿತ್ಯವಸ್ತುಗಳ ಪ್ರಸಕ್ತಿಯಿರುವುದರಿಂದ ಆ ಮಂತ್ರಗಳು ಅನರ್ಥಗಳಾಗುತ್ತವೆ." ಒಂದು ಮಂತ್ರದಲ್ಲಿ ಕೀಕಟವೆಂಬ ದೇಶದ ಹೆಸರೂ, ಇನ್ನೊಂದರಲ್ಲಿ ನೈಚಾಶಾಖವೆಂಬ ಪಟ್ಟಣದ ಹೆಸರೂ ಪ್ರಮಗಂದನೆಂಬ ರಾಜನ ಹೆಸರೂ ಉಕ್ತಗಳಾಗಿವೆ. ಇದರಿಂದ ಆ ದೇಶ ಪಟ್ಟಣ ರಾಜರುಗಳಿರುವುದಕ್ಕೆ ಮುಂಚೆ ವೇದವಿರಲಿಲ್ಲವೆಂದು ಸಿದ್ಧಾಂತವಾಗುತ್ತದೆ. ಈ ಕಾರಣದಿಂದ ಆ ಮಂತ್ರಗಳ ಅರ್ಥವನ್ನು ನಾವು ಮನಸ್ಸಿಗೆ ತೆಗೆದುಕೊಳ್ಳಲೇ ಕೂಡದೆಂದೂ, ಕೇವಲ ಅವುಗಳ ಅಕ್ಷರಗಳನ್ನು ಬಾಯಿಂದ ಉಚ್ಚರಿಸುವುದರಿಂದಲೇ ಕಣ್ಣಿಗೆ ಕಾಣದ ಒಂದು ಪುಣ್ಯವುಂಟಾಗುತ್ತದೆಂದೂ ನಾವು ತಿಳಿಯಬೇಕು. ಇಂತೆಂಬುದು ಪೂರ್ವಪಕ್ಷ. ಇದಕ್ಕೆ ಜೈಮಿನಿಗಳೇ ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಸೂಚಿಸಿದ್ದಾರೆ:—"ಇತರ ವಾಕ್ಯಗಳಲ್ಲಿ ಮಾತಿಗೆ ಅರ್ಥವಿರುವಂತೆಯೇ ವೇದದಲ್ಲಿಯೂ ಉಂಟು." ಇದರಿಂದ ಮಂತ್ರದ ಪ್ರಯೋಜನವು ಅಪ್ರತ್ಯಕ್ಷವಾದುದು; ಅದಕ್ಕೆ ಕೇವಲ ಶಬ್ದೋಚ್ಚಾರಣೆಯೇ ತಕ್ಕ ಉಪಯೋಗ—ಎಂಬ ವಾದವನ್ನು ತಪ್ಪಿಸಿದಂತಾಯಿತು. ಲೋಕದ ಭಾಷೆಯಲ್ಲಿ ಕರ್ತೃ ಕ್ರಿಯೆಗಳ ಸಂಬಂಧದಿಂದ ವಾಕ್ಯಾರ್ಥಮಾಡಲಾಗುವಂತೆ ವೇದದಲ್ಲಿಯೂ ಮಾಡಬೇಕು. ಮಂತ್ರದ ಅರ್ಥವು ತಿಳಿದರೆ ಅದನ್ನನುಸರಿಸಿ ಕರ್ಮಾನುಷ್ಠಾನಮಾಡುವುದು ಸಾಧ್ಯ; ಅರ್ಥವು ಪ್ರಕಾಶವಾಗದಿದ್ದರೆ ಅದು ಸಾಧ್ಯವಾಗದು. ಆದುದರಿಂದ ಮಂತ್ರೋಚ್ಚಾರಣೆಗೆ ಅರ್ಥಬೋಧನೆಯೆಂಬ ಪ್ರತ್ಯಕ್ಷ ಪ್ರಯೋಜನವೇ ಉಂಟು.]

# ಅನಿತ್ಯ ವಸ್ತು ಪ್ರಸಕ್ತಿ ವಿಚಾರ

ಯದಪ್ಯುಕ್ತಂ ಪ್ರಮಗಂದಾದ್ಯನಿತ್ಯಾರ್ಥಸಂಯೋಗಾ ನ್ಮಂತ್ರಸ್ಯಾನಾದಿತ್ವಂ ನ ಸ್ಯಾದಿತಿ ತತ್ರೋತ್ತರಂ ಸೂತ್ರಯತಿ। "ಉಕ್ತಸ್ತ್ವನಿತ್ಯ ಸಂಯೋಗಃ"—ಇತಿ। ಪ್ರಥಮಪಾದ ಸ್ಯಾಂತಿಮಾಧಿಕರಣೇ ಸೋಽಯಮನಿತ್ಯಸಂಯೋಗದೋಷ ಉಕ್ತಃ ಪರಿಹೃತಃ ತಥಾ ಹಿ। ತತ್ರ ಪೂರ್ವಪಕ್ಷೇ ವೇದಾನಾಂ ಪೌರುಷೇಯತ್ವಂ ವಕ್ತುಂ ಕಾರಕಂ ಕಾಲಾಪಕಮಿತ್ಯಾದಿ ಪುರುಷ ಸಂಬಂಧಾಭಿಧಾನಂ ಹೇತೂಕೃತ್ಯ "ಅನಿತ್ಯದರ್ಶನಾಚ್ಚ"—ಇತಿ ಸೂತ್ರಾಂತರಂ ಸೂತ್ರಿತಮ್। ತಸ್ಯಾಯಮರ್ಥಃ। "ಬಬರಃ ಪ್ರಾವಾಹಣಿರಕಾಮಯತ" (ತೈತ್ತಿರೀಯ ಸಂಹಿತಾ)—ಇತ್ಯನಿತ್ಯಾನಾಂ ಬಬರಾದೀನಾಮರ್ಥಾನಾಂ ದರ್ಶನಾತ್ತತಃ ಪೂರ್ವಮಸತ್ತ್ವಾತ್ಪೌರುಷೇಯೋ ವೇದ ಇತಿ। ತಸ್ಯೋತ್ತರಂ ಸೂತ್ರಿತಂ। "ಪರಂ ತು ಶ್ರುತಿ ಸಾಮಾನ್ಯಮಾತ್ರಮ್"—ಇತಿ। ತಸ್ಯಾಯಮರ್ಥಃ। ಯತ್ಕಾರಕಾದಿ ಸಮಾಖ್ಯಾನಂ ತತ್ಪ್ರವಚನ ನಿಮಿತ್ತಂ। ಯತ್ತು ಪರಂ ಬಬರಾದ್ಯನಿತ್ಯ ದರ್ಶನಂ ತಚ್ಛಬ್ದಸಾಮಾನ್ಯ ಮಾತ್ರಮ್। ನ ತು ತತ್ರಾನಿತ್ಯೋ ಬಬರಾಖ್ಯಃ ಕಶ್ಚಿತ್ಪುರುಷೋ ವಿವಕ್ಷಿತಃ। ಕಿಂ ತು ಬಬರ ಇತಿ ಶಬ್ದಾನುಕೃತಿಃ। ತಥಾ ಸತಿ ಬಬರೇತಿ ಶಬ್ದಂ ಕುರ್ವನ್ವಾಯು ರಭಿಧೀಯತೇ। ಸ ಚ ಪ್ರಾವಾಹಣಿಃ ಪ್ರಕರ್ಷೇಣ ವಹನ ಶೀಲಃ। ಏವಮನ್ಯತ್ರಾಪ್ಯೂಹನೀಯಮ್। ತದೇವಂ ಕಸ್ಯ ಚಿದಪಿ ದೋಷಸ್ಯಾಽಸಂಭವಾ ದ್ವಿವಕ್ಷಿತಾರ್ಥಾ ಮಂತ್ರಾಃ ಸ್ವಾರ್ಥಪ್ರಕಾಶನಾಯೈವ ಪ್ರಯೋಕ್ತವ್ಯಾಃ।

[ಮಂತ್ರಗಳಲ್ಲಿ ಪ್ರಮಗಂದನೆಂಬ ರಾಜ ಮೊದಲಾದ ಅನಿತ್ಯ ವಿಷಯಗಳ ಪ್ರಸಕ್ತಿಯಿರುವುದರಿಂದ ಮಂತ್ರಗಳು ಅನಾದಿಯಲ್ಲ—ಎಂಬ ಬಗೆಯ ಆಕ್ಷೇಪಕ್ಕೆ (ಜೈಮಿನಿಗಳು) ಈ ರೀತಿ ಉತ್ತರವನ್ನು ಸೂಚಿಸಿದ್ದಾರೆ :—ವೇದ ಮಂತ್ರಗಳಲ್ಲಿ ಪುರುಷ ಸಂಬಂಧವನ್ನು ಸೂಚಿಸುವ ಪದಗಳು ಎರಡು ಜಾತಿಯವಿರುತ್ತವೆ. ಅವುಗಳಲ್ಲಿ "ಕಾರಕ", "ಕಾಲಾಪಕ" ಮುಂತಾದ (ಮತ್ತು ಬಹುಶಃ ಮೇಲಿನ ?) ಹೆಸರುಗಳು ಒಂದು ಜಾತಿಯವು, "ಬಬರ", "ಪ್ರಾವಾಹಣಿ" ಮುಂತಾದುವು ಇನ್ನೊಂದು ಜಾತಿಯವು. ಇವೆರಡರಲ್ಲಿ ಮೊದಲನೆಯವು ಯಾವ ಮಹರ್ಷಿಗಳು ವೇದಪಾಠದಲ್ಲಿ ವಿಶೇಷ ಪ್ರಸಿದ್ಧರಾಗಿದ್ದರೋ ಅವರನ್ನು ಸ್ಮರಿಸತಕ್ಕವು. (ಎಂದರೆ, ವೇದವೇನೋ ಆಯಾ ಋಷಿಗಳಿಗಿಂತ ಪೂರ್ವಭಾವಿಯಾಗಿಯೇ ಇತ್ತು. ಆದರೆ ಆ ಋಷಿಗಳು ತಮ್ಮ ಹೆಸರುಗಳೊಡನೆ ಕೂಡಿರುವ ವೇದಭಾಗಗಳನ್ನು ಹೆಚ್ಚಾಗಿ ಪ್ರಚಾರಕ್ಕೆ ತರಲು ಸಂಕಲ್ಪಿತರಾಗಿದ್ದವರು.) ಎರಡನೆಯ ಜಾತಿಯವು ಮನುಷ್ಯರ ಹೆಸರುಗಳಂತೆ ಕಂಡರೂ ನಿಜವಾಗಿ ಹಾಗಲ್ಲ. ಬಬರ ಎಂಬುದು ವಾಯುವಿನ ಹೆಸರು. ಅದು ಗಾಳಿ ಬೀಸುವಾಗ ಹುಟ್ಟುವ ಶಬ್ದದ" ಅನುಕರಣದಿಂದ ಆದ ಮಾತು. ಪ್ರಾವಾಹಣಿ ಎಂದರೂ ವಾಯುವೇ ; ಆ ಮಾತಿಗೆ ಚೆನ್ನಾಗಿ ಹೊತ್ತುಕೊಂಡು ಹೋಗುವವನು" ಎಂದರ್ಥ. ಹೀಗೆ ವಿಚಾರಮಾಡಿ ನೋಡಿ

ದರೆ ವೇದಗಳು ಪುರುಷಕೃತವೂ ಅನಿತ್ಯವೂ ಅಲ್ಲವೆಂದೂ, ಅವು ಅರ್ಥವನ್ನು ತಿಳಿಸತಕ್ಕುವು ಗಳೂ ಆ ಅರ್ಥಕ್ಕನುಸಾರವಾಗಿ ಪ್ರಯೋಗ ಹೊಂದಬೇಕಾದವುಗಳೂ ಆಗಿವೆಯೆಂದೂ ಗೊತ್ತಾಗುತ್ತದೆ.]

## ವೇದಕರ್ತೃತ್ವ ವಿಚಾರ

ತದೇವಂ ವೇದೇ ವಿದ್ಯಮಾನಾನಾಂ ತ್ರಯಾಣಾಂ ಮಂತ್ರ ವಿಧ್ಯರ್ಥವಾದ ಭಾಗಾನಾ ಮಪ್ರಾಮಾಣ್ಯೇ ಕಾರಣಾಭಾವಾದ್ಬೋಧಕಾನಾಂ ತೇಷಾಂ ಪ್ರಾಮಾಣ್ಯಸ್ಯ ಸ್ವತಸ್ತ್ವಾಂ ಗೀಕಾರಾಚ್ಚ ಕೃತ್ಸ್ನಸ್ಯಾಪಿ ವೇದಸ್ಯ ಪ್ರಾಮಾಣ್ಯಂ ಸಿದ್ಧಮ್‌॥ ನನ್ವೇವಮಪಿ ವೇದಸ್ಯ ಪೌರುಷೇಯತ್ವೇನ ವಿಪ್ರಲಂಭಕ ವಾಕ್ಯವದಪ್ರಾಮಾಣ್ಯಂ ಸ್ಯಾತ್‌ । ಪೌರುಷೇಯತ್ವಂ ಚ ಪ್ರಥಮಪಾದೇ ಪೂರ್ವಪಕ್ಷತ್ವೇನ ಜೈಮಿನಿಃ ಸೂತ್ರಯಾಮಾಸ। ವೇದಾಂಶ್ಚೈಕೇ ಸಂನಿ ಕರ್ಷಂ ಪುರುಷಾಖ್ಯಾ—ಇತಿ। ಏಕೇ ವಾದಿನೋ ವೇದಾನ್ಪ್ರತಿ ಸಂನಿಕರ್ಷಂ ಮನ್ಯಂತೇ। ಕಾಲಿದಾಸಾದಿಭಿ ರ್ನಿರ್ಮಿತಾನಾಂ ರಘುವಂಶಾದಿ ಗ್ರಂಥಾನಾಂ ಸಮುಚ್ಚಯಾರ್ಥಶ್ಚ ಕಾರಃ। ತೇಹ್ಯತ್ರ ದೃಷ್ಟಾಂತತಯಾ ಸಮುಚ್ಚೀಯಂತೇ। ಯಥಾ ರಘುವಂಶಾದಯ ಇದಾನೀಂತನಾ ಸ್ತಥಾ ವೇದಾ ಅಪಿ। ನ ತು ವೇದಾ ಅನಾದಯಃ। ಅತ ಏವ ವೇದಕರ್ತೃತ್ವೇನ ಪುರುಷಾ ಆಖ್ಯಾಯಂತೇ। ವೈಯಾಸಿಕಂ ಭಾರತಂ ವಾಲ್ಮೀಕೀಯಂ ರಾಮಾಯಣಮಿತ್ಯತ್ರ ಯಥಾ ಭಾರತಾದಿ ಕರ್ತೃತ್ವೇನ ವ್ಯಾಸಾದಯ ಆಖ್ಯಾಯಂತೇ। ತಥಾ ಕಾಠಕಂ ಕೌಥುಮಂ ತೈತ್ತಿರೀಯ ಮಿತ್ಯೇವಂ ತತ್ತದ್ವೇದ ಶಾಖಾ ಕರ್ತೃತ್ವೇನ ಕಠಾದೀನಾ ಮಾಖ್ಯಾತತ್ವಾ ದ್ವೇದಾಃ ಪೌರುಷೇಯಾಃ ॥

ನನು ನಿತ್ಯಾನಾಮೇವ ಸತಾಂ ವೇದಾನಾ ಮುಪಾಧ್ಯಾಯವತ್ಸಂಪ್ರದಾಯ ಪ್ರವ ರ್ತಕತ್ವೇನ ಕಾಠಕಾದಿ ಸಮಾಖ್ಯಾ ಸ್ಯಾದಿತ್ಯಾಶಂಕ್ಯ ಯುಕ್ತ್ಯಂತರಂ ಸೂತ್ರಯತಿ। "ಅನಿತ್ಯ ದರ್ಶನಾಚ್ಚ"—ಇತಿ। ಅನಿತ್ಯಾ ಜನನಮರಣವಂತೋ ಬಬರಾದಯೋ ವೇದಾರ್ಥೇ ಶ್ರೂಯಂತೇ। "ಬಬರಃ ಪ್ರಾವಾಹಣಿ ರಕಾಮಯತ" (ತೈ. ಸಂ.) "ಕುಸುರುಬಿಂದ ಔದ್ದಾಲಕಿ ರಕಾಮಯತ" (ತೈ. ಸಂ.)—ಇತಿ। ತಥಾ ಸತಿ ಬಬರಾದಿಭ್ಯಃ ಪೂರ್ವಮಭಾವಾದನಿತ್ಯಾ ವೇದಾಃ। ವಿಮತಂ ವೇದವಾಕ್ಯಂ ಪೌರುಷೇಯ ವಾಕ್ಯತ್ವಾತ್ಕಾಲಿದಾಸಾದಿ ವಾಕ್ಯವದಿತ್ಯಾದ್ಯನುಮಾನ ಸಮುಚ್ಚಯಾರ್ಥಶ್ಚಕಾರಃ ॥

ಸಿದ್ಧಾಂತಂ ಸೂತ್ರಯತಿ। "ಉಕ್ತಂ ತು ಶಬ್ದಪೂರ್ವತ್ವಮ್‌"—ಇತಿ। ತು ಶಬ್ದೋ ವೇದಾನಾಮನಿತ್ಯತ್ವಂ ವಾರಯತಿ। ಶಬ್ದಸ್ಯ ವೇದರೂಪಸ್ಯ ಕಠಾದಿಪುರುಷೇಭ್ಯಃ ಪೂರ್ವತ್ವಮನಾದಿತ್ವಂ ಪ್ರಾಚೀನೈರೇವ ಸೂತ್ರೈರುಕ್ತಂ। ಔತ್ಪತ್ತಿಕಸ್ತು ಶಬ್ದಸ್ಯಾ

ರ್ಥೇನ ಸಂಬಂಧ ಇತ್ಯಸ್ಮಿನ್ಸೂತ್ರೆ ಔತ್ಪತ್ತಿಕ ಶಬ್ದೇನ ಸರ್ವೇಷಾಂ ಶಬ್ದಾನಾಂ ವೇದಾನಾಂ ತದರ್ಥಾನಾಂ ತದುಭಯ ಸಂಬಂಧಾನಾಂ ಚ ನಿತ್ಯತ್ವಂ ಪ್ರತಿಜ್ಞಾಯೋಽತ್ರರಾಭ್ಯಾಂ ಶಬ್ದಾಧಿಕರಣ ವಾಕ್ಯಾಧಿಕರಣಾಭ್ಯಾ ಮುಪಪಾದಿತತ್ವಾತ್। ಕಾ ತರ್ಹಿ ಕಾರಕಾದ್ಯಾ ಖ್ಯಯಾ ಗತಿರಿತ್ಯಾಶಂಕ್ಯ ಸಂಪ್ರದಾಯಪ್ರವರ್ತನಾತ್ಸೇಯಮುಪಪದ್ಯತ ಇತ್ಯುತ್ತರಂ ಸೂತ್ರಯತಿ॥

"ಆಖ್ಯಾ ಪ್ರವಚನಾತ್"—ಇತಿ। ಅಸ್ತ್ವಿಯಮಾಖ್ಯಾಯಾ ಗತಿಃ॥ ತತಃ ಪರಂ ಬಬರಾದ್ಯನಿತ್ಯದರ್ಶನಂ ಯದುಕ್ತಂ ತಸ್ಯ ಕಿಮುತ್ತರಮಿತ್ಯಾಶಂಕ್ಯೋತ್ತರಂ ಸೂತ್ರಯತಿ ॥ "ಪರಂ ತು ಶ್ರುತಿ ಸಾಮಾನ್ಯ ಮಾತ್ರಮ್"—ಇತಿ। ಯತ್ಪರಂ ಬಬರಾದಿಕಂ ತಚ್ಛಬ್ದ ಸಾಮಾನ್ಯ ಮೇವ। ನ ತು ಮನುಷ್ಯೋ ಬಬರನಾಮಕೋಽತ್ರ ವಿವಕ್ಷಿತಃ। ಬಬರ ಧ್ವನಿ ಯುಕ್ತಸ್ಯ ಪ್ರವಹಣ ಸ್ವಭಾವಸ್ಯ ವಾಯೋರತ್ರ ವಕ್ತುಂ ಶಕ್ಯತ್ವಾತ್ ॥

[ಹೀಗೆ ವೇದದ ಮಂತ್ರ (ದೇವತಾಸ್ತುತಿ), ವಿಧಿ (ಕರ್ತವ್ಯೋಪದೇಶ), ಅರ್ಥವಾದ (ಕರ್ಮಪ್ರಶಂಸೆ) ಎಂಬ ಮೂರು ಭಾಗಗಳನ್ನೂ ಅಪ್ರಮಾಣವೆನ್ನಲು ಕಾರಣಗಳಿಲ್ಲದಿರುವುದರಿಂದಲೂ, ಅವುಗಳ ಪ್ರಾಮಾಣ್ಯವನ್ನು ತಿಳಿಸುವ ಶ್ರುತಿ ಸ್ಮೃತ್ಯಾದಿ ವಾಕ್ಯಗಳು ಅಂಗೀಕಾರಾರ್ಹಗಳಾಗಿರುವುದರಿಂದಲೂ ಸಮಸ್ತ ವೇದದ ಪ್ರಾಮಾಣ್ಯವೂ ಸ್ವತಃಸಿದ್ಧವಾಗಿದೆ. "ವೈಯಾಸಿಕ ಭಾರತ", "ವಾಲ್ಮೀಕೀಯ ರಾಮಾಯಣ"—ಎಂಬ ಪ್ರಯೋಗಗಳಲ್ಲಿ ಪೂರ್ವ ಪದಗಳು ಗ್ರಂಥಕರ್ತನ ಹೆಸರನ್ನು ತಿಳಿಸುವಂತೆ "ಕಾಠಕ", "ಕೌಥುಮ", "ತೈತ್ತಿರೀಯ" ಎಂಬ ಋಷಿಸಂಬಂಧ ಸೂಚಕ ಪದಗಳು ತತ್ತದ್ವೇದ ವಿಭಾಗಗಳ ನಿರ್ಮಾಪಕರ ಹೆಸರನ್ನು ಸೂಚಿಸುತ್ತವೆ—ಎಂದು ಹೇಳುವಪಕ್ಷಕ್ಕೆ, ಆ ವೈದಿಕ ನಾಮಧೇಯಗಳು ಗ್ರಂಥಕಾರಣತ್ವವನ್ನು ಸೂಚಿಸದೆ, ಕೇವಲ ಉಪಾಧ್ಯಾಯತ್ವವನ್ನು ಮತ್ತು ಸಂಪ್ರದಾಯ ಸ್ಥಾಪಕತ್ವವನ್ನು ತಿಳಿಸುತ್ತವೆ ಎಂದು ನಾವು ಉತ್ತರ ಹೇಳುತ್ತೇವೆ. ಬಬರಾದಿ ಶಬ್ದಗಳ ವಿಚಾರವನ್ನು ಮೇಲೆ ತಿಳಿಸಿದೆ.]

## ಒಂದು ಉದಾಹರಣೆ

ಈ ಮೇಲಿನ ಪ್ರಸಂಗಕ್ಕೆ ಸಂಬಂಧಪಟ್ಟಂತೆ, ಋಕ್ಸಂಹಿತೆಯ ಪ್ರಥಮಾನುವಾಕದ ಪ್ರಥಮ ಸೂಕ್ತವಾದ "ಅಗ್ನಿಮೀಳೇ" ಮಂತ್ರದ ಭಾಷ್ಯವನ್ನಿಲ್ಲಿ ನೋಡಬಹುದು.

ಏತಚ್ಚಾಗ್ನಿಮಿತ್ಯಾದಿ ಸೂಕ್ತಂ ನವರ್ಚಮ್। "ಅಗ್ನಿಂ ನವ ಮಧುಚ್ಛಂದಾ ವೈಶ್ವಾಮಿತ್ರ"—ಇತ್ಯನುಕ್ರಮಣಿಕಾಯಾಮುಕ್ತತ್ವಾತ್ । ವಿಶ್ವಾಮಿತ್ರ ಪುತ್ರೋ ಮಧುಚ್ಛಂದೋ ನಾಮಕಃ। ತಸ್ಯ ಸೂಕ್ತಸ್ಯ ದ್ರಷ್ಟೃತ್ವಾತ್ತದೀಯ ಋಷಿಃ। ಋಷ್ ಗತಾ

ವಿತಿ ಧಾತುಃ । ವೇದಪ್ರಾಪ್ತ್ಯರ್ಥಂ ತಪೋಽನುತಿಷ್ಠತಃ ಪುರುಷಾನ್ ಸ್ವಯಂಭೂರ್ವೇದ ಪುರುಷಃ ಪ್ರಾಪ್ನೋತ್ । ತಥಾ ಚ ಶ್ರೂಯತೇ । ಅಜಾನ್ ಹ ವೈ ಪೃಶ್ನೀಂಸ್ತಪಸ್ಯಮಾನಾನ್ ಬ್ರಹ್ಮ ಸ್ವಯಂಭ್ವಭ್ಯಾನರ್ಷತ್ತದೃಷಯೋಽಭವನ್—ಇತಿ (ತೈ.ಆ.)।ತಥಾಽತೀಂದ್ರಿಯಸ್ಯ ವೇದಸ್ಯ ಪರಮೇಶ್ವರಾನುಗ್ರಹೇಣ ಪ್ರಥಮತೋ ದರ್ಶನಾದೃಷಿತ್ವಮಿತ್ಯಭಿಪ್ರೇತ್ಯ ಸ್ಮರ್ಯತೇ ।

ಯುಗಾಂತೇಽಂತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ ।
ಲೇಭಿರೇ ತಪಸಾ ಪೂರ್ವ ಮನುಜ್ಞಾತಾಃ ಸ್ವಯಂಭುವಾ ॥

[ಈ "ಅಗ್ನಿಮೀಳೇ" ಸೂಕ್ತಕ್ಕೆ ವಿಶ್ವಾಮಿತ್ರ ಪುತ್ರನಾದ ಮಧುಚ್ಛಂದನೆಂಬಾತನು ಋಷಿ. "ಹೋಗು" (ಸೇರು) ಎಂಬರ್ಥವುಳ್ಳ 'ಋಷ್' ಧಾತುವಿನಿಂದ ಋಷಿ ಎಂಬ ಮಾತು ಉಂಟಾಗಿದೆ. ವೇದ ಸಂಪಾದನೆಗಾಗಿ ತಪಸ್ಸು ಮಾಡುತ್ತಿದ್ದ ಮಹಾಪುರುಷರಲ್ಲಿ ಸ್ವಯಂಭುವಾದ (ತಾನಾಗಿ ಉಂಟಾದವನಾದ) ಬ್ರಹ್ಮನು ಹೊಕ್ಕನು. ಹೀಗೆಂಬ ವೇದ ವಾಕ್ಯವೇ ತೈತ್ತಿರೀಯದಲ್ಲಿದೆ. ಅತೀಂದ್ರಿಯ ವಸ್ತುವಾದ ವೇದವನ್ನು ಪರಮೇಶ್ವರಾನುಗ್ರಹದಿಂದ ಯಾರು ಮೊದಲು ಕಂಡ (ಪಡೆದ) ರೋ ಅವರೇ ಋಷಿಗಳು. ಸ್ಮೃತಿಯಲ್ಲಿಯೂ ಹೀಗೆಯೇ ಹೇಳಿದೆ: ಯುಗಾಂತ್ಯದಲ್ಲಿ ಬ್ರಹ್ಮದೊಳಕ್ಕೆ ಸೇರಿ ಅಡಗಿಕೊಂಡ ವೇದಗಳನ್ನೂ ಇತಿಹಾಸಗಳನ್ನೂ ಮಹರ್ಷಿಗಳು ತಪಸ್ಸುಮಾಡಿ, ಆ ಬ್ರಹ್ಮನ ಅನುಜ್ಞೆಯಂತೆ ಪುನಃ ಪಡೆದುಕೊಂಡರು.]

## ಉನ್ಮತ್ತ ವಾಕ್ಯವೊ?

ನನು ವೇದೇ ಕ್ವಚಿದೇವಂ ಶ್ರೂಯತೇ । "ವನಸ್ಪತಯಃ ಸತ್ರಮಾಸತ", "ಸರ್ಪಾಸ್ಸತ್ರಮಾಸತ"—ಇತಿ । ತತ್ರ ವನಸ್ಪತೀನಾಮಚೇತನತ್ವಾತ್ಸರ್ಪಾಣಾಂ ಚೇತನತ್ವೇಽಪಿ ವಿದ್ಯಾರಹಿತತ್ವಾನ್ನ ತದನುಷ್ಠಾನಂ ಸಂಭವತಿ । ಅತೋ ಜರದ್ಗವೋ ಗಾಯತಿ ಮದ್ರಕಾಣೀತ್ಯಾದ್ಯುನ್ಮತ್ತ ಬಾಲವಾಕ್ಯ ಸದೃಶತ್ವಾತ್ಕೇನಚಿತ್ಕೃತೋ ವೇದ ಇತ್ಯಾಶಂಕ್ಯೋತ್ತರಂ ಸೂತ್ರಯತಿ । "ಕೃತೇ ಚಾ ವಿನಿಯೋಗಃ ಸ್ಯಾತ್ಕರ್ಮಣಃ ಸಮತ್ವಾತ್"—ಇತಿ । ಯದಿ ಜ್ಯೋತಿಷ್ಟೋಮಾದಿ ವಾಕ್ಯಂ ಕೇನಚಿತ್ಪುರುಷೇಣ ಕ್ರಿಯೇತ ತದಾನೀಂ ಕೃತೇ ತಸ್ಮಿನ್ ವಾಕ್ಯೇ ಸ್ವರ್ಗ ಸಾಧನತ್ವೇ ಜ್ಯೋತಿಷ್ಟೋಮಸ್ಯ ವಿನಿಯೋಗೋ ನ ಸ್ಯಾತ್ । ಸಾಧ್ಯಸಾಧನಭಾವಸ್ಯ ಪುರುಷೇಣ ಜ್ಞಾತುಮಶಕ್ಯತ್ವಾತ್ । ಶ್ರೂಯತೇ ತು ವಿನಿಯೋಗಃ । "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ"—ಇತಿ । ನ ಚೈತದುನ್ಮತ್ತವಾಕ್ಯಸದೃಶಂ ಲೌಕಿಕ ವಿಧಿವಾಕ್ಯವದ್ಭಾವ್ಯ ಕರಣೇತಿಕರ್ತವ್ಯತಾರೂಪೈಸ್ತ್ರಿಭಿರಂಶೈರುಪೇತಾಯಾ ಭಾವನಾಯಾ ಅವಗಮಾತ್ । ಲೋಕೇ ಹಿ ಬ್ರಾಹ್ಮಣಾನ್ಭೋಜಯೇದಿತಿ ವಿಧೌ ಕಿಂ

ಕೇನ ಕಥಮಿತ್ಯಾಕಾಂಕ್ಷಾಯಾಂ ತೃಪ್ತಿಮುದ್ದಿಶ್ಯೌದನೇನ ದ್ರವ್ಯೇಣ ಶಾಕಸೂಪಾದಿ ಪರಿವೇಷಣ ಪ್ರಕಾರೇಣೇತಿ ಯಥೋಚ್ಯತೇ। ಜ್ಯೋತಿಷ್ಟೋಮ ವಿಧಾವಪಿ ಸ್ವರ್ಗಮುದ್ದಿಶ್ಯ ಸೋಮೇನ ದ್ರವ್ಯೇಣ ದೀಕ್ಷಣೀಯಾದ್ಯಂಗೋಪಕಾರ ಪ್ರಕಾರೇಣೇತ್ಯುಕ್ತೇ ಕಥಮುನ್ಮತ್ತ ವಾಕ್ಯ ಸದೃಶಂ ಭವೇದಿತಿ। ವನಸ್ಪತ್ಯಾದಿ ಸತ್ರವಾಕ್ಯಮಪಿ ನ ತತ್ಸದೃಶಮ್। ತಸ್ಯ ಸತ್ರ ಕರ್ಮಣೋ ಜ್ಯೋತಿಷ್ಟೋಮಾದಿನಾ ಸಮತ್ವಾತ್। ಯತ್ಪರೋ ಹಿ ಶಬ್ದಃ ಸ ಶಬ್ದಾರ್ಥ ಇತಿ ನ್ಯಾಯವಿದ ಆಹುಃ। ಜ್ಯೋತಿಷ್ಟೋಮಾದಿ ವಾಕ್ಯಸ್ಯ ವಿಧಾಯಕತ್ವಾ ದನುಷ್ಠಾನೇ ತಾತ್ಪರ್ಯಮ್। ವನಸ್ಪತ್ಯಾದಿ ಸತ್ರವಾಕ್ಯಸ್ಯಾರ್ಥವಾದತ್ವಾ ತ್ಪ್ರಶಂಸಾಯಾಂ ತಾತ್ಪರ್ಯಮ್। ಸಾ ಚಾ ವಿದ್ಯಮಾನೇನಾಪಿ ಕರ್ತುಂ ಶಕ್ಯತೇ। ಅಚೇತನಾ ಅವಿದ್ವಾಂಸೋಽಪಿ ಸತ್ರಮನುಷ್ಠಿತವಂತಃ ಕಿಂ ಪುನಶ್ಚೇತನಾ ವಿದ್ವಾಂಸೋ ಬ್ರಾಹ್ಮಣಾ ಇತಿ ಸತ್ರ ಸ್ತುತಿಃ। ಚಕಾರಃ ಪೂರ್ವಪಕ್ಷೋಕ್ತಸ್ಯ ವಾಕ್ಯತ್ವಹೇತೋಃ ಕರ್ತ್ರನುಪಲಂಭೇನ ಪರಾಹತಿಂ ಸಮುಚ್ಚಿನೋತಿ। ತಸ್ಮಾನ್ನಾಸ್ತಿ ವೇದಸ್ಯ ಪೌರುಷೇಯತ್ವಮ್। ಅತ್ರೈತೌ ಸಂಗ್ರಹ ಶ್ಲೋಕೌ ॥

ಪೌರುಷೇಯಂ ನ ವಾ ವೇದವಾಕ್ಯಂ ಸ್ಯಾತ್ಪೌರುಷೇಯತಾ।
ಕಾಠಕಾದಿ ಸಮಾಖ್ಯಾನಾದ್ವಾಕ್ಯತ್ವಾಚ್ಚಾನ್ಯವಾಕ್ಯವತ್ ॥
ಸಮಾಖ್ಯಾನಂ ಪ್ರವಚನಾದ್ವಾಕ್ಯತ್ವಂ ತು ಪರಾಹತಮ್।
ತತ್ಕರ್ತ್ರನುಪಲಂಭೇನ ಸ್ಯಾತ್ತತೋಽಪೌರುಷೇಯತಾ ॥

—ಇತಿ ಜೈಮಿನೀಯ ನ್ಯಾಯಮಾಲಾ.

ನನು ಭಗವತಾ ಬಾದರಾಯಣೇನ ವೇದಸ್ಯ ಬ್ರಹ್ಮಕಾರ್ಯತ್ವಂ ಸೂತ್ರಿತಮ್। "ಶಾಸ್ತ್ರಯೋನಿತ್ವಾತ್"—ಇತಿ । ಋಗ್ವೇದಾದಿ ಶಾಸ್ತ್ರಕಾರಣತ್ವಾದ್ಬ್ರಹ್ಮ ಸರ್ವಜ್ಞಮಿತಿ ಸೂತ್ರಾರ್ಥಃ। ಬಾಢಮ್। ನೈತಾವತಾ ಪೌರುಷೇಯತ್ವಂ ಭವತಿ। ಮನುಷ್ಯ ನಿರ್ಮಿತತ್ವಾಭಾವಾತ್। ಈದೃಶ ಮಪೌರುಷೇಯತ್ವ ಮಭಿಪ್ರೇತ್ಯ ವ್ಯವಹಾರ ದಶಾಯಾಮಾಕಾಶಾದಿವನ್ನಿತ್ಯತ್ವಂ ಬಾದರಾಯಣೇನೈವ ದೇವತಾಧಿಕರಣೇ ಸೂತ್ರಿತಂ। "ಅತ ಏವ ಚ ನಿತ್ಯತ್ವಮ್"—ಇತಿ। ಶ್ರುತಿ ಸ್ಮೃತೀ ಚಾತ್ರ ಭವತಃ। "ವಾಚಾ ವಿರೂಪ ನಿತ್ಯಯಾ"—ಇತಿ ಶ್ರುತಿಃ (ಋಕ್)। "ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ"—ಇತಿ ಸ್ಮೃತಿಃ। ತಸ್ಮಾತ್ಕರ್ತೃದೋಷಶಂಕಾಯಾ ಅನುದಯಾನ್ಮಂತ್ರ ಬ್ರಾಹ್ಮಣಾತ್ಮಕಸ್ಯ ವೇದಸ್ಯ ನಿರ್ವಿಘ್ನಂ ಪ್ರಾಮಾಣ್ಯಂ ಸಿದ್ಧಂ ॥

[ವೇದದಲ್ಲಿ ಕೆಲವೆಡೆ "ವನಸ್ಪತಿಗಳು ಯಜ್ಞಮಾಡಿದುವು", "ಸರ್ಪಗಳು ಯಾಗ ಮಾಡಿದುವು" ಎಂದಿರುವುದಷ್ಟೆ? ವನಸ್ಪತಿಗಳು ಅಚೇತನಗಳಾಗಿಯೂ ಸರ್ಪಗಳು ವಿದ್ಯಾ

ವಿಹೀನಗಳಾಗಿಯೂ ಇರುತ್ತವಾದಕಾರಣ ಅವು ಯಾಗಮಾಡುವುವೆಂಬುದು ಬಾಲೋನ್ಮತ್ತರ ವಾಕ್ಯಗಳಂತೆಯೇ ಸರಿ,—ಎಂದು ಆಕ್ಷೇಪಣೆಮಾಡಿದರೆ ಅದಕ್ಕೆ ಜೈಮಿನಿಗಳ ಉತ್ತರವು ಹೀಗಿರುವುದು. ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಕುರಿತ ವೇದವಾಕ್ಯಗಳು ಭಾವ್ಯ (ಪಡೆಯಲ್ಪಡಬೇಕಾದುದು), ಕರಣ (ಸಾಧನ), ಇತಿಕರ್ತವ್ಯ (ವಿಧಾನ) ಎಂಬ ಮೂರು ಅಂಶಗಳಿಂದೊಡಗೂಡಿವೆ. ಲೋಕದಲ್ಲಿ "ಬ್ರಾಹ್ಮಣರಿಗೆ ಭೋಜನಮಾಡಿಸತಕ್ಕುದು" ಎಂಬ ವಿಧಿಯನ್ನು ಕೇಳಿದೊಡನೆಯೆ, ಏತಕ್ಕೋಸ್ಕರ, ಯಾವುದರಿಂದ, ಹೇಗೆ—ಎಂಬ ಪ್ರಶ್ನೆಗಳು ತಲೆದೋರುತ್ತವೆ; ಅವಕ್ಕೆ ಅವರು ತೃಪ್ತರಾಗುವುದಕ್ಕೋಸ್ಕರ, ಅನ್ನದಿಂದ, ಪಲ್ಯ ಭಕ್ಷ್ಯ ಮೊದಲಾದವುಗಳೊಡನೆ—ಎಂಬ ರೀತಿಯ ಉತ್ತರಗಳೂ ಇರುತ್ತವೆ. ಜ್ಯೋತಿಷ್ಟೋಮ ವಿಚಾರದಲ್ಲಿಯೂ ಹಾಗೆಯೇ—ಸ್ವರ್ಗಪ್ರಾಪ್ತಿಗೋಸ್ಕರ, ಸೋಮದ್ರವ್ಯದಿಂದ, ದೀಕ್ಷೆ ಮೊದಲಾದ ಕರ್ಮಪೂರ್ವಕವಾಗಿ ಎಂಬ ವಿವರಗಳು ಸಮಂಜಸವಾಗಿರುತ್ತವೆ. ಇಂಥ ಸಾಮಂಜಸ್ಯವಿರುವ ವಾಕ್ಯವನ್ನು ಹುಚ್ಚು ಮಾತೆಂದು ಹೇಳಲಾಗದು. ಇನ್ನು ವನಸ್ಪತಿ ಸರ್ಪಗಳ ಯಾಗಾನುಷ್ಠಾನದ ಕಥೆಯೋ ಎಂದರೆ—ಅದು ಅರ್ಥವಾದ, ಎಂದರೆ ಯಜ್ಞ ಪ್ರಶಂಸೆ. ಅಚೇತನಗಳೂ ವಿದ್ಯಾವಿಹೀನಗಳೂ ಆದ ಪ್ರಾಣಿಗಳೇ ಯಾಗಗಳನ್ನೆಸಗಿದವೆಂಬುದರಲ್ಲಿ ಚೈತನ್ಯವಂತರೂ ವಿದ್ವಾಂಸರೂ ಆದ ಬ್ರಾಹ್ಮಣರು ಯಾಗಗಳನ್ನು ಬಿಡಕೂಡದೆಂದು ಒತ್ತಿ ಹೇಳುವುದೇ ತಾತ್ಪರ್ಯವು. ಹೀಗೆ ನೋಡಿದರೆ ವೇದಕ್ಕೆ ಪೌರುಷೇಯ ದೋಷದ ಅಂಟು ಇಲ್ಲವೆಂದು ಸಿದ್ಧವಾಗುತ್ತದೆ.

ವ್ಯಾಸರು "ಶಾಸ್ತ್ರಯೋನಿತ್ವಾತ್" (ಬ್ರಹ್ಮವೇ ವೇದಕ್ಕೆ ಕಾರಣವಾದುದರಿಂದ)—ಎಂಬ ಸೂತ್ರವನ್ನು ರಚಿಸಿ, ವೇದವು ಬ್ರಹ್ಮದಿಂದ ಉತ್ಪನ್ನವಾದುದೆಂದು ಸೂಚಿಸಿರುವುದರಿಂದ, ಒಂದಾನೊಂದು ಕಾಲದಲ್ಲಿ ವೇದವು ಇರಲಿಲ್ಲವೆಂದು ಅರ್ಥವಾಗುವುದಿಲ್ಲವೆ?—ಎಂದರೆ, ಅದಕ್ಕೆ ಪ್ರತ್ಯುತ್ತರವಾಗಿ ನಾವು ಹೇಳುವುದಿಷ್ಟು:—ವೇದಗಳಿಗೆ ಬ್ರಹ್ಮವು ಕಾರಣನೆಂದು ವ್ಯಾಸರು ಹೇಳಿರುವುದರಲ್ಲಿ ಬ್ರಹ್ಮದ ಸರ್ವಜ್ಞತೆಯನ್ನು ತೋರಿಸುವುದೇ ಅವರ ಅಭಿಪ್ರಾಯ. (ವೇದ ರಚನೆಯ ಸಂದರ್ಭವನ್ನು ತೋರಿಸುವುದಲ್ಲ.) ವೇದವು ವ್ಯವಹಾರ ದಶೆಯಲ್ಲಿ ಆಕಾಶದಂತೆ ನಿತ್ಯವೆಂದು ವ್ಯಾಸರೇ ಇನ್ನೊಂದು ಸೂತ್ರದಲ್ಲಿ ಹೇಳಿದ್ದಾರೆ. ಇದನ್ನು ಸಮರ್ಥಿಸಲು ಅನೇಕ ಶ್ರುತಿ ಸ್ಮೃತಿ ವಾಕ್ಯಗಳೂ ಇವೆ. ಹೀಗೆ ವೇದದಲ್ಲಿ ಕರ್ತೃದೋಷದ ಸಂದೇಹಕ್ಕೆ ಅವಕಾಶವೇ ಇಲ್ಲದಿರುವುದರಿಂದ ಮಂತ್ರ ಬ್ರಾಹ್ಮಣಗಳೆರಡರ ಪ್ರಾಮಾಣ್ಯವೂ ತಡೆಯಿಲ್ಲದೆ ಸ್ಥಾಪಿತವಾಗಿದೆ.]

## ಅಧ್ಯಯನದ ಕರ್ತವ್ಯತೆ

**ತೇಷಾಂ ಚ ವೇದಾನಾಂ ಸರ್ವೇಷಾ ಮನ್ಯತಮಸ್ಯ ವಾ ಸ್ವಪ್ರಜ್ಞಾನುಸಾರೇಣಾಧ್ಯಯನ ಮುಪನೀತೇನ ಕರ್ತವ್ಯಮ್ । ತಥಾ ಚ ಯಾಜ್ಞವಲ್ಕ್ಯಃ ಸ್ಮರತಿ । "ವೇದಾನಧೀತ್ಯ ವೇದೌ ವಾ ವೇದಂ ವಾಽಪಿ ಯಥಾಕ್ರಮಂ"—ಇತಿ । ಏಕವೇದಪಕ್ಷೇ ಪಿತೃ ಪಿತಾಮಹಾದಿ ಪರಂಪರಾಪ್ರಾಪ್ತ ಏವ ವೇದೋಽಧ್ಯೇತವ್ಯ ಇತ್ಯಭಿಪ್ರೇತ್ಯ "ಸ್ವಾಧ್ಯಾಯೋ**

ಽಧ್ಯೇತವ್ಯಃ''—ಇತಿ ''ಸ್ವ'' ಶಬ್ದ ಆಮ್ನಾತಃ। ತಚ್ಚಾಧ್ಯಯನಂ ನ ಕಾಮ್ಯಂ। ಕಿಂ ತು ನಿತ್ಯಮ್। ಅತ ಏವ ಪುರುಷಾರ್ಥಾನುಶಾಸನೇ ಸೂತ್ರಿತಮ್। ''ವೇದಸ್ಯಾಧ್ಯಯನಂ ನಿತ್ಯಮನಧ್ಯಯನೇ ಪಾತಕಾತ್''—ಇತಿ। ಪಾತಿತ್ಯಂ ಚೈವಮಾಮ್ನಾಯತೇ। ಅಪಹತ ಪಾಪ್ಮಾ ಸ್ವಾಧ್ಯಾಯೋ ದೇವಪವಿತ್ರಂ ವಾ ಏತತ್। ತಂ ಯೋಽನೂತ್ಸೃಜತ್ಯಭಾಗೋ ವಾಚಿ ಭವತ್ಯಭಾಗೋ ನಾಕೇ। ತದೇಷಾಭ್ಯುಕ್ತಾ—

ಯಸ್ತಿತ್ಯಾಜ ಸಖಿವಿದಂ ಸಖಾಯಂ
ನ ತಸ್ಯ ವಾಚ್ಯಪಿ ಭಾಗೋ ಅಸ್ತಿ।
ಯದೀಂ ಶೃಣೋತ್ಯಲಕಂ ಶೃಣೋತಿ
ನ ಹಿ ಪ್ರವೇದ ಸುಕೃತಸ್ಯ ಪಂಥಾಮ್॥ ಇತಿ

ತಸ್ಮಾತ್ ಸ್ವಾಧ್ಯಾಯೋಽಧ್ಯೇತವ್ಯ—ಇತಿ (ತೈ. ಆರಣ್ಯಕಂ)। ಅಧ್ಯೇತಾರಂ ಪುರುಷಂ ತದೀಯ ಪ್ರಯಾಸಾಭಿಜ್ಞಾನೇನ ಸಖಿವತ್ಪಾಲಯತೀತಿ ಸಖಿವಿದ್ವೇದಃ। ಬಹುದ್ರವ್ಯಪ್ರಯಾಸ ಸಾಧ್ಯ ಕ್ರತುಫಲಸ್ಯಾಧ್ಯಯನ ಮಾತ್ರೇಣ ಸಂಪಾದನಂ ತತ್ಪಾಲನಂ। ತದಪ್ಯಾಮ್ನಾಯತೇ। ''ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತ್ಯಗ್ನೇರ್ವಾಯೋರಾದಿತ್ಯಸ್ಯ ಸಾಯುಜ್ಯಂ ಗಚ್ಛತಿ'' ಇತಿ (ತೈ. ಆ.)। ಯದ್ಯಪ್ಯೇತದ್ಬ್ರಹ್ಮಯಜ್ಞಸ್ವಾಧ್ಯಾಯ ಫಲಂ ತಥಾಪಿ ಗ್ರಹಣಾರ್ಥಾಧ್ಯಯನ ಮಂತರೇಣ ಬ್ರಹ್ಮಯಜ್ಞಾ ಸಂಭವಾತ್ತದೀಯ ಫಲಮಪಿ ಸಂಪದ್ಯತೇ। ಈದೃಶಂ ಸಖಿವಿದಂ ವೇದರೂಪಂ ಸಖಾಯಂ ಯಃ ಪುಮಾನಧ್ಯಯನಮಕೃತ್ವಾ ಪರಿತ್ಯಜತಿ ತಸ್ಯ ವಾಚ್ಯಪಿ ಭಾಗ್ಯಂ ನಾಸ್ತಿ। ಫಲೇ ಭಾಗ್ಯಂ ನಾಸ್ತೀತಿ ಕಿಮು ವಕ್ತವ್ಯಮ್। ಸಕಲ ದೇವತಾನಾಂ ಧರ್ಮಸ್ಯ ಪರಬ್ರಹ್ಮ ತತ್ತ್ವಸ್ಯ ಚ ಪ್ರತಿಪಾದಕಂ ವೇದಮನುಚ್ಚಾರ್ಯ ಪರನಿಂದಾನೃತ ಕಲಹಾದಿ ಹೇತುಂ ಲೌಕಿಕೀಂ ವಾರ್ತಾಂ ಸರ್ವತ್ರೋಚ್ಚಾರಯತಃ ಸ್ಪಷ್ಟ ಏವ ವಾಚಿ ಭಾಗ್ಯಾಭಾವಃ। ಅತ ಏವಾಮ್ನಾಯತೇ। ''ನಾನುಧ್ಯಾಯಾದ್ಬಹೂಞ್ ಶಬ್ದಾನ್ ವಾಚೋ ವಿಗ್ಲಾಪನಂ ಹಿ ತತ್''—ಇತಿ (ಶತಪಥ ಬ್ರಾಹ್ಮಣಂ)।

[ಈ (ನಾಲ್ಕು) ವೇದಗಳಲ್ಲಿ ಲ್ಲವನ್ನೋ, ಒಂದನ್ನೋ ತನ್ನ ಯೋಗ್ಯತೆಗನುಸಾರವಾಗಿ ಅಧ್ಯಯನಮಾಡುವುದು ಉಪನಯನ ಹೊಂದಿದವನಿಗೆ ಕರ್ತವ್ಯವು. ಯಾಜ್ಞವಲ್ಕ್ಯರು ಹೀಗೆ ಹೇಳಿದ್ದಾರೆ:—''ನಾಲ್ಕು (ಅಥವಾ ಮೂರು) ವೇದಗಳನ್ನಾಗಲಿ, ಎರಡನ್ನಾಗಲಿ, ಒಂದ ನ್ನಾಗಲಿ ಕ್ರಮವಾಗಿ ಅಧ್ಯಯನ ಮಾಡತಕ್ಕದು.'' ಒಂದು ವೇದವೆಂದರೆ ದ್ವಿಜನಿಗೆ ತಾತ ತಂದೆ ಮೊದಲಾದವರುಗಳಿಂದ ಪರಂಪರೆಯಾಗಿ ಬಂದಿರತಕ್ಕದು. ''ಸ್ವಾಧ್ಯಾಯೋಽಧ್ಯೇ ತವ್ಯಃ'' ಎಂಬ ವಿಧಿಯಲ್ಲಿಯು ''ಸ್ವ'' ಶಬ್ದಕ್ಕೆ ಇದೇ ಅರ್ಥವು. ಇಂಥಾ ಸ್ವಶಾಖಾ ಧ್ಯಯನವು ನಿತ್ಯಧರ್ಮ, ಕಾಮ್ಯವಲ್ಲ. ಪುರುಷಾರ್ಥಾನುಶಾಸನದಲ್ಲಿ—ವೇದಾಧ್ಯಯನವನ್ನು

ಬಿಟ್ಟರೆ ಪಾತಕ, ಆದಕಾರಣ ಆ ಅಧ್ಯಯನವು ನಿತ್ಯಕರ್ತವ್ಯ ಎಂದು ಹೇಳಿದೆ. ವೇದವೂ ಹೀಗೆಯೇ ಹೇಳಿದೆ:—''ಅಧ್ಯಯನ ಮಾಡಿದವನು ಪಾಪಗಳನ್ನು ಕಳೆದುಕೊಂಡು ದೇವತೆಗಳಂತೆ ಪವಿತ್ರನಾಗುವನು. ಯಾರು ಅದನ್ನು ಮಾಡುವುದಿಲ್ಲವೋ ಅವನಿಗೆ ವಾಗ್ವಿಭವವೂ ಇಲ್ಲ; ಸ್ವರ್ಗವೂ ಇಲ್ಲ. ಹಿತಕಾರಿಯಾದ ಸ್ನೇಹಿತನಂತೆ ತನ್ನನ್ನು ಪರಿಪಾಲಿಸಬಲ್ಲ ವೇದವನ್ನು ಯಾರು ತ್ಯಜಿಸುತ್ತಾನೆಯೋ ಅವನು ವಾಕ್ಕಿನಲ್ಲಿ ಕೂಡ ನಿರ್ಭಾಗ್ಯನು. ಅವನು ಕೇಳುವುದೆಲ್ಲವೂ ವ್ಯರ್ಥಾಲಾಪಗಳು ; ಅವನಿಗೆ ಪುಣ್ಯದ ದಾರಿಯು ತಿಳಿಯಲಾರದು.''

ಸಕಲ ದೇವತೆಗಳ ವಿಚಾರವನ್ನೂ, ಧರ್ಮ ವಿಚಾರವನ್ನೂ, ಪರಬ್ರಹ್ಮ ವಿಚಾರವನ್ನೂ ಸಹ ಪ್ರತಿಪಾದನೆ ಮಾಡುವುದಾದ ವೇದವನ್ನು ಅಧ್ಯಯನ ಮಾಡದೆ, ಪರನಿಂದೆ ಅನೃತ ಕಲಹಾದಿಗಳಿಗೆ ಕಾರಣವಾಗಿರುವ ಲೋಕದ ಹರಟೆಯಲ್ಲಿಯೇ ಯಾವಾಗಲೂ ಇರತಕ್ಕವನಿಗೆ ವಾಗೈಶ್ವರ್ಯವು ದೊರೆಯಲಾರದೆಂಬುದು ಸ್ಪಷ್ಟವೇ ಆಗಿದೆ. ಆದುದರಿಂದಲೇ ''ಬಹು ಮಾತನ್ನಾಡಬಾರದು ; ಅದು ವಾಗ್ದೇವತೆಗೆ ಆಯಾಸವೇ ಅಲ್ಲವೆ?'' ಎಂದು ವೇದದಲ್ಲಿ ಹೇಳಿದೆ.]

## ಅರ್ಥಜ್ಞಾನವಿಲ್ಲದಿದ್ದರೆ ವ್ಯರ್ಥ

**ಅರ್ಥಜ್ಞಾನೇ ಪುರುಷಪ್ರವೃತ್ತಿಕರಂ ವಚನದ್ವಯಂ ಶಾಖಾಂತರಗತಂ ನಿರುಕ್ತಕಾರೋ ಯಾಸ್ಕ ಏವಮುದಾಜಹಾರ। ಅಥಾಪಿ ಜ್ಞಾನ ಪ್ರಶಂಸಾ ಭವತ್ಯಜ್ಞಾನನಿಂದಾ ಚ।**

**ಸ್ಥಾಣುರಯಂ ಭಾರಹಾರಃ ಕಿಲಾಭೂ**
**ದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ।**
**ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ**
**ನಾಕಮೇತಿ ಜ್ಞಾನ ವಿಧೂತ ಪಾಪ್ಮಾ ॥**
**ಯದ್ಗೃಹೀತಮವಿಜ್ಞಾತಂ ನಿಗದೇನೈವ ಶಬ್ದ್ಯತೇ।**
**ಅನಗ್ನಾವಿವ ಶುಷ್ಕೈಧೋ ನ ತಜ್ಜ್ವಲತಿ ಕರ್ಹಿಚಿತ್ ॥—ಇತಿ**

**....ಇತ್ಥಂ ಯಾಸ್ಕೇನ ಜ್ಞಾನಸ್ತುತ್ಯಜ್ಞಾನ ನಿಂದೋದಾಹರಣಸ್ಯ ಪ್ರಪಂಚಿತತ್ವಾತ್। ಯಚ್ಚ ಸ್ತೂಯತೇ ತದ್ವಿಧೀಯತ ಇತಿ ನ್ಯಾಯೇನಾಧ್ಯಯನವದರ್ಥಜ್ಞಾನಸ್ಯಾಪಿ ವಿಧಿರಭ್ಯುಪಗಂತವ್ಯಃ ॥**

[ವೇದಾರ್ಥದ ವಿಷಯದಲ್ಲಿ ಜನರಿಗೆ ಆಸಕ್ತಿಯನ್ನುಂಟಾಗಿಸುವ ಎರಡು ವಾಕ್ಯಗಳನ್ನು ಯಾಸ್ಕ ಮುನಿಗಳು ತಮ್ಮ ನಿರುಕ್ತ ಗ್ರಂಥದಲ್ಲಿ ಉದಾಹರಿಸಿದ್ದಾರೆ. ಅವು ಇವು:—(೧) ''ಯಾರು ವೇದದ ವಚನಗಳನ್ನು ಮಾತ್ರ ಕಲಿತು, ಅದರ ಅರ್ಥವನ್ನರಿತುಕೊಳ್ಳುವುದಿಲ್ಲವೋ ಅವನು ಭಾರವನ್ನು ಹೊತ್ತ ಕಂಭವೇ ಅಲ್ಲವೆ? ಯಾರು ಅರ್ಥವನ್ನು ಬಲ್ಲನೋ ಅವನು ಎಲ್ಲ ಶುಭಗಳನ್ನೂ ಪಡೆಯುವನಲ್ಲದೆ, ಜ್ಞಾನದಿಂದ ತನ್ನ ಪಾಪಗಳನ್ನು

ಕಳೆದುಕೊಂಡು ಸ್ವರ್ಗವನ್ನು ಸೇರುವನು,'' (೨) ''ಅರ್ಥಜ್ಞಾನವಿಲ್ಲದೆ ಬಾಯಿಂದ ಮಾತ್ರ ಗ್ರಹಿಸಲ್ಪಟ್ಟು ಉಚ್ಚರಿಸಲ್ಪಡುವ ವೇದವು ಬೂದಿಯಲ್ಲಿ ಹಾಕಿದ ಸೌದೆಯಂತೆ. ಅದು ಎಂದಿಗೂ ಪ್ರಜ್ವಲಿಸಲಾರದು.''—ಹೀಗೆ ಯಾಸ್ಕರು ಜ್ಞಾನದ ಪ್ರಾಶಸ್ತ್ಯವನ್ನೂ ಅಜ್ಞಾನದ ನಿಂದ್ಯತೆಯನ್ನೂ ತೋರಿಸಿಕೊಟ್ಟಿದ್ದಾರೆ. ಯಾವುದು ಸ್ತೋತ್ರಮಾಡಲ್ಪಟ್ಟಿದೆಯೋ ಅದೇ ನಮಗೆ ಕರ್ತವ್ಯ ಎಂಬ ನ್ಯಾಯಕ್ಕನುಸಾರವಾಗಿ, ವೇದಾಧ್ಯಯನದ ಜೊತೆಗೆ ತದರ್ಥಜ್ಞಾನವನ್ನೂ ಸಂಪಾದಿಸಬೇಕೆಂಬುದೇ ನಾವು ಒಪ್ಪಬೇಕಾದ ನಿಯಮ.]

## ವೇದದಲ್ಲಿರುವ ವಿಷಯಗಳು

ವೇದೇ ಪೂರ್ವೋತ್ತರ ಕಾಂಡಯೋಃ ಕ್ರಮೇಣ ಧರ್ಮ ಬ್ರಹ್ಮಣೀ ವಿಷಯಃ। ತಯೋರನನ್ಯ ಲಭ್ಯತ್ವಾತ್। ತಥಾ ಚ ಪುರುಷಾರ್ಥಾನುಶಾಸನೇ ಸೂತ್ರಿತಮ್। ''ಧರ್ಮ ಬ್ರಹ್ಮಣೀ ವೇದೈಕವೇದ್ಯೇ''—ಇತಿ। ಜೈಮಿನೀಯೇ ಚ ದ್ವಿತೀಯ ಸೂತ್ರೇ ಚೋದನೈವ ಧರ್ಮಪ್ರಮಾಣಂ। ಚೋದನಾ ಪ್ರಮಾಣಮೇವೇತಿ ನಿಯಮದ್ವಯಂ ಸಂಪ್ರದಾಯವಿದ್ಭಿರಭಿಹಿತಮ್। ಚೋದನೈವೇ ತ್ಯಮುಮರ್ಥ ಮುಪಪಾದಯಿತುಂ ಚತುರ್ಥ ಸೂತ್ರೇ ಪ್ರತ್ಯಕ್ಷ ವಿಷಯತ್ವಂ ಧರ್ಮಸ್ಯ ನಿರಾಕೃತಮ್। ಪ್ರತ್ಯಕ್ಷಮನಿಮಿತ್ತಂ ವಿದ್ಯಮಾನೋಪಲಂಭನತ್ವಾತ್—ಇತಿ (ಪೂ. ಮೀ.)। ಅನುಷ್ಠಾನಾದೂರ್ಧ್ವ ಮುತ್ಪತ್ಸ್ಯಮಾನಸ್ಯ ಧರ್ಮಸ್ಯ ಪೂರ್ವಮವಿದ್ಯಮಾನತ್ವಾನ್ನಪ್ರತ್ಯಕ್ಷ ಯೋಗ್ಯತಾಸ್ತಿ। ಉತ್ತರ ಕಾಲೇऽಪಿ ರೂಪಾದಿ ರಾಹಿತ್ಯಾನ್ನೇಂದ್ರಿಯೈ ರವಗಮ್ಯತೇ। ಅತ ಏವಾದೃಷ್ಟಮಿತಿ ಸರ್ವೈರಭಿಧೀಯತೇ। ಲಿಂಗರಾಹಿತ್ಯಾನ್ನಾನುಮಾನ ವಿಷಯತ್ವಮಪ್ಯಸ್ತಿ। ಸುಖದುಃಖೇ ಧರ್ಮಾಧರ್ಮಯೋರ್ಲಿಂಗಮಿತಿಚೇತ್। ಬಾಢಮ್। ಅಯಮಪಿ ಲಿಂಗಲಿಂಗಿ ಭಾವೋ ವೇದೇನೈವ ಗಮ್ಯತೇ। ತತಶ್ಚೋದನೈವ ಧರ್ಮೇ ಪ್ರಮಾಣಂ ॥

ವೈಯಾಸಿಕಸ್ಯ ತೃತೀಯ ಸೂತ್ರಸ್ಯ ದ್ವಿತೀಯವರ್ಣಕೇ ಬ್ರಹ್ಮಣಃ ಸಿದ್ಧವಸ್ತುನೋऽಪಿ ಶಾಸ್ತ್ರೈಕವಿಷಯತ್ವಂ ಭಾಷ್ಯಕೃದ್ಭಿರ್ವ್ಯಾಖ್ಯಾತಂ। ಶಾಸ್ತ್ರಾದೇವ ಪ್ರಮಾಣಾಜ್ಜಗತೋ ಜನ್ಮಾದಿಕಾರಣಂ ಬ್ರಹ್ಮಾಧಿಗಮ್ಯತ ಇತ್ಯಭಿಪ್ರಾಯ ಇತಿ। ಶ್ರುತಿಶ್ಚ ಭವತಿ। ''ನಾऽವೇದವನ್ಮನುತೇ ತಂ ಬೃಹಂತಂ''—ಇತಿ। ತತ್ರೋಪಪತ್ತಿಃ ಪೂರ್ವಾಚಾರ್ಯೈರೇವ ಮುದೀರಿತಾ। ರೂಪಲಿಂಗಾದಿ ರಾಹಿತ್ಯಾ ನ್ನಾಸ್ಯಮಾನಾಂತರ ಯೋಗ್ಯತೇತಿ। ತಸ್ಮಾದನನ್ಯ ಲಭ್ಯತ್ವಾದಸ್ತಿ ಧರ್ಮ ಬ್ರಹ್ಮಣೋ ರ್ವೇದವಿಷಯತ್ವಮ್ ॥

[ವೇದದ (೧) ಪೂರ್ವ ಕಾಂಡ, (೨) ಉತ್ತರ ಕಾಂಡಗಳಿಗೆ ಕ್ರಮವಾಗಿ—(೧) ಧರ್ಮ, (೨) ಬ್ರಹ್ಮ—ಇವು ವಿಷಯಗಳು. ಈ ವಿಷಯಗಳು ಮತ್ತೆಲ್ಲಿಯೂ ದೊರೆಯಲಾರವು. ಇದನ್ನು ಜೈಮಿನಿಗಳೂ ಇತರ ಸಂಪ್ರದಾಯಜ್ಞರೂ ತಿಳಿಸಿದ್ದಾರೆ. ಈ ಎರಡು ವಿಷಯ

ಗಳಲ್ಲಿ ಧರ್ಮವೆಂಬುದು ಅಪ್ರತ್ಯಕ್ಷವಾದುದು. ಅದು ಕರ್ಮಾನುಷ್ಠಾನದಿಂದ ಹುಟ್ಟತಕ್ಕುದು; ಅನುಷ್ಠಾನಕ್ಕೆ ಮುಂಚೆ ಅದಿರುವುದಿಲ್ಲ. ಹುಟ್ಟಿದ ಮೇಲೆಯೂ ಅದಕ್ಕೆ ರೂಪವಿಲ್ಲದುದರಿಂದ ಅದು ಇಂದ್ರಿಯಗೋಚರವಾಗುವುದಿಲ್ಲ. ಆದುದರಿಂದಲೇ ಅದನ್ನು ಎಲ್ಲರೂ "ಅದೃಷ್ಟ" ಎಂದು ಕರೆಯುತ್ತಾರೆ. ಅದಕ್ಕೆ ಗುರುತಾವುದೂ ಇಲ್ಲವಾದುದರಿಂದ ಅದನ್ನು ಊಹಿಸಿ ತಿಳಿಯುವುದೂ ಸಾಧ್ಯವಲ್ಲ. ಸುಖದುಃಖಗಳು ಧರ್ಮಾಧರ್ಮಗಳ ಗುರುತಲ್ಲವೆ?—ಎಂದರೆ, ಹೌದು, ಆದರೆ, ಧರ್ಮಾಧರ್ಮಗಳಿಗೂ ಸುಖದುಃಖಗಳಿಗೂ ಸಂಬಂಧವುಂಟೆಂಬುದನ್ನು ತಿಳಿಸುವುದು ವೇದವೇ. ಆದಕಾರಣ ವೇದವಾಕ್ಯವೇ ಧರ್ಮ ವಿಚಾರದಲ್ಲಿ ಪ್ರಮಾಣವು.

ಇನ್ನು, ಸ್ವತಃಸಿದ್ಧವೇ ಆಗಿರುವ ಬ್ರಹ್ಮವಸ್ತುವಿನ ವಿಚಾರವಾದರೂ ಸಹ ವೇದದಿಂದಲೇ ತಿಳಿಯಬೇಕಾದುದಾಗಿದೆ. ಇದನ್ನು ವ್ಯಾಸರು ಸೂತ್ರದಲ್ಲಿಯೂ ಶಂಕರಾಚಾರ್ಯರು ಭಾಷ್ಯದಲ್ಲಿಯೂ ತೋರಿಸಿದ್ದಾರೆ. ವೇದವಂತನಲ್ಲದವನು ಬ್ರಹ್ಮವನ್ನರಿಯಲಾರನೆಂದು ವೇದವೇ ಸಾರುತ್ತದೆ. ಬ್ರಹ್ಮಕ್ಕೆ ರೂಪವೂ ಗುರುತುಗಳೂ ಇಲ್ಲವಾದಕಾರಣ ವೇದದ ವಿನಾ ಇತರ ಮಾರ್ಗದಿಂದ ಅದನ್ನು ತಿಳಿದುಕೊಳ್ಳಲಾಗಲಾರದೆಂದು ಪೂರ್ವಾಚಾರ್ಯರುಗಳು ಹೇಳಿದ್ದಾರೆ. ಹೀಗೆ ವೇದವೊಂದರಿಂದಲೇ ತಿಳಿದುಕೊಳ್ಳಲಾಗತಕ್ಕ ವಿಷಯಗಳು ಧರ್ಮ ಬ್ರಹ್ಮಗಳೆರಡು.]

ತದುಭಯ ಜ್ಞಾನಂ ವೇದಸ್ಯ ಸಾಕ್ಷಾತ್ಪ್ರಯೋಜನಂ। ನ ಚ ತಸ್ಯ ಜ್ಞಾನಸ್ಯ ಸಪ್ತದ್ವೀಪಾ ವಸುಮತೀ ರಾಜಾನೌ ಗಚ್ಛತೀತ್ಯಾದಿ ಜ್ಞಾನವದಪುರುಷಾರ್ಥ ಪರ್ಯವಸಾಯಿತ್ವಂ ಶಂಕನೀಯಮ್। ಧರ್ಮಪ್ರಯುಕ್ತಸ್ಯ ಪುರುಷಾರ್ಥಸ್ಯ ಸ್ತೂಯಮಾನತ್ವಾತ್। "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ ಲೋಕೇ ಧರ್ಮಿಷ್ಠಂ ಪ್ರಜಾ ಉಪಸರ್ಪಂತಿ ಧರ್ಮೇಣ ಪಾಪಮಪನುದತಿ ಧರ್ಮೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ಧರ್ಮಂ ಪರಮಂ ವದಂತಿ"—ಇತಿ (ತೈ. ಆ.)। ಉದ್ದಂಡಸ್ಯ ರಾಜ್ಞೋ ನಿಯಾಮಕತ್ವಾದ್ವಿವದಮಾನಯೋಃ ಪುರುಷಯೋರ್ಮಧ್ಯೇ ದುರ್ಬಲಸ್ಯಾಪಿ ರಾಜಸಾಹಾಯ್ಯೇವ ಜ್ಜಯ ಹೇತುತ್ವಾಚ್ಚ ಧರ್ಮಃ ಪುರುಷಾರ್ಥಃ। ತಥಾ ಚ ವಾಜಸನೇಯಿನಃ ಸೃಷ್ಟಿಪ್ರಕರಣೇ ಸಮಾಮನಂತಿ। "ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ ತದೇತತ್ ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ಪರಂ ನಾಸ್ತ್ಯಥೋ ಅಬಲೀಯಾನ್ ಬಲೀಯಾಂಸಮಾಶಂಸತೇ ಧರ್ಮೇಣ ಯಥಾ ರಾಜ್ಞೈವಂ"—ಇತಿ (ಶತ. ಬ್ರಾ.)। "ಬ್ರಹ್ಮವಿದಾಪ್ನೋತಿ ಪರಂ" (ತೈ. ಆ.), "ಬ್ರಹ್ಮವೇದ ಬ್ರಹ್ಮೈವ ಭವತಿ ತರತಿ ಶೋಕಮಾತ್ಮವಿತ್" (ಛಾಂದೋಗ್ಯ)—ಇತ್ಯಾದಿ ಶ್ರುತಿಷು ಬ್ರಹ್ಮಜ್ಞಾನ ಪ್ರಯುಕ್ತ ಪುರುಷಾರ್ಥಃ ಪ್ರಸಿದ್ಧಃ। ತದುಭಯ ಜ್ಞಾನಾರ್ಥೀ ವೇದೇಽಧಿಕಾರೀ। ಸ ಚ ತ್ರೈವರ್ಣಿಕಃ ಪುರುಷಃ। ಸ್ತ್ರೀಶೂದ್ರಯೋಸ್ತು ಸತ್ಯಾಮಪಿ ಜ್ಞಾನಾಪೇಕ್ಷಾಯಾ ಮುಪನಯನಾಭಾವೇನಾಧ್ಯಯನ

**ರಾಹಿತ್ಯಾ ದ್ವೇದೇಽಧಿಕಾರಃ ಪ್ರತಿಷಿದ್ಧಃ। ಧರ್ಮಬ್ರಹ್ಮಜ್ಞಾನಂ ತು ಪುರಾಣಾದಿಮುಖೇನೋತ್ಪಾದ್ಯತೇ । ತಸ್ಮಾತ್ತ್ರೈವರ್ಣಿಕ ಪುರುಷಾಣಾಂ ವೇದಮುಖೇನಾ ರ್ಥಜ್ಞಾನೇಽಧಿಕಾರಃ ॥**

[ಧರ್ಮ ಬ್ರಹ್ಮಗಳೆರಡನ್ನೂ ಕುರಿತ ತಿಳಿವಳಿಕೆಯೇ ವೇದದಿಂದ ಸಾಕ್ಷಾತ್ತಾಗಿ ಆಗುವ ಪ್ರಯೋಜನ. "ಭೂಲೋಕವು ಏಳು ದ್ವೀಪಗಳುಳ್ಳದು," "ಈ ರಾಜನು ಹೋಗುತ್ತಾನೆ"—ಎಂಬಂಥಾ ಲೋಕವಾರ್ತೆಯ ಜ್ಞಾನದಂತೆಯೇ ವೇದಾರ್ಥಜ್ಞಾನವೂ ಪರಮ ಪುರುಷಾರ್ಥದಲ್ಲಿ ಪರ್ಯವಸಾನ ಹೊಂದತಕ್ಕುದಲ್ಲವೆಂದು ಸಂದೇಹಪಡಕೂಡದು. ಏಕೆಂದರೆ, ಧರ್ಮಪ್ರಯುಕ್ತವಾದ ಪುರುಷಾರ್ಥವನ್ನು ವೇದವು ಹೊಗಳಿದೆ. ತೈತ್ತಿರೀಯವು ಹೀಗೆ ಹೇಳುತ್ತದೆ:—"ಧರ್ಮವೇ ಸಮಸ್ತ ಜಗತ್ತಿಗೂ ಆಧಾರವು; ಲೋಕದಲ್ಲಿ ಜನರು ಧರ್ಮಿಷ್ಠನನ್ನು ಆಶ್ರಯಿಸುತ್ತಾರೆ. ಧರ್ಮದಿಂದ ಪಾಪವನ್ನು ದೂರಮಾಡಲಾಗುತ್ತದೆ; ಎಲ್ಲವೂ ಧರ್ಮದಲ್ಲಿ ನಿಂತಿರುವುದು; ಆದುದರಿಂದ ಧರ್ಮವನ್ನು ಸರ್ವೋತ್ಕೃಷ್ಟವೆನ್ನುತ್ತಾರೆ." ಶಸ್ತ್ರಾಸ್ತ್ರ ಸಂಪನ್ನನಾದ ರಾಜನೂ ಧರ್ಮಕ್ಕೆ ವಿಧೇಯನಾಗಿರುತ್ತಾನೆ. ಜಗಳವಾಡುತ್ತಿರುವ ಇಬ್ಬರಲ್ಲಿ ಒಬ್ಬನು ದುರ್ಬಲನಾಗಿದ್ದರೂ ಅವನು ಧರ್ಮದ ಪ್ರಭಾವದಿಂದ ರಾಜಸಹಾಯವುಳ್ಳವನಂತೆ ಜಯವನ್ನು ಪಡೆಯುವನು; ಹೀಗೆ ಧರ್ಮವೇ ಪರಮ ಪುರುಷಾರ್ಥವು. ಇದನ್ನೇ ವಾಜಸನೇಯಿಗಳು ಸೃಷ್ಟಿಪ್ರಕರಣದಲ್ಲಿ ಸಾರಿದ್ದಾರೆ. ಅದು ಹೇಗೆಂದರೆ.—"ಜಗದೀಶ್ವರನು ಶ್ರೇಯಸ್ಕರವಾದ ರೂಪವುಳ್ಳ ಧರ್ಮವನ್ನು ಸೃಜಿಸಿದನು. ಅದೇ ಕ್ಷತ್ರಿಯನ ಕ್ಷತ್ರ ಗುಣ. ಧರ್ಮಕ್ಕಿಂತ ಉತ್ತಮವಾದುದೇನೂ ಇಲ್ಲ. ಅದರ ಶಕ್ತಿಯಿಂದಲೇ ಬಲವಿಲ್ಲದವನು ಬಲಿಷ್ಠನನ್ನು ಕುರಿತು ರಾಜನಂತೆ ಆಜ್ಞಾಪಿಸಬಹುದು." ಇಷ್ಟು ಧರ್ಮದ ವಿಚಾರವಾಯಿತು. ಬ್ರಹ್ಮ ವಿಚಾರದಲ್ಲಿಯೂ ಹೀಗೆಯೇ ವೇದವಾಕ್ಯಗಳುಂಟು. "ಬ್ರಹ್ಮವನ್ನರಿತವನು ಉತ್ತಮಗತಿಯನ್ನೈದುವನು," "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುವನು," "ಆತ್ಮಜ್ಞನು ಶೋಕವನ್ನು ದಾಟುವನು"—ಈ ಬಗೆಯ ವಾಕ್ಯಗಳಲ್ಲಿ ಬ್ರಹ್ಮಜ್ಞಾನರೂಪವಾದ ಪುರುಷಾರ್ಥವು ಪ್ರಸಿದ್ಧವಾಗಿದೆ. ಈ ಧರ್ಮಜ್ಞಾನ ಬ್ರಹ್ಮಜ್ಞಾನಗಳೆರಡನ್ನೂ ಅಪೇಕ್ಷಿಸುವವನೇ ವೇದವಿದ್ಯಾಭ್ಯಾಸಕ್ಕೆ ಯೋಗ್ಯನ. ಅವನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ—ಎಂಬ ಮೂರು ವರ್ಣಗಳಲ್ಲೊಂದಕ್ಕೆ ಸೇರಿದವನು. ಸ್ತ್ರೀಯರಿಗೂ ಶೂದ್ರರಿಗೂ ಇಂಥಾ ಜ್ಞಾನದ ಅಪೇಕ್ಷೆಯಿದ್ದರೂ, ಅವರುಗಳಿಗೆ ಉಪನಯನವಿಲ್ಲದ ಕಾರಣ ಅಧ್ಯಯನವಿಲ್ಲವಾದುದರಿಂದ ವೇದದಲ್ಲಿ ಅಧಿಕಾರವಿಲ್ಲವೆಂದು ಹೇಳಲ್ಪಟ್ಟಿದೆ. ಅವರಿಗೆ ಧರ್ಮ ಬ್ರಹ್ಮಜ್ಞಾನವು ಪುರಾಣಾದಿಗಳ ಮೂಲಕವುಂಟಾಗುತ್ತದೆ. ತ್ರೈವರ್ಣಿಕರಿಗೆ ಅದು ವೇದಾರ್ಥಜ್ಞಾನದ ಮೂಲಕ.]

## ಅಪರಾ ವಿದ್ಯೆ ಪರಾ ವಿದ್ಯೆ

**ಅತಿಗಂಭೀರಸ್ಯ ವೇದಸ್ಯಾರ್ಥಮವಬೋಧಯಿತುಂ ಶಿಕ್ಷಾದೀನಿ ಷಡಂಗಾನಿ ಪ್ರವೃತ್ತಾನಿ । ಅತ ಏವ ತೇಷಾ ಮಪರವಿದ್ಯಾರೂಪತ್ವಂ ಮುಂಡಕೋಪನಿಷದ್ಯಾಥ**

ರ್ವಣಿಕಾ ಆಮನಂತಿ। "ದ್ವೇ ವಿದ್ಯೇ ವೇದಿತವ್ಯೇ ಇತಿ ಹ ಸ್ಮ ಯದ್ಬ್ರಹ್ಮವಿದೋ ವದಂತಿ ಪರಾ ಚೈವಾಪರಾ ಚ। ತತ್ರಾಪರಾ ಋಗ್ವೇದೋ ಯಜುರ್ವೇದಃ ಸಾಮವೇದೋ ಽಥರ್ವವೇದಃ। ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ ಜ್ಯೋತಿಷಮಿತಿ। ಅಥ ಪರಾ ಯಯಾ ತದಕ್ಷರಮಧಿಗಮ್ಯತ"—ಇತಿ। ಸಾಧನಭೂತ ಧರ್ಮ ಜ್ಞಾನ ಹೇತುತ್ವಾತ್ ಷಡಂಗ ಸಹಿತಾನಾಂ ಕರ್ಮಕಾಂಡಾನಾಮಪರವಿದ್ಯಾತ್ವಮ್। ಪರಮಪುರುಷಾರ್ಥಭೂತ ಬ್ರಹ್ಮಜ್ಞಾನ ಹೇತುತ್ವಾದುಪನಿಷದಾಂ ಪರವಿದ್ಯಾತ್ವಂ॥

[ಬಹು ಆಳವಾಗಿರುವ ವೇದದ ಅರ್ಥವನ್ನು ತಿಳಿಸಿಕೊಡಲು ಶಿಕ್ಷೆ ಮೊದಲಾದ ಷಡಂಗಗಳು ಹೊರಟಿವೆ. ಅವುಗಳನ್ನು ಅಪರ ವಿದ್ಯೆಯೆಂದು ಆಥರ್ವಣಿಕರು ಮುಂಡಕೋಪನಿಷತ್ತಿನಲ್ಲಿ ಬಣ್ಣಿಸಿದ್ದಾರೆ. ಹೇಗೆಂದರೆ:—ತಿಳಿದುಕೊಳ್ಳತಕ್ಕವಾದ ವಿದ್ಯೆಗಳು ಎರಡು ಎಂದು ಬ್ರಹ್ಮವಿದರು ಹೇಳುತ್ತಾರೆ. ಅವುಗಳಲ್ಲಿ ಒಂದು "ಪರಾ"; ಇನ್ನೊಂದು "ಅಪರಾ". ಋಗ್ಯಜುಸ್ಸಾಮಾಥರ್ವಣಗಳೆಂಬ ವೇದಗಳು ನಾಲ್ಕೂ, ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಎಂಬ ಶಾಸ್ತ್ರಗಳಾರೂ ಸೇರಿ ಅಪರಾ ವಿದ್ಯೆಯೆನ್ನಿಸಿಕೊಳ್ಳುತ್ತವೆ. ಯಾವ ಜ್ಞಾನದಿಂದ ನಾಶರಹಿತವಾದ ಬ್ರಹ್ಮವನ್ನು ಸೇರಲಾಗುತ್ತದೆಯೋ ಅದು ಪರಾ ವಿದ್ಯೆ. ವೇದದ ಕರ್ಮಕಾಂಡವೂ ವೇದಾಂಗಗಳೂ ಬ್ರಹ್ಮಜ್ಞಾನಕ್ಕೆ ಸಾಧನವಾದ ಧರ್ಮಜ್ಞಾನಕ್ಕೆ ಕಾರಣಗಳಾದುದರಿಂದ ಅವುಗಳಿಗೆ ಅಪರಾ ವಿದ್ಯಾತ್ವವೂ, ಉಪನಿಷತ್ತುಗಳು ಪರಮಪುರುಷಾರ್ಥ ಸಾಧನವಾದ ಬ್ರಹ್ಮಜ್ಞಾನಕ್ಕೆ ಕಾರಣಗಳಾದುದರಿಂದ ಅವುಗಳಿಗೆ ಪರಾ ವಿದ್ಯಾತ್ವವೂ ಉಂಟಾಗಿವೆ.]

## ಉಪದೇಶ ಯೋಗ್ಯತೆ

ಏತೈಃ ಪುರಾಣಾದಿಭಿಶ್ಚತುರ್ದಶಭಿರ್ವಿದ್ಯಾಸ್ಥಾನೈರುಪಬೃಂಹಿತಾಯಾ ವಿದ್ಯಾಯಾ ಗ್ರಹಣೇ ಽಧಿಕಾರಿ ವಿಶೇಷಃ ಶಾಖಾಂತರಗತೈಶ್ಚತುರ್ಭಿರ್ಮಂತ್ರೈರುಪದರ್ಶಿತಃ। ತಾಂಶ್ಚ ಮಂತ್ರಾನ್ ಯಾಸ್ಕ ಉದಾಜಹಾರ। ತತ್ರಾಯಂ ಪ್ರಥಮೋ ಮಂತ್ರಃ।

ವಿದ್ಯಾ ಹ ವೈ ಬ್ರಾಹ್ಮಣ ಮಾಜಗಾಮ
ಗೋಪಾಯ ಮಾ ಶೇವಧಿಷ್ಟೇ ಽಹಮಸ್ಮಿ।
ಅಸೂಯಕಾಯಾ ನೃಜವೇಽಯತಾಯ
ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಮ್॥

—ಇತಿ। ವಿದ್ಯಾಭಿಮಾನಿನೀ ದೇವತಾ ಬ್ರಾಹ್ಮಣಮುಪದೇಷ್ಟಾರಮಾಚಾರ್ಯಮಾಗತ್ಯೈವಂ ಪ್ರಾರ್ಥಯಾಮಾಸ। ಹೇ ಬ್ರಾಹ್ಮಣ ಮಾಮನಧಿಕಾರಿಣೇ ಽನುಪದಿಶ್ಯ ಪಾಲಯ। ತವಾಹಂ ನಿಧಿವತ್ಪುರುಷಾರ್ಥ ಹೇತುರಸ್ಮಿ। ತಾದೃಶ್ಯಾಂ ಮಯಿ ಮದುಪದೇಷ್ಟರಿ ತ್ವಯಿ

ಚ ಯೋಽಸೂಯಾಂ ಕರೋತಿ ಯಶ್ಚಾರ್ಜವೇನ ವಿದ್ಯಾಂ ನಾಭ್ಯಸ್ಯತಿ ಯೋಽಪಿ ಸ್ನಾನಾಚಮನಾದ್ಯಾಚಾರ ನಿಯತೋ ನ ಭವತಿ ತಾದೃಶೇಭ್ಯಃ ಶಿಷ್ಯಾಭಾಸೇಭ್ಯೋ ಮಾ ನ ಬ್ರೂಯಾಃ। ತಥಾ ಸತಿ ತ್ವದ್ಧ್ಯದಯೇ ಸ್ಥಿತ್ವಾ ಫಲಪ್ರದಾ ಭವೇಯುಮ್ ॥ ಅಥ ದ್ವಿತೀಯೋ ಮಂತ್ರಃ।

ಯ ಆತೃಣತ್ತ್ಯವಿತಥೇನ ಕರ್ಣಾ
ವದುಃಖಂ ಕುರ್ವನ್ನಮೃತಂ ಸಂಪ್ರಯಚ್ಛನ್।
ತಂ ಮನ್ಯೇತ ಪಿತರಂ ಮಾತರಂ ಚ
ತಸ್ಮೈ ನ ದ್ರುಹ್ಯೇತ್ಕತಮಚ್ಚನಾಹ ॥

—ಇತಿ। ಪೂರ್ವಸ್ಮಿನ್ಮಂತ್ರೇ ಆಚಾರ್ಯಸ್ಯ ನಿಯಮಮಭಿಧಾಯಾಸ್ಮಿನ್ಮಂತ್ರೇ ಶಿಷ್ಯಸ್ಯ ನಿಯಮೋಽಭಿಧೀಯತೇ। ವಿತಥಮನೃತಮಪುರುಷಾರ್ಥಭೂತಂ ಲೌಕಿಕಂ ವಾಕ್ಯಂ। ತದ್ವಿಪರೀತಂ ಸತ್ಯಂ ವೇದವಾಕ್ಯ ಮವಿತಥಂ ತಾದೃಶೇನ ವಾಕ್ಯೇನ ಯ ಆಚಾರ್ಯಃ ಶಿಷ್ಯಸ್ಯ ಕರ್ಣಾವಾತೃಣತ್ತಿ ಸರ್ವತಸ್ತರ್ದನಂ ಪೂರಣಂ ಕರೋತಿ। ಉಪಸರ್ಗವಶಾದಾಚಿತ್ವಾಚ್ಚ ತೃಣತ್ತಿ ಧಾತೋರರ್ಥಾಂತರೇ ವೃತ್ತಿಃ। ಸರ್ವದಾ ವೇದಂ ಯಃ ಶ್ರಾವಯತೀತ್ಯರ್ಥಃ। ಕಿಂ ಕುರ್ವನ್। ಅದುಃಖಂ ಕುರ್ವನ್। ಮಂದಪ್ರಜ್ಞಸ್ಯ ಮಾಣವಕಸ್ಯಾದಾವರ್ಧರ್ಚಮೃಚಂ ವಾ ಗ್ರಹೀತುಮಶಕ್ತಸ್ಯ ಯಥಾ ದುಃಖಂ ನ ಭವತಿ ತಥಾ ಪಾದಂ ಪಾದೈಕದೇಶಂ ವಾ ಗ್ರಾಹಯನ್ ಕಿಂ ಚ। ಅಮೃತಂ ಸಂಪ್ರಯಚ್ಛನ್ ಅಮೃತತ್ವಸ್ಯ ದೇವತ್ವಜನ್ಮನೋ ಮೋಕ್ಷಸ್ಯ ವಾ ಪ್ರಾಪಕತ್ವಾದಮೃತಂ ವೇದಾರ್ಥಃ। ತಸ್ಯ ಪ್ರದಾನಂ ಕುರ್ವನ್। ತಂ ತಾದೃಶಮಾಚಾರ್ಯಂ ಸಚ್ಛಿಷ್ಯೋ ಮುಖ್ಯ ಮಾತಾಪಿತೃ ರೂಪಂ ಮನ್ಯೇತ। ಪೂರ್ವ ಸಿದ್ಧೌ ತು ಮಾತಾಪಿತರಾವಥಮಸ್ಯ ಮನುಷ್ಯ ಶರೀರಸ್ಯ ಪ್ರದಾನಾದಮುಖ್ಯೌ। ತಸ್ಮೈ ಮುಖ್ಯಮಾತಾಪಿತೃರೂಪಾಯಾಚಾರ್ಯಾಯೈಕಮಪಿ ದ್ರೋಹಂ ನ ಕುರ್ಯಾತ್॥ ಅಥ ತೃತೀಯೋ ಮಂತ್ರಃ।

ಅಧ್ಯಾಪಿತಾ ಯೇ ಗುರುಂ ನಾದ್ರಿಯಂತೇ
ವಿಪ್ರಾ ವಾಚಾ ಮನಸಾ ಕರ್ಮಣಾ ವಾ।
ಯಥೈವ ತೇ ನ ಗುರೋ ರ್ಭೋಜನೀಯಾ
ಸ್ತಥೈವ ತಾನ್ನ ಭುನಕ್ತಿ ಶ್ರುತಂ ತತ್ ॥

—ಇತಿ। ಯೇ ತ್ವಧಮಾ ವಿಪ್ರಾ ಗುರುಣಾಧ್ಯಾಪಿತಾಃ ಸಂತೋ ವಿನಯೋಕ್ತ್ಯಾ ತದೀಯಹಿತಚಿಂತನೇನ ಶುಶ್ರೂಷಯಾ ವಾ ಗುರುಂ ನಾದ್ರಿಯಂತೇ। ಆದರ ರಹಿತಾಸ್ತೇ ಶಿಷ್ಯಾ

ಭಾಸಾ ಗುರೋರ್ನ ಭೋಜನೀಯಾಃ। ಅನುಭವ ಯೋಗ್ಯಾ ನ ಭವಂತಿ। ನ ಹಿ ತೇಷು ಗುರುಃ ಕೃಪಾಂ ಕರೋತಿ। ಯಥೈವ ಗುರುಣಾ ತೇ ನ ಪಾಲನೀಯಾಸ್ತಥೈವ ತಾನಧರ್ಮಾ ಶಿಷ್ಯಾಂ ಸ್ತಚ್ಛೃತಂ ಗುರೂಪದಿಷ್ಟಂ ವೇದವಾಕ್ಯಂ ನ ಪಾಲಯತಿ। ಫಲಪ್ರದಂ ನ ಭವತೀತ್ಯರ್ಥಃ ॥ ಅಥ ಚತುರ್ಥೋ ಮಂತ್ರಃ।

ಯಮೇವ ವಿದ್ಯಾಃ ಶುಚಿಮಪ್ರಮತ್ತಂ
ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ।
ಯಸ್ತೇ ನ ದ್ರುಹ್ಯೇತ್ಕತಮಚ್ಚನಾಹ
ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ ॥

—ಇತಿ। ಹೇ ಆಚಾರ್ಯ ಯಮೇವ ಮುಖ್ಯ ಶಿಷ್ಯಂ ಶುಚಿತ್ವಾದಿ ಗುಣೋಪೇತಂ ಜಾನೀಯಾಃ। ಕಿಂ ಚ ಯೋ ಮುಖ್ಯ ಶಿಷ್ಯಸ್ತುಭ್ಯಂ ಕದಾಚಿದಪಿ ನ ದ್ರುಹ್ಯೇತ್। ತಸ್ಮೈ ತು ಮುಖ್ಯಶಿಷ್ಯಾಯ ತ್ವದೀಯ ನಿಧಿಪಾಲಕಾಯ ಹೇ ಬ್ರಹ್ಮನ್ ವೇದರೂಪಾಂ ಮಾಂ ವಿದ್ಯಾಂ ಬ್ರೂಯಾಃ। ಇತ್ಥಂ ವಿದ್ಯಾದೇವತಯಾ ಪ್ರಾರ್ಥಿತತ್ವಾ ದಾಚಾರ್ಯೇಣ ಮುಖ್ಯ ಶಿಷ್ಯಾಯ ವೇದವಿದ್ಯೋಪದೇಷ್ಟವ್ಯಾ ॥

ತದರ್ಥಮೃಗ್ವೇದೋऽಸ್ಮಾಭಿಃ ಷಡಂಗಾನುಸಾರೇಣ ವ್ಯಾಖ್ಯಾಯತೇ ॥

[ಹೀಗೆ (ವೇದಗಳು ನಾಲ್ಕು, ತದಂಗಗಳಾರು, ಪುರಾಣ, ನ್ಯಾಯ, ಮೀಮಾಂಸಾ, ಧರ್ಮಶಾಸ್ತ್ರ) ಈ ಹದಿನಾಲ್ಕು ವಿದ್ಯಾಸ್ಥಾನಗಳಿಂದ ಸಮೃದ್ಧವಾಗಿರುವ ವಿದ್ಯೆಯನ್ನು ಗ್ರಹಿಸಲು ಯಾರಿಗೆ ವಿಶೇಷಾಧಿಕಾರವುಂಟೆಂಬುದು ನಾಲ್ಕು ಮಂತ್ರಗಳಲ್ಲಿ ನಿರೂಪಿತವಾಗಿದೆ. ಅವನ್ನು ಯಾಸ್ಕರು ಉದಾಹರಿಸಿದ್ದಾರೆ. ಅವುಗಳಲ್ಲಿ ಮೊದಲನೆಯ ಮಂತ್ರವು ಹೀಗೆ ಹೇಳುತ್ತದೆ:—''ವಿದ್ಯಾದೇವಿಯು ಬ್ರಾಹ್ಮಣನ ಬಳಿಗೆ ಹೋಗಿ—'ಎಲೈ ಬ್ರಾಹ್ಮಣನೆ, ನನ್ನನ್ನು ನೀನು (ಅನಧಿಕಾರಿಗಳಿಗೆ ಉಪದೇಶಿಸದೆ) ಸಂರಕ್ಷಿಸಿಕೋ. ನಾನು ನಿನಗೆ ನಿಧಿಯಂತೆ (ಪುರುಷಾರ್ಥಸಾಧನಳಾಗಿ) ಇರುವೆನು. ಅಸೂಯೆಯುಳ್ಳವನಿಗೂ, ಅನೃತವಾದಿಗೂ, ಆಚಾರ ನಿಯಮವಿಲ್ಲದವನಿಗೂ ನನ್ನನ್ನು ಕಲಿಸಬೇಡ. ಈ ರೀತಿ ನೀನು ನಡೆದರೆ ನಾನು ನಿನ್ನಲ್ಲಿ ನಿಂತು ನಿನಗೆ ಫಲಪ್ರದಳಾಗುವೆನು'—ಹೀಗೆಂದು ಬೇಡಿಕೊಂಡಳು.''

ಎರಡನೆಯ ಮಂತ್ರವು ಹೀಗೆ:—'' ಸತ್ಯಮಯಗಳಾದ ವೇದಾಕ್ಷರಗಳನ್ನು ಪ್ರಯಾಸಪಡಿಸದಂತೆ ಕಿವಿಗಳಲ್ಲಿ ತುಂಬಿ, ದೇವತ್ವಮೋಕ್ಷಗಳನ್ನು ಕೊಡಬಲ್ಲ ವೇದಾರ್ಥವೆಂಬ ಅಮೃತವನ್ನು ಯಾರು ಅನುಗ್ರಹಿಸುತ್ತಾನೆಯೋ ಆತನನ್ನು ತಂದೆಯೆಂದೂ ತಾಯಿಯೆಂದೂ ತಿಳಿಯತಕ್ಕದು ; ಆತನಿಗೆ ಎಲ್ಲಿಯೂ ಎಂದಿಗೂ ದ್ರೋಹಮಾಡತಕ್ಕದಲ್ಲ.''

ಮೂರನೆಯ ಮಂತ್ರವು ಹೀಗಿದೆ :—'' ಯಾವ ಬ್ರಾಹ್ಮಣಾಧಮರು ವೇದವನ್ನು ಕಲಿತ ಬಳಿಕ ಕಲಿಸಿದ ಗುರುವನ್ನು ವಾಕ್ಕಿನಿಂದಲೂ ಮನಃಪೂರ್ವಕವಾಗಿಯೂ ಕಾರ್ಯರೂಪ

ದಲ್ಲಿಯೂ ಆದರಿಸುವುದಿಲ್ಲವೋ ಅಂಥವರನ್ನು ಆ ಗುರುವು ಪೋಷಿಸತಕ್ಕುದಲ್ಲ ; ಶ್ರುತಿಯೂ ಅಂಥವರನ್ನು ಪರಿಪಾಲಿಸದು.''

ಇನ್ನು ನಾಲ್ಕನೆಯ ಮಂತ್ರವು ಹೀಗಿದೆ :—''ಎಲೈ ಬ್ರಾಹ್ಮಣನೆ (ಆಚಾರ್ಯನೆ), ಯಾವ ಶಿಷ್ಯನು ಶುಚಿತ್ವವುಳ್ಳವನೋ, ಸೋಮಾರಿಯೂ ಉದಾಸೀನನೂ ಅಲ್ಲವೋ, ಮೇಧಾ ಶಕ್ತಿಯಿಂದ ಕೂಡಿರುವವನೋ ಮತ್ತು ಬ್ರಹ್ಮಚರ್ಯ ವ್ರತವನ್ನು ಆಚರಿಸುತ್ತಿರುವವನೋ ಅಂಥಾ ಸಚ್ಛಿಷ್ಯನಿಗೆ ನನ್ನನ್ನು ಉಪದೇಶಿಸು ; ಅಂಥವನು ನಿನ್ನ ಸರ್ವಸ್ವ ನಿಧಿಯಾದ ನನ್ನನ್ನು ಚೆನ್ನಾಗಿ ಕಾಪಾಡುವನು.''

ಹೀಗೆಂದು ವೇದವಿದ್ಯಾದೇವತೆಯು ವೇದೋಪಾಧ್ಯಾಯನನ್ನು ಕುರಿತು ಪ್ರಾರ್ಥನೆ ಮಾಡಿರುವಳು. ಆದಕಾರಣ ಆಚಾರ್ಯನಾದವನು ಈ ಮೇಲಿನ ಮಂತ್ರಗಳಲ್ಲಿ ಹೇಳಿರುವ ಮೇರೆಗೆ ವೇದವಿದ್ಯೆಯನ್ನು ಪದೇಶಿಸುವುದು ತಕ್ಕುದು.

ಆದಕ್ಕಾಗಿ ಈಗ ಋಗ್ವೇದಕ್ಕೆ ನಮ್ಮಿಂದ ಷಡಂಗಗಳಿಗನುಸಾರವಾಗಿ ವ್ಯಾಖ್ಯಾನ ಮಾಡಲಾಗುತ್ತದೆ.]

## ಸಾಯಣಸಿದ್ಧಾಂತ ವಿಚಾರ

ಸಾಯಣರು ಕೊಟ್ಟಿರುವ ಅರ್ಥಗಳನ್ನೂ ಪ್ರತಿಪಾದಿಸಿರುವ ಅಭಿಪ್ರಾಯಗಳನ್ನೂ ಕುರಿತು ನಾವು ವಿಚಾರಮಾಡುವಾಗ ವೇದಾರ್ಥ ವಿಷಯದಲ್ಲಿರಬಹುದಾದ ದೃಷ್ಟಿಭೇದವನ್ನು ಮನಸ್ಸಿಗೆ ತಂದುಕೊಳ್ಳುವುದು ಯುಕ್ತವಾಗಿದೆ. ವೇದವನ್ನು ಮೂರು ಪರಿಯಾಗಿ ಭಾವಿಸಬಹುದು : (೧) ಧರ್ಮನಿಬಂಧನೆಯೆಂದು, (೨) ಕವಿತಾನಿರ್ಝರಿಯೆಂದು, (೩) ಪೂರ್ವೇತಿಹಾಸವೆಂದು.

## ವೇದವಿಷಯದಲ್ಲಿ ಮೂರು ದೃಷ್ಟಿಗಳು

ಮಾನುಷ ಪ್ರಪಂಚಕ್ಕೆ ಅತೀತವಾಗಿದ್ದುಕೊಂಡು, ಮನುಷ್ಯ ಜೀವನವನ್ನು ಅಸಂಖ್ಯಾತ ರೀತಿಗಳಲ್ಲಿ ಪೋಷಿಸುತ್ತಲೂ ಪ್ರೇರಿಸುತ್ತಲೂ ನಿಗ್ರಹಿಸುತ್ತಲೂ ಇರುವ ದೇವತೆಗಳೆಂಬ ಅದೃಶ್ಯಶಕ್ತಿಗಳನ್ನು ಒಲಿಸಿಕೊಳ್ಳಲು ಯಾವ ರಹಸ್ಯೋಪಾಯಗಳು ತಕ್ಕುವೋ ಅವುಗಳನ್ನು ಬೋಧಿಸುವುದು ವೇದ—ಎಂಬುದು ಒಂದು ದೃಷ್ಟಿ.

ಮಾನವಕುಲದ ಮೂಲಪುರುಷರಲ್ಲಿ ಕವಿಪ್ರತಿಭೆಯನ್ನು ಪಡೆದಿದ್ದ ಕೆಲವರು, ಮೊದಮೊದಲು ಸೃಷ್ಟಿಯ ಅದ್ಭುತಗಳನ್ನು ಕಂಡೊಡನೆ

ತಮ್ಮಲ್ಲುದಿಸಿದ ಭಯ ವಿಸ್ಮಯಾದಿ ಭಾವನೆಗಳನ್ನೂ, ಕ್ರಮ ಕ್ರಮವಾಗಿ ತಮ್ಮಲ್ಲಿ ಬೆಳೆದ ವಿಶ್ವತತ್ತ್ವ ವಿವೇಚನೆಯನ್ನೂ ವಿವರಿಸಿ ನುಡಿದ ನುಡಿಗಳೇ ವೇದ—ಎಂಬುದಿನ್ನೊಂದು ದೃಷ್ಟಿ.

ಪುರಾತನಾರ್ಯರು ಎಲ್ಲೆಲ್ಲಿ ವಾಸಮಾಡಿದರು, ಹೇಗೆ ಹೇಗೆ ಜೀವನ ಸಂಪಾದಿಸಿಕೊಂಡರು, ಎಂಥೆಂಥ ಕಷ್ಟ ಕೊರತೆಗಳಿಗೂ ಆಶೆ ವಿಶ್ವಾಸಗಳಿಗೂ ವಶರಾಗಿದ್ದರು, ಯಾವ ಯಾವ ನಿಯಮ ನಿಷ್ಠೆಗಳನ್ನವ ಲಂಬಿಸಿದ್ದರು, ಇವೇ ಮೊದಲಾದ ಪ್ರಾಚೀನ ಜನ ಚರಿತ್ರೆಯ ವಿವರ ಗಳಿಗೆ ಗಣಿಯಂತಿರುವುದು ವೇದ—ಎಂಬುದು ಮತ್ತೊಂದು ದೃಷ್ಟಿ.

ಈ ಮೂರು ದೃಷ್ಟಿಗಳಲ್ಲಿ ಪರಸ್ಪರ ವಿರೋಧವೇನೂ ಇಲ್ಲ; ಮೂರಕ್ಕೂ ಅವಕಾಶ ಕಲ್ಪಿಸುವ ಅಂಶಗಳು ವೇದದಲ್ಲಿವೆ. ಆದರೆ ಸಾಯಣರ ದೃಷ್ಟಿಯು ಮುಖ್ಯವಾಗಿ ಮೊದಲನೆಯದು; ಅದರಲ್ಲಿ ಎರಡನೆಯದು ಸ್ವಲ್ಪಮಟ್ಟಿಗೆ ಆನುಷಂಗಿಕವಾಗಿ ಸೇರಿಕೊಂಡಿದೆ; ಮೂರನೆಯದು ಮಾತ್ರ ಅವರ, ಮತ್ತು ಆ ಕಾಲದ ಜನರ, ಮನಸ್ಸಿಗೆ ಹೊಳೆದಿರಲಿಲ್ಲವೆಂದೇ ಹೇಳಬೇಕು.

ಈ ಮೂರನೆಯ ದೃಷ್ಟಿಯನ್ನಿಟ್ಟುಕೊಂಡಿರುವವರಿಗೆ—ಎಂದರೆ ವಿಜ್ಞಾನಶಾಸ್ತ್ರಗಳನ್ನೂ ದೇಶ ವಿದೇಶ ಚರಿತ್ರೆಗಳನ್ನೂ ಅರಿತು, ವೈಜ್ಞಾನಿಕ ರೀತಿಯಿಂದ ಪೂರ್ವಾಪರ ಸಂಬಂಧ ವಿಚಾರವನ್ನು ನಡಿಸುವ ಪದ್ಧತಿಯುಳ್ಳ ಪಾಶ್ಚಾತ್ಯ ಪಂಡಿತರಿಗೂ, ತನ್ಮಾರ್ಗಚಾರಿಗಳಾದ ಭಾರತೀಯರಿಗೂ ಸಹ—ಸಾಯಣರ ಅಭಿಪ್ರಾಯಗಳಲ್ಲಿ ಕೆಲವು ಒಪ್ಪಿತವಾಗದೆ ಇರಬಹುದು. ಅವುಗಳಲ್ಲಿ ಉದಾಹರಣೆಗಾಗಿ ವೇದದ ನಿತ್ಯತ್ವ ಅಪೌರುಷೇಯತ್ವಗಳ ವಿಷಯದ ಮೇಲಣ ಸಾಯಣಮತವನ್ನು ತೆಗೆದುಕೊಳ್ಳೋಣ.

## ಶಬ್ದಾರ್ಥ

"ನಿತ್ಯ," "ಅಪೌರುಷೇಯ" ಎಂಬ ಪದಗಳಿಗೆ ಅಕ್ಷರಾರ್ಥವೊಂದುಂಟು, ತಾತ್ಪರ್ಯಾರ್ಥವೊಂದುಂಟು. ಸಾಯಣರು ಎರಡರ್ಥಗಳನ್ನೂ ಉದ್ದೇಶದಲ್ಲಿಟ್ಟುಕೊಂಡಿರುವಂತೆ ತೋರುತ್ತದೆ. ಆದರೆ, ಅವರ

ಅಕ್ಷರಾರ್ಥ ಸಮರ್ಥನೆಯೂ ಈ ಕಾಲಕ್ಕೆ ಒಪ್ಪುವಂತಿಲ್ಲ. ಆ ಅರ್ಥದ ವಿವರವೇನೆಂದರೆ—ವೇದಪುಂಜವೆಲ್ಲವೂ ಅದರ ಈಗಿನ ರೂಪದಲ್ಲಿ ಜಗತ್ಸೃಷ್ಟಿಗೆ ಹಿಂದಿನಿಂದಲೂ ಇದ್ದುಕೊಂಡುಬಂದಿದೆ; ಅದರ ನಾನಾ ಭಾಗಗಳಲ್ಲಿ ಯಾವ ವ್ಯತ್ಯಾಸಗಳೂ ಯಾವಾಗಲೂ ನಡೆದಿಲ್ಲ; ವಿಶ್ವಾಮಿತ್ರ ಯಾಜ್ಞವಲ್ಕ್ಯ ಮೊದಲಾದ ಋಷಿಗಳು ಹುಟ್ಟುವುದಕ್ಕೆ ಮೊದಲೇ ಆಯಾ ಋಷಿಗಳ ಹೆಸರುಗಳುಳ್ಳ ವೇದವಾಕ್ಯಗಳಿದ್ದುವು; ಎಂದರೆ ಅಂಥಾ ವಾಕ್ಯಗಳಲ್ಲಿ ಆಯಾ ಋಷಿಗಳಿದ್ದ ಕಾಲದ ಸಂಗತಿಗಳೇನೂ ಸೇರಿಲ್ಲ; ಅರ್ಥಾತ್, ನಾನಾ ಕಾಲ ನಾನಾ ದೇಶಗಳಲ್ಲಿ ಬಾಳಿದ ಮಹರ್ಷಿಗಳ ದ್ವಾರಾ ಲೋಕದಲ್ಲಿ ಪ್ರಚಾರವಾಗಿರುವ (ಅವರಿಂದ "ಸೃಷ್ಟಿಯಾಗಿರುವ" ಎಂದಲ್ಲ) ವೇದ ಭಾಗಗಳಿಗೆ ತತ್ತದ್ದೇಶ ತತ್ತತ್ಕಾಲಗಳ ಸಂಬಂಧವೇನೂ ಇಲ್ಲ—ಹೀಗೆಂಬುದು ಸಾಯಣರ ಮತ. ಈ ಅಕ್ಷರಾರ್ಥದ ವಾದವು ನಿಲ್ಲುವುದಕ್ಕೆ ಅವರು ಕೊಟ್ಟಿರುವ ಕಾರಣಗಳು ಸಾಲವು. ವೇದವನ್ನು ನಿರ್ಮಾಣಮಾಡಿದವನೊಬ್ಬ ಮನುಷ್ಯನಾಗಿದ್ದಿದ್ದರೆ ಆತನ ಹೆಸರೆಲ್ಲಿಯಾದರೂ ಇರಬೇಕಾಗಿತ್ತು; ಅದಿಲ್ಲದಿರುವುದರಿಂದ ವೇದವು ಅಪೌರುಷೇಯ ಕೃತಿಯೆಂಬುದೇ ಸಿದ್ಧಾಂತವೆಂದು ಸಾಯಣರು ಅಭಿಪ್ರಾಯಪಡುತ್ತಾರೆ. ಆದರೆ ಕರ್ತೃನಾಮಸ್ಮರಣೆಯಿಲ್ಲದ ವೇದೇತರ ಪ್ರಬಂಧಗಳು ಎಷ್ಟೋ ಲೋಕದಲ್ಲಿವೆ; ಇವುಗಳ ಕರ್ತೃತ್ವದ ವಿಷಯದಲ್ಲಿಯೂ ಹಾಗೆ ಅನುಮಾನಿಸಬಹುದೆ? ಇಷ್ಟೇ ಅಲ್ಲದೆ, ಪ್ರಪಂಚದ ಇತರ ದೇಶಗಳ ಭಾಷೆ ಸಾಹಿತ್ಯಗಳೊಡನೆಯೂ ಮತ್ತು ಮತಧರ್ಮಗಳೊಡನೆಯೂ ನಮ್ಮ ವೇದದ ಭಾಷೆಯನ್ನೂ ಧರ್ಮ ಕರ್ಮಗಳನ್ನೂ ಹೋಲಿಸಿ ನೋಡಿ ಅವುಗಳ ಸಾಮ್ಯ ವೈಷಮ್ಯಗಳನ್ನು ಪರೀಕ್ಷಿಸುವುದರಿಂದಲೂ, ವೇದದೊಳಗಿನ ನಾನಾ ಭಾಗಗಳಲ್ಲಿರುವ ನದೀ ಪರ್ವತಾದಿ ಭೂಲಕ್ಷಣ ವರ್ಣನೆಗಳನ್ನೂ ನಕ್ಷತ್ರಾದ್ಯಾಕಾಶ ಲಕ್ಷಣ ವರ್ಣನೆಗಳನ್ನೂ ಪರೀಕ್ಷಿಸುವುದರಿಂದಲೂ ಸಾಯಣರ ವಾದಕ್ಕೆ ಅನೇಕ ವಿರೋಧಗಳೊದಗುತ್ತವೆ. ನಮ್ಮ ವೇದವಾಕ್ಯಗಳಲ್ಲಿಯ ಮುಖ್ಯ ಶಬ್ದಗಳನ್ನು ಹೋಲುವ ಶಬ್ದಗಳೂ, ನಮ್ಮ ಸ್ವರೋಚ್ಚಾರಣೆಯಂತಿರುವ ಪಾಠಪದ್ಧತಿಯೂ, ಇಂದ್ರ ಮಿತ್ರ ವರುಣ ನಾಸತ್ಯ ಅಗ್ನಿ

ಮೊದಲಾದ ನಮ್ಮ ವೈದಿಕ ದೇವತೆಗಳ ಹೆಸರುಗಳೂ, ಉಪಾಸನ ವಿಧಿಗಳೂ, ಐತಿಹ್ಯಗಳೂ ಸಹ ಇರಾನೀ (ಪಾರಸೀಕ) ಜನರ ಮಂತ್ರ ಗಳಲ್ಲಿಯೂ ಕಾಣಬರುತ್ತವೆ. ಪುರಾತನ ಗ್ರೀಕರಲ್ಲಿಯೂ ನಮ್ಮ ಶ್ರೌತಕರ್ಮಗಳನ್ನು ಹೋಲುವಂಥಾ ಬಲಿ ಯಜ್ಞಾದಿ ಕ್ರಿಯೆಗಳು ರೂಢಿಯಲ್ಲಿದ್ದುವೆಂದು ತಿಳಿದು ಬಂದಿದೆ. ಹೀಗೆ ನಾನಾ ಜನಪದಗಳ ಭಾಷೆಗಳ, ಧರ್ಮಗಳ, ಮತ್ತು ಸಂಪ್ರದಾಯಗಳ ಸಾಮ್ಯಾಸಾಮ್ಯ ವಿಮರ್ಶೆಯಿಂದ ಆ ಜನಪದಗಳೆಲ್ಲವೂ ಯಾವುದೋ ಒಂದು ಕಾಲದಲ್ಲಿ ಒಂದು ಪ್ರದೇಶದಲ್ಲಿ ವಾಸವಾಗಿದ್ದ ಒಂದೇ ಜನದ ಬುಡಕಟ್ಟಿನಿಂದ ಹುಟ್ಟಿ, ಕ್ರಮೇಣ ಬೇರೆ ಬೇರೆ ಕಡೆಗಳಿಗೆ ಹೋಗಿರಬೇಕೆಂದು ಸಿದ್ಧವಾಗುತ್ತದೆ. ಅಷ್ಟೇ ಅಲ್ಲದೆ, ನಮ್ಮ ವೇದಗಳೊಳಗಿನ ಭೌತಿಕಸನ್ನಿವೇಶ ವಿವರಣೆಗಳಿಂದಲೂ, ಭಾಷಾ ಶೈಲಿಯಿಂದಲೂ, ಅಭಿಪ್ರಾಯ ಭೇದ ಮತ ವಿತರ್ಕಗಳಿಂದಲೂ ಸಹ ವೇದದ ನಾನಾ ಭಾಗಗಳು ನಾನಾ ಕಾಲದಲ್ಲಿ ಹುಟ್ಟಿದವುಗಳೆಂದು ಊಹೆ ಮಾಡ ಲಾಗುತ್ತದೆ. ಹೀಗೆ ನೋಡಲಾಗಿ, ಸಾಯಣರ ವೇದನಿತ್ಯತ್ವ ಅಪೌರುಷೇಯತ್ವಗಳ ಮತವು ಅಕ್ಷರಶಃ ನಿಲ್ಲುವುದು ಕಷ್ಟವಾಗುತ್ತದೆ.

## ಭಾವಾರ್ಥ

ಆದರೆ, "ನಿತ್ಯ," "ಅಪೌರುಷೇಯ" ಶಬ್ದಗಳ ತಾತ್ಪರ್ಯಾರ್ಥ ವನ್ನು ಮಾತ್ರ ನಾವು ಗ್ರಹಿಸುವುದಾದರೆ ಸಾಯಣ ಮತಕ್ಕೆ ಈಗಲೂ ಆಸ್ತಿಕ ಜನದ ದೃಷ್ಟಿಯಲ್ಲಿ ಯಾವ ಬಾಧೆಯೂ ಬಾರದು. ಭಾಷೆ ಯೆಂಬುದು ಹೇಗಿದ್ದರೂ ಜಗತ್ಕರ್ತೃವಿನ ಒಂದು ಶಕ್ತಿ ವಿಶೇಷವೆಂದು ಒಪ್ಪಬೇಕಾದುದೇ ಸರಿ. ಆದರೆ ಆ ಭಾಷೆಯು ಇಂದ್ರಿಯ ಗೋಚರ ಗಳಾದ ವಿಷಯಗಳಿಗೆ ಪ್ರಯುಕ್ತವಾದಾಗ ಅದನ್ನು ಪೌರುಷೇಯ ವಾಕ್ಯೆನ್ನಬಹುದು. ಕಾವ್ಯಾದಿ ಪ್ರಬಂಧಗಳು ಈ ಬಗೆಯವು. ಚರಕ ಸುಶ್ರುತಾದಿ ವೈದ್ಯರ ವಾಕ್ಯಗಳ ತತ್ತ್ವಗಳು ನಮ್ಮ ಶರೀರದ ಅನು ಭವಕ್ಕೂ, ಕಾಲಿದಾಸಾದಿ ಕವಿಗಳ ವಾಕ್ಯಗಳ ಭಾವಗಳು ನಮ್ಮ ಮನಸ್ಸಿನ ಅನುಭವಕ್ಕೂ ಸಿಕ್ಕಬೇಕಾದುವು. ಎಲ್ಲಿ ಹಾಗೆ ಅವು ಯಾರ

ಅನುಭವಕ್ಕೂ ಬರುವುದಿಲ್ಲವೋ ಅಲ್ಲಿ ಅವನ್ನು ನಿರಾಕರಿಸಬಹುದು. ಎಂದರೆ, ಈ ಗ್ರಂಥಗಳ ಯೋಗ್ಯತೆಗೆ ನಮ್ಮ ದೇಹೇಂದ್ರಿಯಗಳೇ ಪ್ರಮಾಣಸಾಧನಗಳಾಗಿರುವುವು. ಆದರೆ ನಾವು ಈ ಶರೀರ ಕರಣಗಳಿಂದ ಪರೀಕ್ಷಿಸಲಾಗದ ಪ್ರಪಂಚವೊಂದಿದೆ. ಅದರ ಮೂಲಸ್ವರೂಪವು ನಮ್ಮ ದೃಷ್ಟಿಗೆ ಕಾಣಬಾರದಿದ್ದರೂ, ಅದರ ಕಾರ್ಯಗಳು ಮಾತ್ರ ನಮ್ಮ ಜೀವನದೊಳಕ್ಕೆ ಪ್ರತಿಕ್ಷಣವೂ, ಪ್ರತಿಯೊಂದು ಸ್ಥಳದಲ್ಲಿಯೂ, ಪ್ರತಿಯೊಂದು ಅವಸ್ಥೆಯಲ್ಲಿಯೂ ಹೊಕ್ಕು, ವ್ಯಾಪಿಸಿ, ನಮ್ಮ ಬುದ್ಧಿಗೆ ಭಾಸವಾಗುತ್ತಿರುತ್ತವೆ.

ಈ ಅನಿವಾರ್ಯವೂ ಇಂದ್ರಿಯಾತೀತವೂ ಆದ ಪ್ರಪಂಚವು ಸೃಷ್ಟಿಸ್ಥಿತಿ ನಾಶಗಳನ್ನು ಮಾಡಿಸುತ್ತಿರುವ ಮಹಾಶಕ್ತಿಗಳದು. ಅದೇ ದೇವಲೋಕ. ಕೇವಲ ಮಾನುಷ ಬುದ್ಧಿಯು ಅಲ್ಲಿಗೆ ಮುಟ್ಟದು. ಅಲ್ಲಿಯ ವಿಭೂತಿಗಳನ್ನು ಜಗತ್ಕರ್ತನು ತಾನಾಗಿ ವ್ಯಕ್ತಪಡಿಸಿದಲ್ಲದೆ ಅವುಗಳ ಸ್ವರೂಪವು ನಮಗೆ ತಿಳಿಯುವುದಿಲ್ಲ. ಅವುಗಳನ್ನರಿಯಬೇಕೆಂದು ಯಾವ ಮಹಾಪುರುಷರು ಮೊದಮೊದಲು ಹುಡುಕಿ ಶ್ರಮಪಟ್ಟರೋ ಅವರಲ್ಲಿ ಸೃಷ್ಟಿಕರ್ತನು ಅನುಗ್ರಹ ತೋರಿ, ಅವರ ಮನಸ್ಸಿಗೆ ತನ್ನ ಶಕ್ತಿಯ ನಾನಾ ರೂಪಗಳನ್ನು ಸ್ಫುರಣೆಮಾಡಿಸಿ, ಅವರ ಆ ದಿವ್ಯಾನುಭವಗಳ ವಿವರಗಳನ್ನು ಅವರ ಬಾಯಿಂದ ಮಂತ್ರರೂಪದಲ್ಲಿ ಹೊರಡಿಸಿರುವನು. ಅವರೇ ಮಹರ್ಷಿಗಳು; ಅವರಲ್ಲಿ ದೈವಾವೇಶವಾಗಿ ಆಡಿಸಿದ ಮಾತುಗಳೇ ವೇದಗಳು; ಹೀಗೆ ನಡೆದಿರುವ ಭಗವಂತನ ಸ್ವಸ್ವರೂಪ ವಿವರಣೆಯು ಭಕ್ತಲೋಕದ ಮನೋಬುದ್ಧಿ ಸಂಸ್ಕಾರಗಳಿಗೆ ತಕ್ಕಂತೆ ಒಂದು ಕ್ರಮಿಕೋತ್ಕರ್ಷದ ರೀತಿಯನ್ನನುಸರಿಸಿರುತ್ತದೆ. ಈ ಉತ್ಕರ್ಷ ಕ್ರಮದ ಪರಿಪೂರ್ಣ ದಶೆಯೇ ವೇದಾಂತ. ಈ ರೀತಿಯಾಗಿ ಅತೀಂದ್ರಿಯ ಲೋಕದ ಶಕ್ತಿ ವ್ಯಾಪಾರಗಳ ಜ್ಞಾನವು ಕೇವಲ ಈಶ್ವರಾನುಗ್ರಹದಿಂದ ಬಂದಿರುವುದಾದಕಾರಣ ಅದು ನಿತ್ಯ; ಅದು ಮನುಷ್ಯ ಮುಖೇನ ಬಂದಿದ್ದರೂ ಅದರಲ್ಲಿ ಮನುಷ್ಯರ ಸ್ವಕಪೋಲ ಕಲ್ಪನೆಯೇನೂ ಇಲ್ಲದೆ ಈಶ್ವರ ಪ್ರೇರಣೆಯೇ ಸಂಪೂರ್ಣವಾಗಿರುವುದರಿಂದ ಅದು ಅಪೌರುಷೇಯ.

## ಲೋಕಾಂಗೀಕಾರ ಪ್ರಮಾಣ

ವೇದ ಪ್ರಾಮಾಣ್ಯ ವಾದಕ್ಕೆ ಹೀಗೆಂದು ಅರ್ಥ ಹೇಳಿದರೂ, ಇದಕ್ಕೆ ಪ್ರತಿಯಾಗಿ ಹೇಳಬಹುದಾದ ಕೋಟಿ ಇನ್ನೂ ಒಂದುಳಿದಿದೆ. ಋಷಿಗಳೆಂಬವರ ಬಾಯಿಂದ ಬಂದ ವಾಕ್ಯಗಳು ನಿಜವಾಗಿ ಈಶ್ವರ ಪ್ರೇರಿತವಾದವುಗಳಲ್ಲದೆ, ಕೇವಲ ಕೃತಕ ವಾಕ್ಯಗಳೋ ಭ್ರಾಂತ ವಾಕ್ಯಗಳೋ ಆಗಿರಕೂಡದೇಕೆ? ಈ ಪ್ರಶ್ನೆಗೆ ಸಾಯಣಾಚಾರ್ಯರ ಪ್ರತ್ಯುತ್ತರವೇ ಕೊನೆಯದು :—

ವೇದಮೂಲಾಯಾಃ ಸ್ಮೃತೇಃ ತದುಭಯ ಮೂಲಾಯಾಃ
ಲೋಕಪ್ರಸಿದ್ಧೇಶ್ಚ ಪ್ರಾಮಾಣ್ಯಂ ದುರ್ವಾರಂ ||

ವೇದದ ಆಧಾರದ ಮೇಲೆ ಸ್ಮೃತಿಗಳು ನಿಂತಿವೆ ; ಅವೆರಡರಿಂದಾಗಿರುವ ಅನುಭವದ ಆಧಾರದ ಮೇಲೆ ಅವುಗಳ ಜಗತ್ಪ್ರಖ್ಯಾತಿಯು ನಿಂತಿದೆ. ವೇದ ವಾಕ್ಯಗಳಲ್ಲಿ ತತ್ತ್ವವಿಲ್ಲವೆಂದು ತಿಳಿದುಬಂದಿದ್ದರೆ ಅವುಗಳನ್ನು ಲೋಕವು ಇಷ್ಟುಕಾಲ ಪುರಸ್ಕರಿಸುತ್ತಿರಲಿಲ್ಲ. ಋಷಿಗಳೆಂಬವರಿಗೆ ಲೋಕ ವಂಚನೆಯ ಆಲೋಚನೆಯಿತ್ತೆಂದು ಶಂಕಿಸಲು ಯಾವ ಕಾರಣವೂ ಇಲ್ಲ. ಅವರು ವಂಚಕರೋ ಉನ್ಮತ್ತರೋ ಆಗಿದ್ದಿದ್ದರೆ ಅದು ಜನರ ಗೋಚರಕ್ಕೆ ಬಂದಿರುತ್ತಲೇ ಇತ್ತು; ಏಕೆಂದರೆ, ವೈದಿಕ ದೇವತಾ ವಿಶೇಷಗಳು ಅಪ್ರತ್ಯಕ್ಷಗಳಾದರೂ, ಅವುಗಳನ್ನುಪಾಸಿಸುವ ವೈದಿಕ ಕ್ರಿಯೆಗಳಲ್ಲಿ ಕೆಲವಾದರೂ ಪ್ರತ್ಯಕ್ಷ ಫಲಗಳುಳ್ಳವು. ಅದಲ್ಲದೆ ವೇದ ಮಂತ್ರಗಳಲ್ಲಿ ಹೇಳಿರುವ ಸಂಗತಿಗಳಲ್ಲಿ ಯಾವುದನ್ನೂ ಮನುಷ್ಯರು ಅಸಂಭವವೆಂದು ತೋರಿಸಲಾಗುವುದಿಲ್ಲ. ಅತೀಂದ್ರಿಯ ಲೋಕದ ಘಟನೆಗಳ ಸಾಧ್ಯಾಸಾಧ್ಯತೆಗಳನ್ನು ನಿರ್ಣಯಿಸಬಲ್ಲ ಮನುಷ್ಯನಾದರೂ ಯಾರು? ಮತ್ತು ವೇದವೃಕ್ಷಕ್ಕೆ ಪರಿಪಕ್ವ ಫಲದಂತಿರುವ ಉಪನಿಷತ್ತುಗಳ ತತ್ತ್ವ ಸ್ವಾರಸ್ಯವಾದರೋ ಪ್ರತಿಭಾಶಾಲಿಗಳಾದವರ ವಿಚಾರ ಶಕ್ತಿಯೆಂಬ ರಸನೆಗೆ ಪರಮಪ್ರಿಯವೆನಿಸಿದೆ. ಹೀಗಿರುವಲ್ಲಿ, ವೇದವನ್ನು ಬಾಲ ಭಾಷೆಯೆಂದಾಗಲಿ ವಂಚಕೋಕ್ತಿಯೆಂದಾಗಲಿ

ಉನ್ಮತ್ತ ಪ್ರಲಾಪವೆಂದಾಗಲಿ ಜರೆಯುವುದು ನ್ಯಾಯತತ್ಪರರಿಗೆ ಸಾಧ್ಯವಾಗದು.

ಮುಖ್ಯವಾಗಿ, ಒಂದು ಜನಸಮುದಾಯವು ಒಂದು ಧರ್ಮ ವನ್ನು ದೃಢವಾಗಿ ನಂಬಿ ಅದರ ಎಲ್ಲೆಕಟ್ಟಿನೊಳಗೆ ಇಷ್ಟಪಟ್ಟು ನಿಂತಿರ ಬೇಕಾದರೆ, ಆ ಧರ್ಮದ ಬೋಧನೆಗೆ ಅವಿಕಂಪ್ಯವೂ ಅಭೇದ್ಯವೂ ಆದ ಪರಮಾಧಾರವೊಂದು ಅತ್ಯಂತಾವಶ್ಯಕವಲ್ಲವೆ? ಆ ಆಧಾರವು ದೈವ ಪ್ರಸಾದ ಲಬ್ಧವಾದುದೆಂದು ಹೇಳುವಂತಾದರೆ ಅದರಿಂದ ಆ ಧರ್ಮಕ್ಕೆ ಮತ್ತಾವ ಸಹಾಯದಿಂದಲೂ ದೊರೆಯಲಾರದಷ್ಟು ಲೋಕವಿಶ್ವಾಸವೂ ಪೂಜೆಯೂ ದೊರೆಯುವುದು ಸ್ವಾಭಾವಿಕವೇ ಆಗಿದೆ. ಯುಗ ಸಹಸ್ರ ಗಳ ಹಿಂದೆ, ಮನುಷ್ಯಲೋಕವು ಇನ್ನೂ ಶೈಶವದಲ್ಲಿದ್ದಾಗ, ಯಾವ ಮಹನೀಯರು ಐಹಿಕ ವ್ಯಾಪಾರಗಳಲ್ಲಿಯೇ ಮಗ್ನರಾಗಿರದೆ, ಲೋಕಾ ತೀತಗಳಾದ ಜಗದ್ರಹಸ್ಯಗಳ ಕಡೆಗೆ ಮನಸ್ಸನ್ನು ತಿರುಗಿಸಿ, ತಪೋ ನಿಷ್ಠರಾಗಿದ್ದರೋ, ಅಂಥವರು ತಮ್ಮಂತರಂಗದಲ್ಲಿ ಆದ ಸಾಕ್ಷಾ ತ್ಕಾರದ ಭರದಿಂದ ಆಡಿದ ಮಾತುಗಳನ್ನು ವಿಶೇಷಾರ್ಥದಲ್ಲಿ ಭಗವದ್ವಾಣಿ ಯೆಂದು ಕರೆಯುವುದರಲ್ಲಿ ಅನುಚಿತವೇನೂ ತೋರದು. ಆ ಹೆಸರು ಅಂಥಾ ದಿವ್ಯದರ್ಶನ ನಿರೂಪಣೆಗಲ್ಲದಿದ್ದರೆ ಮತ್ತಾವುದಕ್ಕೆ ಸಂದೀತು? ಕ್ರೈಸ್ತ ಪಾರಸೀಕಾದಿ ಇತರ ಮತಗಳವರೂ ತಂತಮ್ಮ ಧಾರ್ಮಿಕ ಗ್ರಂಥಗಳನ್ನು ಭಗವದ್ವಾಣಿಯೆಂದೇ ಭಾವಿಸಿರುವರು.

## ಅಪೌರುಷೇಯ ಪೌರುಷೇಯ ಸಮನ್ವಯ

ವೇದವು ಅಪೌರುಷೇಯವೆಂದು ನಾವು ಒಪ್ಪಿಕೊಂಡರೂ ವೇದಾರ್ಥ ವಿವರಣೆಯಂತೂ ಪೌರುಷೇಯವೇ ಎಂಬುದನ್ನೂ ಒಪ್ಪ ಬೇಕು. ವ್ಯಾಖ್ಯಾನಕರ್ತರು ವೇದಾಂಗಗಳನ್ನೂ ಇತಿಹಾಸ ಸಂಪ್ರ ದಾಯಗಳನ್ನೂ ಎಷ್ಟು ಶ್ರದ್ಧೆಯಿಂದ ಅನುಸರಿಸಿದ್ದರೂ, ಅವುಗಳ ಜೊತೆಗೆ ಅವರ ಸ್ವಂತ ಊಹಾಪೋಹಗಳೂ ಯುಕ್ತಿ ವಿವೇಚನೆಗಳೂ ಸೇರಿಯೇ ಇರುತ್ತವೆ. ಹೀಗೆ ವ್ಯಾಖ್ಯಾತೃಗಳ ವಿಶೇಷ ಶಕ್ತಿಗಳೂ ಪ್ರತ್ಯೇಕವಾಗಿರುವ ಕಾರಣದಿಂದಲೇ ಒಂದೇ ಮೂಲವಚನದ ಅರ್ಥಗಳು

ಬೇರೆ ಬೇರೆ ವ್ಯಾಖ್ಯಾನಗಳಲ್ಲಿ ಬೇರೆ ಬೇರೆ ತೆರನಾಗಿರುತ್ತವೆ. ಶಂಕರ ರಾಮಾನುಜ ಪೂರ್ಣಪ್ರಜ್ಞರುಗಳ ಮತಭೇದಕ್ಕೆ ವೇದವಾಕ್ಯದ ಪಾಠ ಭೇದಗಳೇನೂ ಕಾರಣವಲ್ಲ; ಒಂದೇ ವಾಕ್ಯದ ಅರ್ಥ ಕಲ್ಪನೆಯಲ್ಲಿ ಅವರವರು ತೋರಿರುವ ಯುಕ್ತಿ ಭೇದಗಳೇ ಕಾರಣ. ಹೀಗೆ ಒಂದು ಕಡೆ ಅಪೌರುಷೇಯವೆನಿಸಿದ ಶಬ್ದ, ಇನ್ನೊಂದು ಕಡೆ ಪೌರುಷೇಯ ವಾಗಿರುವ ಅರ್ಥವಿವೇಚನೆ—ಇವೆರಡೂ ಸಾಮರಸ್ಯದಿಂದ ಸೇರಿ ಆಗಿರು ವುದು ವೈದಿಕ ಧರ್ಮವೆಂಬ ಹಿಂದೂ ಮತ. ಅದು ಮನುಷ್ಯ ವಿವೇಚನೆಗೆ ದೊರೆಯದೆ, ಅಂಧವಿಶ್ವಾಸವನ್ನು ಮಾತ್ರವೇ ಬಯಸಿ, ಕೇವಲ ರಹಸ್ಯಾ ಕ್ಷರಗಳ ಆಧಾರದ ಮೇಲೆ ನಿಂತಿರುವ ಮತವಲ್ಲ; ಅದು ಕೇವಲ ಮಾನುಷ ಬುದ್ಧಿಯ ಕಲ್ಪನೆಯಾಗಿ, ಬೇರೆ ಆಧಾರ ದೃಷ್ಟಾಂತಗಳಿಲ್ಲದೆ, ಕಾಲ ದೇಶ ವ್ಯತ್ಯಾಸಗಳಿಂದ ಅಲ್ಲಾಡುತ್ತಿರುವ ಮತವೂ ಅಲ್ಲ. ಅದರಲ್ಲಿ ಅಪೌರು ಷೇಯ ಪೌರುಷೇಯಗಳೆರಡೂ ಪರಸ್ಪರ ಮೇರೆಗಳೂ ನಿದರ್ಶನಗಳೂ ಆಗಿದ್ದುಕೊಂಡು ಒಂದುಗೂಡಿವೆ.

ಹೀಗೆ ಪರ್ಯಾಲೋಚಿಸಿದರೆ, ವೇದವು ಅಪೌರುಷೇಯ ಗ್ರಂಥ ವೆಂಬ ಸಿದ್ಧಾಂತವು ಯುಕ್ತಿಯುಕ್ತವಾಗಿಯೇ ಇದೆಯೆಂದೂ ಅದರ ಪರಿಣಾಮವು ಒಟ್ಟಿನಮೇಲೆ ಕ್ಷೇಮಕರವೇ ಎಂದೂ ಈ ಕಾಲದ ಜನರೂ ಒಪ್ಪಬೇಕಾಗುತ್ತದೆ. ಮೇಲಾಗಿ, ಸಾಯಣಾಚಾರ್ಯರು ಪ್ರತಿಪಾದಿ ಸಿರುವ ವಾದದ ಅಕ್ಷರಾರ್ಥ ಭಾಗವೂ ಸಹ ಅವರಿಗೆ ಗುರುಪರಂಪರಾ ಗತವಾಗಿತ್ತೆಂಬುದನ್ನು ನಾವು ಮರೆಯಲಾಗದು. ಅವರು ವ್ಯಾಖ್ಯಾನ ಕರ್ತರೇ ಹೊರತು ಮತ ಪರಿಷ್ಕಾರ ಕರ್ತರಲ್ಲ. ಅವರ ಅರ್ಥಕ್ರಮ ವಾದಕ್ರಮಗಳನ್ನು ನಾವು ವಿಮರ್ಶಿಸುವ ಸಂದರ್ಭದಲ್ಲಿ, ಅವರ ಕಾಲ ದಲ್ಲಿ ಹುಟ್ಟಿರದೆ, ನಮ್ಮ ಕಾಲಕ್ಕೆ ಉಂಟಾಗಿರುವ ನವೀನ ಶಾಸ್ತ್ರಜ್ಞಾನದ ದೃಷ್ಟಿಯಿಂದ ಆಕ್ಷೇಪಣೆಗಳನ್ನೊಡ್ಡುವುದು ನ್ಯಾಯವಾಗದು. ಅವರ ಕಾಲದವರೆಗೆ ಬೆಳೆದುಬಂದಿದ್ದ ಸಂಪ್ರದಾಯಗಳನ್ನೂ ಅಭಿಪ್ರಾಯ ಗಳನ್ನೂ ಭಾವನೆಗಳನ್ನೂ ಅವರು ಸರಿಯಾಗಿ ಗ್ರಹಿಸಿ ಅನ್ವಯಿಸಿರು ವರೆ?—ಎಂಬುದಷ್ಟೇ ನಮ್ಮ ಪ್ರಶ್ನೆಯಾಗಿರಬೇಕು. ಆ ಪ್ರಶ್ನೆಯನ್ನು ಹಾಕಿ ನೋಡಿದರೆ, ಸಾಯಣರು ಮಾಡಿರುವ ಕೆಲಸವು ಅದ್ಭುತ

ಪ್ರಜ್ಞೆಯನ್ನೂ ಜಾಗರೂಕತೆಯನ್ನೂ ತೋರುವಂತಹುದಾಗಿದೆಯೆಂದು ಹೇಳಲು ಯಾರೂ ಹಿಂದೆಗೆಯರು.

## ಪಾಶ್ಚಾತ್ಯರಿಬ್ಬರ ಅಭಿಪ್ರಾಯಗಳು

ಸಾಯಣರಲ್ಲಿ ಮಮತೆಯೇನೂ ಇಲ್ಲದೆ ನಿಷ್ಪಕ್ಷಪಾತವಾಗಿಯೂ ನಿರ್ದಾಕ್ಷಿಣ್ಯವಾಗಿಯೂ ಗುಣದೋಷ ವಿವೇಚನೆಮಾಡುವ ಪಾಶ್ಚಾತ್ಯ ಪರಿಶೋಧಕರೂ ಈ ಗುಣವನ್ನು ಅಂಗೀಕರಿಸಿದ್ದಾರೆ. ಮೆಕ್‌ಡಾನೆಲ್ ಪಂಡಿತರು ಹೇಳಿರುವುದೇನೆಂದರೆ :—"ಸಾಯಣರು ಯಾಸ್ಕರ ಕಾಲದಿಂದ ಸುಮಾರು ೨೦೦೦ ವರ್ಷಗಳ ತರುವಾಯ ಇದ್ದವರು. ಆದ ಕಾರಣ ಯಾಸ್ಕರಿಗೆ ದೊರೆತಿದ್ದ ಪ್ರಾಚೀನ ಶಾಸ್ತ್ರ ಸಾಮಗ್ರಿಯಲ್ಲಿ ಕೆಲವು ಭಾಗ ಸಾಯಣರ ವೇಳೆಗೆ ನಷ್ಟವಾಗಿಹೋಗಿದ್ದರೂ ಇರಬಹುದು. ಕೂಡಿದ ಮಟ್ಟಿಗೂ ಪುರಾತನ ಶಾಸ್ತ್ರಾಧಾರಗಳನ್ನು ಹೇಳಿಯೇ ಸಾಯಣರು ವ್ಯಾಖ್ಯಾನಮಾಡಿದ್ದಾರೆ. ಸಾಧಾರಣವಾಗಿ ಯಾಸ್ಕರನ್ನೇ ಅವರು ಅನುಸರಿಸಿದ್ದರೂ, ಅನೇಕ ಕಡೆ ಅವರು ಯಾಸ್ಕ ಮತದಿಂದ ಪ್ರತ್ಯೇಕವಾದ ಮತವನ್ನು ಪ್ರತಿಪಾದನೆಮಾಡಿದ್ದಾರೆ. ಸಾಯಣರು ಅನೇಕ ಪದಗಳಿಗೆ ಬೇರೆ ಬೇರೆ ವಾಕ್ಯಗಳಲ್ಲಿ ಬೇರೆ ಬೇರೆ ಅರ್ಥವನ್ನು ಕೊಟ್ಟಿದ್ದಾರೆ. ಇವರಿಗೂ ಯಾಸ್ಕರಿಗೂ ಅನೇಕ ಪದಗಳ ಅರ್ಥ ವಿಚಾರದಲ್ಲಿ ಅಭಿಪ್ರಾಯ ಭೇದಗಳಿರುವುದರಿಂದ, ಇವರಿಬ್ಬರಲ್ಲಿ ಇಂಥವರದೇ ಸಂಪ್ರದಾಯ ನಿಷ್ಕೃಷ್ಟವಾದ ಅಥವಾ ವ್ಯಾಕರಣಾದಿ ಶಾಸ್ತ್ರ ನಿಷ್ಕೃಷ್ಟವಾದ ಅರ್ಥವೆಂದು ಹೇಳಲಾಗುವುದಿಲ್ಲ. ಆದರೆ ಈ ಸಂದೇಹವು ವಿಶೇಷವಾಗಿ ಅನ್ವಯಿಸುವುದು ಸಂಹಿತಾ ಭಾಗಕ್ಕೆ ಮಾತ್ರ; ಏಕೆಂದರೆ ಸಂಹಿತೆಗಳ ಕಾಲಕ್ಕೂ ಇವರುಗಳ ಕಾಲಕ್ಕೂ ಅಂತರವು ಬಹು ದೂರವಾಗಿತ್ತು. ವೇದದ ಬ್ರಾಹ್ಮಣ ಭಾಗಗಳಾದರೋ ಕರ್ಮಾಚರಣೆಯಲ್ಲಿ ಪ್ರಯುಕ್ತವಾಗತಕ್ಕವುಗಳಾಗಿ, ಅಂಥಾ ಕರ್ಮಾಚರಣೆಗಳು ಯಾಸ್ಕರ ಕಾಲದಲ್ಲಿಯೂ ಸಾಯಣರ ಕಾಲದಲ್ಲಿಯೂ ಸಹ ರೂಢಿಯಲ್ಲಿದ್ದುವಾದಕಾರಣ, ಈ ಬ್ರಾಹ್ಮಣ ಭಾಗಗಳಿಗೂ ತತ್ಸಂಬಂಧಿಗಳಾದ ಸೂತ್ರಗಳಿಗೂ ಇವರುಗಳು ಮಾಡಿರುವ ವ್ಯಾಖ್ಯಾ

ನವು ನಮ್ಮಗಳಿಗೆ ಅಮೋಘವಾಗಿದೆ. ನಮ್ಮ ಕಾಲದಲ್ಲಿ ವೇದಕ್ಕೆ ಅರ್ಥಮಾಡತಕ್ಕವರಿಗೆ ಸಾಯಣಾಚಾರ್ಯರಿಗೆ ಲಬ್ಧವಾಗಿದ್ದ ಸಂಪ್ರದಾಯ ಸಾಮಗ್ರಿಯೆಲ್ಲವೂ ಲಭ್ಯವಾಗಿರುವುದು ಮಾತ್ರವೇ ಅಲ್ಲದೆ, ಅವರಿಗೆ ತಿಳಿಯದೆ ಇದ್ದ ಪಾರಸೀ (ಇರಾನೀ) ಮತಸ್ಥರ "ಅವೆಸ್ತ" ಎಂಬ ಧರ್ಮಗ್ರಂಥ ನಾನಾ ಜನಪದಗಳ ಭಾಷಾ ಸಾಮ್ಯ ವಿಮರ್ಶನ ಶಾಸ್ತ್ರ, ಧರ್ಮಕರ್ಮ ಸಾಮ್ಯ ವಿಮರ್ಶನಶಾಸ್ತ್ರ, ಪ್ರಾಚೀನ ಮನುಷ್ಯ ಕುಲಸಂಪ್ರದಾಯ ವಿಚಾರಶಾಸ್ತ್ರ, ದೇಶ ಚರಿತ್ರಾಂಶ ಪರಿಶೋಧನಶಾಸ್ತ್ರ—ಇವೆಲ್ಲವೂ ಸಹಾಯ ಕೊಡಲು ಸಿದ್ಧವಾಗಿವೆ. ಆದುದರಿಂದ ಇವುಗಳನ್ನು ಪರಂಪರಾಗತವಾದ ಶಾಸ್ತ್ರ ಸಂಪ್ರದಾಯಗಳ ಜೊತೆಗೆ ಸಮನ್ವಯಗೊಳಿಸಿ ಈಗ ನಾವು ವೇದಕ್ಕೆ ಅರ್ಥಮಾಡಬೇಕು."*

ಮ್ಯಾಕ್ಸ್ ಮುಲ್ಲರ್ ಪಂಡಿತರು ಹೇಳಿರುವುದು ಇನ್ನೂ ಸ್ವಾರಸ್ಯವುಳ್ಳುದಾಗಿದೆ. ಅದು ಈ ಬಗೆ:—

"ನಾನು ಋಗ್ವೇದಕ್ಕೆ ಸ್ವತಂತ್ರವಾಗಿ ಅರ್ಥ ಮಾಡಹೊರಡುವುದಕ್ಕೆ ಪ್ರತಿಯಾಗಿ ಸಾಯಣ ಭಾಷ್ಯವನ್ನು ಪ್ರಕಟಪಡಿಸಲುದ್ಯುಕ್ತನಾದುದಕ್ಕೆ, ಸಾಂಪ್ರದಾಯಿಕ ವ್ಯಾಖ್ಯಾನವು ಪರಮಪ್ರಧಾನವಾದುದೆಂಬ ನನ್ನ ನಂಬಿಕೆಯೇ ಕಾರಣ. ಅದಕ್ಕಾಗಿ ನಾನು ನಾಲ್ವತ್ತು ವರ್ಷ ಪ್ರಯಾಸಪಟ್ಟಿದ್ದೇನೆ. ಆದರೆ ಸಾಂಪ್ರದಾಯಿಕಾರ್ಥಕ್ಕೆ ನಾನೇನೂ ಮಿತಿಮೀರಿದಷ್ಟು ಬೆಲೆಕೊಟ್ಟವನಲ್ಲವೆಂಬುದನ್ನು ನನ್ನ ಗ್ರಂಥಗಳನ್ನು ನೋಡಿರುವವರೆಲ್ಲರೂ ಬಲ್ಲರು. ಈ ವಿಚಾರದಲ್ಲಿ ಇಪ್ಪತ್ತು ವರ್ಷಗಳ ಹಿಂದೆಯೇ ನನ್ನ ಅಭಿಪ್ರಾಯವನ್ನು ನಾನು ಸ್ಪಷ್ಟವಾಗಿ ತಿಳಿಸಿದೆ. ಯಾವ ವಿದ್ವಾಂಸರು ಈಗ ಸಾಯಣರನ್ನು ವೇದವಿಮರ್ಶನ ಸ್ವಾತಂತ್ರ್ಯಕ್ಕಿರುವ ತಡೆಯೆಂದು ಅಲ್ಲಗಳೆಯುತ್ತಿರುವರೋ, ಅವರು ಆಗ ಅದಕ್ಕಾಗಿ ನನ್ನನ್ನು ಆಕ್ಷೇಪಿಸಿದರು. ಆದರೆ ಪಾಂಡಿತ್ಯವು ಕ್ಷೇಮದಿಂದ ಮುಂಬರಿಯಬೇಕಾದರೆ ಕೆಲವು ಸಂದರ್ಭಗಳಲ್ಲಿ ಛಾಟಿಗಿಂತಲೂ ತಡೆಕಟ್ಟೇ

---

* The Principles to be followed in Translating the *Rig Veda*, by PROF. A. A. MACDONELL, *Bhandarkar Commemoration Volume* (1917).

ಹೆಚ್ಚು ಆವಶ್ಯಕವಾಗುತ್ತದೆ. ಋಗ್ವೇದದಲ್ಲಿ ನಿಜವಾದ ಪಾಂಡಿತ್ಯವನ್ನು ಸಂಪಾದಿಸಲಿಕ್ಕೆ ಸಾಯಣ ಭಾಷ್ಯವು—ಅದರಲ್ಲೆಷ್ಟೇ ಪ್ರಮಾದಗಳೂ ಲೋಪಗಳೂ ಇದ್ದಾಗ್ಯೂ—ಬಿಡಲಾಗದ ಸಾಧನವೆಂಬುದನ್ನು ಕಳೆದ ಇಪ್ಪತ್ತೈದು ವರ್ಷಗಳ ವೇದ ಪಾಂಡಿತ್ಯದ ಚರಿತ್ರೆಯನ್ನು ಜ್ಞಾಪಿಸಿ ಕೊಳ್ಳುವವರೆಲ್ಲರೂ ತಿಳಿದಿರುವರು. ಈಚೀಚೆಗೆ ವೇದವ್ಯಾಸಂಗವ ನ್ನಾರಂಭಿಸಿರುವವರು ಸಾಯಣರ ಸಾಂಪ್ರದಾಯಿಕಾರ್ಥವನ್ನು ತಿರಸ್ಕರಿಸುವ ರೀತಿಯಲ್ಲಿ ಮಾತನಾಡುವುದು ನನಗೇನೂ ಆಶ್ಚರ್ಯವಲ್ಲ. ವೇದ ಭಾಷೆಯ ಮತ್ತು ವೇದ ಮತದ ಕೋಟೆಯೊಳಕ್ಕೆ ನಾವು ಪ್ರಥಮ ಪ್ರವೇಶ ಮಾಡುವಂತಾದುದಕ್ಕೆ ಸಾಯಣರು ಮಾರ್ಗದರ್ಶಕರಾಗಿ ನಮಗೆ ಕೊಟ್ಟ ಸಹಾಯವೆಷ್ಟರದೆಂಬುದನ್ನು ಈ ಈಚಿನ ಪಂಡಿತರು ಅರಿಯರು. ಇವರು ತಾವು ಕೂಡ ಆತನಿಗೆ ಎಷ್ಟುಮಾತ್ರ ಋಣಿಗಳೆಂಬು ದನ್ನೂ ಅರಿಯರು. ವೇದಕ್ಕೆ ಹೇಗೆ ಅರ್ಥಮಾಡಬಹುದು ಎಂಬುದನ್ನು ಕಲಿಸುವುದಕ್ಕಿಂತ ಹೆಚ್ಚಾಗಿ, ವೇದಕ್ಕೆ ಹೇಗೆ ಅರ್ಥಮಾಡಬಾರದು ಎಂಬುದನ್ನು ಸಾಯಣರು ಕಲಿಸುತ್ತಾರೆ—ಎಂದು ನಾನು ಅನೇಕ ವರ್ಷಗಳ ಹಿಂದೆ ಹೇಳಿ, ಅದಕ್ಕಾಗಿ ನಿಂದೆಯನ್ನು ಸಹಿಸಬೇಕಾಯಿತು. ಈಗಲೂ ನಾನು ಅದೇ ಅಭಿಪ್ರಾಯವನ್ನು ವ್ಯತ್ಯಾಸವೇನೂ ಇಲ್ಲದೆ ಹೇಳತಕ್ಕವನು. ಒಂದುವೇಳೆ ಹಿಂದಿನವರ ವ್ಯಾಖ್ಯಾನದಲ್ಲಿ ಹಲವು ಕೆಲವು ಪ್ರಮಾದಗಳಿದ್ದರೂ ಅದರಿಂದ,—ಆ ಪ್ರಮಾದಗಳಿಂದ ಕೂಡ— ನಮಗೆ ಸರಿಯಾದ ಮಾರ್ಗವನ್ನು ಕಂಡುಹಿಡಿಯಲು ಸಹಾಯವೇ ಆಗುತ್ತದೆಯೆಂಬುದನ್ನು ಯಾರು ಅರಿಯರು? ಈಗ ನಾವು ಸಾಯಣ ಸಹಾಯವಿಲ್ಲದೆ ನಡೆಯಬಲ್ಲವರಾದರೂ, ಇಪ್ಪತ್ತೈದು ವರ್ಷಗಳ ಹಿಂದೆ ಆತನಿಲ್ಲದೆ ಇದ್ದಿದ್ದರೆ ನಾವು ಮೊದಲು ಹೆಜ್ಜೆಗಳನ್ನಿಡಲು ಕೂಡ ಅಸಾಧ್ಯ ವಾಗುತ್ತಿತ್ತೆಂಬುದನ್ನು ಮರೆಯಬಾರದು. ಆತನ ಕರಾವಲಂಬನವಿಲ್ಲದೆ ಆಗ ನಾವು ಹೆಜ್ಜೆಯೂರಲು ಆಗುತ್ತಿರಲಿಲ್ಲ. ಆತನ ದೃಷ್ಟಿವ್ಯಾಪನೆಗಿಂತ ವಿಶಾಲವಾಗಿ ಈಗ ನಮ್ಮ ದೃಷ್ಟಿಯು ಪ್ರಸರಿಸುವ ಹಾಗಿದ್ದರೆ, ಇದಕ್ಕೆ ಆತನು ನಮ್ಮನ್ನು ತನ್ನ ಹೆಗಲಿನ ಮೇಲೆ ಕುಳ್ಳಿರಿಸಿಕೊಂಡಿರುವುದೇ ಕಾರಣವೆಂಬುದನ್ನು ನೆನಪಿನಲ್ಲಿಡಬೇಕು.

“ಸಾಯಣ ಭಾಷ್ಯ ಪುಸ್ತಕದ ಪ್ರತಿಗಳನ್ನು ಸಂಗ್ರಹಿಸಿ ಪರಿಷ್ಕಾರ ಗೊಳಿಸಿ ಪ್ರಕಟಪಡಿಸುವ ಕಾರ್ಯಕ್ಕೆ ನಾನು ಇಷ್ಟು ಕಾಲವನ್ನು ವಿನಿಯೋಗಿಸಿರುವುದಕ್ಕಾಗಿ ಎಷ್ಟು ಮಾತ್ರವೂ ಪಶ್ಚಾತ್ತಾಪಪಡುವುದಿಲ್ಲ. ಇನ್ನೂ ನೂರಾರು ವರ್ಷಗಳಕಾಲ ವೇದವು ಪಂಡಿತರ ವಿಮರ್ಶನ ವ್ಯಾಸಂಗಕ್ಕೆ ಪಾತ್ರವಾಗುವುದೆಂದೂ, ಅದು ಎಂದೆಂದಿಗೂ ಸಮಸ್ತ ಮಾನವವರ್ಗದ ಗ್ರಂಥ ಭಾಂಡಾಗಾರದಲ್ಲಿ ಅತ್ಯಂತ ಪುರಾತನವೆಂದು ಪರಿಗಣಿತವಾಗಿ ಪುರಸ್ಕರಿಸಲ್ಪಡುವುದೆಂದೂ ನನ್ನ ಮನಸ್ಸಿಗೆ ದೃಢವಾಗಿದೆ.

“ಸಾಯಣ ಭಾಷ್ಯದಲ್ಲಿಯ ಅರ್ಥವು ಇಂಡಿಯಾದೇಶದ ಸಂಪ್ರದಾಯವನ್ನನುಸರಿಸಿರುವುದು. ಲ್ಯಾಂಗ್‌ಲಾಯ್ ಪಂಡಿತನ ಸ್ವತಂತ್ರಾರ್ಥವಾದರೋ, ಶಾಸ್ತ್ರೀಯ ವಿವೇಚನೆಯಿಲ್ಲದ ಬರಿಯ ಚಮತ್ಕಾರ ಶಾಲಿಯ ಊಹೆ ಕಲ್ಪನೆಗಳು. ಇನ್ನು ಬೆನ್ಫೀ ಪಂಡಿತನದೋ ಎಂದರೆ, ಆತನು ಕೆಲವು ಶಬ್ದಗಳ ರೂಪನಿಷ್ಪತ್ತಿಯನ್ನೇನೋ ಸಾವಧಾನವಾಗಿ ವಿಚಾರ ಮಾಡಿದ್ದಾನೆ; ಆದರೆ ಉಳಿದವುಗಳಿಗೆ ಸಾಯಣರ ಸಾಂಪ್ರದಾಯಿಕಾರ್ಥವನ್ನೇ ಕೊಟ್ಟಿದ್ದಾನೆ; ಅಥವಾ ಸ್ವಂತ ಊಹೆಯಿಂದ ಅರ್ಥಕಲ್ಪನೆ ಮಾಡಿದ್ದಾನೆ; ಈ ಕಲ್ಪನೆಗಳನ್ನು ಹೋಲಿಸಿ ನೋಡಿದರೆ ಸಾಮಂಜಸ್ಯ ಕಾಣುವುದಿಲ್ಲ. ಸಾಧಾರಣವಾಗಿ ನಾನು ಇಷ್ಟು ಹೇಳುವೆನು:—ಸಾಯಣ ಭಾಷ್ಯವು ನಿಜವಾಗಿಯೂ ಕ್ಲಿಷ್ಟವಾದ ಸಂದರ್ಭಗಳಲ್ಲಿ ಸಹಾಯವಾದುದು ಅಪರೂಪವಾದರೂ, ಭಾಷಾಂತರ ಕಾರ್ಯದ ಮೊದಮೊದಲಿನಲ್ಲಿ ನನಗೆ ಅದು ಅತಿಶಯವಾಗಿ ಸಹಾಯ ಮಾಡಿತು. ಲ್ಯಾಂಗ್‌ಲಾಯ್ ಪಂಡಿತನ ಭಾಷಾಂತರವು ಏನೇನೂ ಉಪಯೋಗಕ್ಕೆ ಬರಲಿಲ್ಲ.” *

## ಸಾಯಣ ಭಾಷ್ಯದ ಉಪಕಾರ

ಪಾಶ್ಚಾತ್ಯ ಪಂಡಿತರ ಆಕ್ಷೇಪಣೆಗಳೆಂತಾದರೂ ಇರಲಿ; ಅವು ಯುಕ್ತಿಯುಕ್ತಗಳಾಗಿವೆಯೆಂದು ನಾವು ಒಪ್ಪಿಕೊಂಡರೂ ಕೂಡ,

* Preface to the First Edition of the *Vedic Hymns* by PROF. F. MAX MULLER, Part I, Vol. XXXII of the Sacred Books of the East.

ಅವುಗಳಿಂದ ವ್ಯತ್ಯಸ್ತವಾಗಬಹುದಾದ ಅಂಶವು ಸಾಯಣ ಭಾಷ್ಯದಲ್ಲಿ ಕಿಂಚಿನ್ಮಾತ್ರವೇ. ವೇದಗಳ ಬ್ರಾಹ್ಮಣ ಭಾಗದಲ್ಲಂತೂ ಆ ಭಾಗಕ್ಕೆ ವಿನಿಯೋಜಕಕ್ರಿಯೆಗಳಾದ ಯಾಗಾದಿಗಳನ್ನು ಸಾಕ್ಷಾತ್ತಾಗಿ ಕಂಡಿದ್ದವರಾದ ಸಾಯಣರ ವಾಕ್ಯವೇ ಕಡೆಯ ಮಾತೆಂದು ಪಾಶ್ಚಾತ್ಯ ಪಂಡಿತರು ಒಪ್ಪಿಕೊಂಡೇ ಇದ್ದಾರೆ. ಇನ್ನು ಮಿಕ್ಕಿರುವ ಸಂಹಿತಾ ಭಾಗದಲ್ಲಿ ರತಕ್ಕ ಭೂಗೋಳ ಖಗೋಳ ಶಾಸ್ತ್ರ ವಿಷಯಗಳು ಪ್ರಾಚೀನೇತಿಹಾಸ ಶೋಧಕರಿಗೆ ಮುಖ್ಯವಾಗಿರುವಷ್ಟು ವೇದವನ್ನು ಧಾರ್ಮಿಕಗ್ರಂಥವೆಂದು ಭಾವಿಸಿರುವವರಿಗೆ ಮುಖ್ಯವಲ್ಲ. ಸಂಹಿತಾ ಮಂತ್ರಗಳ ಮುಖ್ಯಾಶಯವು ದೇವತಾಸ್ತುತಿ. ಈ ಮಂತ್ರಗಳ ಅರ್ಥವಿಧಾನವು ವ್ಯಾಕರಣಾದಿ ಶಾಸ್ತ್ರಗಳನ್ನನುಸರಿಸಿರಬೇಕಲ್ಲದೆ ಪರಂಪರಾಗತವಾದ ಐತಿಹ್ಯಗಳನ್ನು ಅವಲಂಬಿಸಿದುದಾಗಿಯೂ ವೇದಾಂತ ಮತಕ್ಕೆ ಅವಿರೋಧವಾದುದಾಗಿಯೂ ಇರಬೇಕು. ಈರೀತಿ ವೇದವನ್ನು ಮುಖ್ಯವಾಗಿ ದೇಶ ಚರಿತ್ರೆಯ ಮತ್ತು ಭಾಷಾ ಚರಿತ್ರೆಯ ಗ್ರಂಥವೆಂದು ಭಾವಿಸದೆ, ಅದು ಮಾನುಷಲೋಕಾತೀತವಾದ ದೇವಲೋಕದ ಮಹಿಮೆ ರಹಸ್ಯಗಳ ನಿರೂಪಣೆಯೆಂದು ನಂಬಿರುವವರಿಗೆ, ಸಾಯಣ ಭಾಷ್ಯವು ಸರ್ವಕಾಲಗಳಲ್ಲಿಯೂ ವಿಶ್ವಾಸಾರ್ಹವಾಗಿಯೇ ಇರುವುದು. ಕಾಲಿದಾಸನ ಕಾವ್ಯ ನಾಟಕಗಳಲ್ಲಿ ಈ ದೇಶದ ಗಿರಿ ನದೀ ನಗರಗಳ ಪ್ರಸ್ತಾವಗಳೂ ರಾಜರ ಯುದ್ಧ ವಿವಾಹಗಳ ವೃತ್ತಾಂತಗಳೂ ಎಷ್ಟೋ ಇವೆ. ಆದರೆ ಆ ಕಾವ್ಯ ನಾಟಕಗಳ ಮುಖ್ಯ ಸತ್ತ್ವವಿರುವುದು ಈ ವಿವರಗಳಲ್ಲಲ್ಲ; ಅವುಗಳ ಕಥಾಸಂವಿಧಾನ ವರ್ಣನೆಗಳ ರಸೋತ್ಪಾದಕ ಶಕ್ತಿಯಲ್ಲಿ. ಅವುಗಳ ಸ್ಥಲಸನ್ನಿವೇಶ ವಿವರಗಳೂ ರಾಜವಂಶಾನುಕ್ರಮಣಿಕೆಯ ವಿವರಗಳೂ ಸರಿಯಾಗಿಲ್ಲವೆಂಬ ಕಾರಣದಿಂದ ಆ ಮಹಾಕಾವ್ಯಗಳನ್ನಾರೂ ತಳ್ಳಿಹಾಕಲಾರರು. ಅವು ಭೂವಿವರಣೆ ಚರಿತ್ರೆಗಳಲ್ಲ. ಸಾಯಣ ಕೃತಿಯೂ ಹಾಗೆಯೇ. ಅದರ ಮುಖ್ಯ ಸತ್ತ್ವವಿರುವುದು ಋಷಿಪರಂಪರಾಗತವಾಗಿರುವ ದೇವತೋಪಾಸನ ಕ್ರಮ ಬೋಧನೆಯಲ್ಲಿ. ಆದುದರಿಂದಲೇ ನಾನಾ ಪ್ರಾಂತ ನಾನಾ ಸಂಪ್ರದಾಯಗಳಿಗೆ ಸೇರಿರುವ ವೇದ ಧರ್ಮಾವಲಂಬಿಗಳೆಲ್ಲರೂ,—ವೇದಾಂತ ವಿಚಾರದಲ್ಲಿ ಅದ್ವೈತಿ

ವಿಶಿಷ್ಟಾದ್ವೈತಿ ದ್ವೈತಿಗಳೇ ಮೊದಲಾದ ಭಿನ್ನಮತೀಯರಾಗಿದ್ದರೂ,—ವೇದ ವಿಚಾರದಲ್ಲಿ ಮಾತ್ರ ಸಾಯಣರನ್ನು ಒಂದೇ ಸಮನಾಗಿ ಪ್ರಮಾಣವೆಂದಂಗೀಕರಿಸಿದ್ದಾರೆ.*

ವೇದವನ್ನು ಆದಿಮ ಕವಿತೆಯೆಂದು,—ವಿಶ್ವಶಕ್ತಿ ವಿಜೃಂಭಣೆಯ ಪ್ರಥಮ ಸಂದರ್ಶನದಿಂದ ಆರ್ಯಕುಲ ಪಿತಾಮಹರಿಗಾದ ಆಶ್ಚರ್ಯ, ಭಯ, ಚಿಂತೆ, ಭಕ್ತಿ, ಸಮಾಧಾನ, ಶಾಂತಿ ಮೊದಲಾದ ಅಂತರಂಗಾನುಭವ ಪರಂಪರೆಗಳ ಪ್ರತಿಧ್ವನಿಯೆಂದು—ತಿಳಿಯುವವರಿಗೂ ಸಹ ಸಾಯಣರ ಸಾಂಪ್ರದಾಯಿಕಾರ್ಥವು ಪ್ರಯೋಜನಕಾರಿಯಾಗಿರುವುದು. ವೇದವೆಂಬುದು ಅವಿಚ್ಛಿನ್ನವಾಗಿ ಬಂದಿರುವ ಋಷಿ ವಚನ ಪರಂಪರೆಯಾದರೆ, ಸಂಪ್ರದಾಯವೆಂಬುದು ಅವಿಚ್ಛಿನ್ನವಾಗಿ ಬಂದಿರುವ ಋಷಿಕರ್ಮ ಪರಂಪರೆ. ಶಬ್ದವೂ ಕ್ರಿಯೆಯೂ ಸಾಮಾನ್ಯವಾಗಿ ಒಡಹುಟ್ಟುಗಳು; ಒಂದೇ ಸ್ವಭಾವವನ್ನು ಅವೆರಡೂ ಎರಡು ತೆರಗಳಲ್ಲಿ ವ್ಯಕ್ತಪಡಿಸುತ್ತವೆ. ಯಾವ ಕವಿ ಹೃದಯವು ವೇದದಲ್ಲಿ ಮಂತ್ರವಾಗಿ ರೂಪುಗೊಂಡಿದೆಯೋ ಅದೇ ಕವಿಹೃದಯವು ಸ್ವಲ್ಪಮಟ್ಟಿಗಾದರೂ

---

* ಸಾಯಣ ಭಾಷ್ಯವನ್ನು ಆಧಾರವಾಗಿಟ್ಟುಕೊಂಡು ಗ್ರಂಥ ರಚನೆ ಮಾಡಿರುವವರಲ್ಲಿ ಮುದ್ಗಲ, ದ್ವಿವೇದಿ—ಎಂಬಿಬ್ಬರ ಹೆಸರುಗಳು ತಿಳಿದುಬಂದಿವೆ. ಮೌದ್ಗಲ್ಯ ಗೋತ್ರದ ಮುದ್ಗಲ ನಾಮಕ ಪಂಡಿತರು ಸಾಯಣ ಭಾಷ್ಯದಲ್ಲಿಯ ವ್ಯಾಕರಣಾದಿ ಶಾಸ್ತ್ರ ಪ್ರಮೇಯಗಳನ್ನು ಬಿಟ್ಟು, ಅದರ ವಾಕ್ಯಗಳನ್ನು ಮಾತ್ರ ಸಂಗ್ರಹಿಸಿದ್ದಾರೆ:—

ಆಲೋಚ್ಯ ಪೂರ್ವ ಭಾಷ್ಯಂ ಚ ಬಹ್ವೃಚಸ್ಯ ಸಮಂತತಃ |
ಗಹನಂ ಮನ್ಯಮಾನೇನ ಸುಬೋಧೇನ ಸಮುದ್ಧೃತಂ ||
ನವನೀತಂ ಯಥಾ ಕ್ಷೀರಾತ್ಸಿಕತಾಯಾಶ್ಚ ಕಾಂಚನಂ |
ತಥಾ ಸಮುದ್ಧೃತಂ ಸಾರಂ ಪ್ರಾಣಿನಾಂ ಬೋಧಸಿದ್ಧಯೇ ||

ಮೌದ್ಗಲ್ಯ ಗೋತ್ರೇಣ ಚ ಮುದ್ಗಲೇನ
ಹ್ಯಾತ್ಮಾನುಭೂತೇನ ಸುಸಂಸ್ಕೃತೇನ |
ಯಥಾರ್ಥಭೂತೇನ ಸುಸಾಧಕೇನ
ಸಮುದ್ಧೃತಂ ಸಾರಮಿಮಂ ವರಿಷ್ಠಂ ||

—[Page xlviii, MAX MULLER'S *Preface to Vol. III of Edition I of R.V.*

ದ್ಯಾದ್ವಿವೇದಿ—ಎಂಬ ಸಂಸ್ಕೃತ ಕವಿಯು ತನ್ನ "ನೀತಿಮಂಜರಿ" ಎಂಬ ಗ್ರಂಥದಲ್ಲಿ ಮಾಡಿರುವ ಉಪದೇಶಗಳಿಗೆ ಋಗ್ವೇದದ ಕೆಲವು ಉಪಾಖ್ಯಾನಗಳನ್ನು ಉದಾಹರಣೆಯಾಗಿ ಕೊಟ್ಟು, ಆ ಗ್ರಂಥಕ್ಕೆ ತಾನೇ ಬರೆದಿರುವ ವ್ಯಾಖ್ಯಾನದಲ್ಲಿ ಸಾಯಣ ಭಾಷ್ಯ ವಾಕ್ಯಗಳನ್ನು ಪ್ರಮಾಣವಾಗಿ ಉದ್ಧರಿಸಿಕೊಂಡಿದ್ದಾನೆ. (MACDONELL'S *History of Sanskrit Literature*, Page 378.)

ಸಂಪ್ರದಾಯದಲ್ಲಿ ಕರ್ಮ ಕಲಾಪವಾಗಿ ರೂಪುಗೊಂಡಿದೆಯೆಂದು ಹೇಳಬೇಕಾಗುವುದು. ಆದಕಾರಣ ಮಹರ್ಷಿಗಳ ಅಂತರ್ಭಾವವನ್ನು ಕಂಡುಹಿಡಿಯಬೇಕೆಂಬವರು ಆರ್ಷವಾಕ್ಯವನ್ನಲ್ಲದೆ ಅದರ ಆರ್ಷಾನು ಕರಣವನ್ನೂ ತಿಳಿದುಕೊಳ್ಳಬೇಕು. ಇಂಥವರಿಗೂ ಸಾಯಣರ ಉಪ ಕಾರವು ಬೇಕಾದುದೇ.

## ಉಪಸಂಹಾರ

ಆದರೂ ಸಾಯಣರ ಮುಖ್ಯ ದೃಷ್ಟಿಯು ಶಾಸ್ತ್ರಜ್ಞರದು, ಕವಿಯ ದಲ್ಲ. ಕವಿಯ ಪ್ರತಿಭೆ ಚಾತುರ್ಯಗಳು ಅವರಿಗೆ ಲಭಿಸದಿದ್ದ ಶಕ್ತಿ ಗಳೇನೂ ಅಲ್ಲವೆಂಬುದನ್ನು ನೋಡಿದ್ದೇವೆ. ವೇದ ಭಾಷ್ಯದಲ್ಲೆಷ್ಟೋ ಕಡೆ ಕವಿ ಸಹಜವಾದ ಮನೋವೃತ್ತಿಯ ಸೂಚನೆ ಕಾಣಬರುತ್ತದೆ. "ಅಲಂಕಾರ ಸುಧಾನಿಧಿ"ಯಂತೂ ಅವರ ಕವನ ಸಾಮರ್ಥ್ಯಕ್ಕೆ ದೊಡ್ಡ ಸಾಕ್ಷಿಯಾಗಿದೆ. "ಧಾತುವೃತ್ತಿ," "ಪುರುಷಾರ್ಥ ಸುಧಾನಿಧಿ" ಮೊದಲಾದ ಗ್ರಂಥಗಳ ಪೀಠಿಕಾ ಶ್ಲೋಕಗಳಲ್ಲಿಯೂ ಅವರ ಮನೋ ಹರವಾದ ಕಾವ್ಯಭಂಗಿಯನ್ನು ಕಾಣಬಹುದು. ಹೀಗಿದ್ದರೂ ಅವರ ಮುಖ್ಯ ಸ್ಥಾನವಿರುವುದು ಪಂಡಿತ ಪರಿಷತ್ತಿನ ಮಧ್ಯದಲ್ಲಿ; ಮಹಾ ಕವಿ ಗೋಷ್ಠಿಯಲ್ಲಲ್ಲ. ಆ ಕಾಲದ ಲಕ್ಷಣವೇ ಇದು. ಆಗ ಕವಿಗಳಿದ್ದರೂ ಅವರು ವಿಶೇಷ ಗಣ್ಯರಾಗಿಲ್ಲ; ಅವರಿಗಿಂತ ಪ್ರಸಿದ್ಧರಾದವರು ಆಗಿನ ಶಾಸ್ತ್ರವೇತ್ತರು. ಅದು ವ್ಯಾಖ್ಯಾನದ ಕಾಲ; ಶಾಸ್ತ್ರ ಪ್ರಚಾರಣೆಯ ಕಾಲ; ಪುರಾತನ ವಿದ್ಯೆಯ ಪುನರುಜ್ಜೀವನದ ಕಾಲ. ಹಿಂದಿನವರು ಸಂಪಾದಿಸಿ, ಬೆಳಸಿ, ಒಟ್ಟುಗೂಡಿಸಿಟ್ಟಿದ್ದ ವೇದ ಶಾಸ್ತ್ರ ಪುರಾಣ ಪ್ರಬಂಧ ಗಳು ಕಾಲವಶದಿಂದ ಲೋಕದ ಔದಾಸೀನ್ಯಕ್ಕೆ ಪಾತ್ರವಾಗಿ ಜೀರ್ಣ ವಾಗಿದ್ದ ಆ ಸಮಯದಲ್ಲಿ, ಅವುಗಳನ್ನು ಹೊರಕ್ಕೆ ತೆಗೆದು, ಅವುಗಳ ಸಾರವನ್ನು ಸುಲಭಗ್ರಾಹ್ಯವಾಗುವಂತೆ ಸಂಗ್ರಹಿಸಿ, ಅವುಗಳ ಗೂಢ ಪ್ರಕರಣಗಳನ್ನು ವಿಸ್ತಾರವಾಗಿ ವಿವರಿಸಿ, ಅವುಗಳಿಗೊಂದು ನೂತನ ಕಳೆಯನ್ನೂ ಆಕರ್ಷಕತೆಯನ್ನೂ ಉಂಟುಮಾಡಿಕೊಡುವುದೇ ಹಿಂದೂ ಧರ್ಮಕ್ಕೂ ಸಂಸ್ಕೃತಿಗೂ ಬೇಕಾಗಿದ್ದ ಮಹೋಪಕಾರ. ಇದಕ್ಕಾಗಿ

ಕಂಕಣಕಟ್ಟಿ ನಿಂತವರು ಮಾಧವ ಸಾಯಣರು. ಅದರಲ್ಲಿ ಸಾಯಣರ ಪಾಲು ಗುಣದಲ್ಲಿಯೂ ಪರಿಮಾಣದಲ್ಲಿಯೂ ಉದ್ದೇಶದ ಮಹತ್ತ್ವಕ್ಕೆ ತಕ್ಕುದಾಗಿ, ಅಣ್ಣಂದಿರದಕ್ಕೆ ಅನುರೂಪವಾದುದಾಗಿದೆ. ಹೀಗೆಂಬುದು ಸ್ತೋತ್ರದ ಮಾತಲ್ಲ; ಆದರೂ ಅದಕ್ಕಿಂತ ಮೇಲಾದ ಸ್ತೋತ್ರವಾವುದೂ ಇರದು.

———o———

## "ವೇದಾರ್ಥ ಪ್ರಕಾಶ" ಪ್ರಕರಣದ ಅನುಬಂಧ

ಸಾಯಣರ ವೇದ ಭಾಷ್ಯವನ್ನು ದೇವನಾಗರೀ ಅಕ್ಷರಗಳಲ್ಲಿ ಮೊದಲು ಅಚ್ಚುಮಾಡಿಸಿ ಪ್ರಕಟಗೊಳಿಸಿದವರು ಮ್ಯಾಕ್ಸ್ ಮುಲ್ಲರ್ ಪಂಡಿತರು. ಅದು ಕ್ರಿಸ್ತ ವರ್ಷ ೧೮೪೯-೭೪ರಲ್ಲಿ; ಇಂಗ್ಲೆಂಡಿನ ಪ್ರಸಿದ್ಧ ವಿಶ್ವವಿದ್ಯಾಪೀಠವಾದ ಆಕ್ಸ್‌ಫರ್ಡ್ ಪಟ್ಟಣದಲ್ಲಿ. ಭರತಭೂಮಿಯ ಜ್ಞಾನ ಯಶಸ್ಸನ್ನು ವಿಸ್ತರಿಸಿ ಮಹೋಪಕಾರ ಮಾಡಿರುವ ಆ ಪಂಡಿತರು ತಮ್ಮ ಕಾರ್ಯವು ಪರಿಸಮಾಪ್ತಿಯಾದ ಸಂತೋಷದಲ್ಲಿ ಹೀಗೆ ಬರೆದು, ವೇದದಲ್ಲಿ ತಮಗಿದ್ದ ಆದರಾತಿಶಯವನ್ನು ತೋರಿಸಿರುವರು :—

ಶಾರ್ಮಣ್ಯ ದೇಶ ಜಾತೇನ ಶ್ರೀಗೋತೀರ್ಥ ನಿವಾಸಿನಾ ।
ಮೋಕ್ಷಮೂಲರ ಭಟ್ಟೇನ ಭಾಷ್ಯ [ಮಿದಂ ವಿಶೋಧಿತಂ] ಮೇತದ್ವಿಶೋಧಿತಂ ॥

[ಜರ್ಮನೀ (ಶಾರ್ಮಣ್ಯ) ದೇಶದಲ್ಲಿ ಹುಟ್ಟಿದವನೂ ಶ್ರೇಷ್ಠವಾದ ಆಕ್ಸ್‌ಫರ್ಡ್ (ಗೋತೀರ್ಥ) ಎಂಬಲ್ಲಿ ವಾಸಮಾಡುವವನೂ ಆದ ಮ್ಯಾಕ್ಸ್ ಮುಲ್ಲರ್ (ಮೋಕ್ಷಮೂಲರ) ಪಂಡಿತನಿಂದ ಈ ಭಾಷ್ಯವು ಪರಿಶೋಧಿತವು ("ಎಡಿಟೆಡ್").]

ಈ ಕೆಲಸಕ್ಕಾಗಿ ಗ್ರಂಥದ ಮಾತೃಕಾ ಪ್ರತಿಗಳನ್ನು ಸಂಪಾದಿಸಲು ಅವರು ಐದುವರ್ಷಕಾಲ ಬಹು ಶ್ರಮಪಟ್ಟರು.* ಅವರಿಗೆ ದೊರೆತ ಪ್ರತಿಗಳಲ್ಲಿ ಲೇಖನ ಪ್ರಮಾದಗಳೂ ಅಶುದ್ಧಗಳೂ ಇದ್ದುವಲ್ಲದೆ ಪಾಠ ಭೇದಗಳೂ ಇದ್ದುವು. ಈ ಪಾಠ ಭೇದಗಳಿಗೆ ಕಾರಣವು ಬಹುಶಃ

---

* ಸಾಯಣರು ಸ್ವಯಂ ಬರೆದ ಅಥವಾ ಬರೆಯಿಸಿದ ಮೊಟ್ಟಮೊದಲನೆಯ ಓಲೆಯ ಪ್ರತಿಯು ವಿಜಯನಗರದ ಬಳಿ ನೆಲದೊಳಗೆ ಹೂಳಲ್ಪಟ್ಟಿದೆಯೆಂಬ ಕಥೆಯೊಂದಿತ್ತೆಂದು ಮ್ಯಾಕ್ಸ್ ಮುಲ್ಲರ್ ಅವರು ಹೇಳಿದ್ದಾರೆ. ಆದರೆ ಆ ಕಥೆಗೆ ಆಧಾರವಾಗಲಿ, ಆ ಸ್ಥಳವನ್ನು ತೋರಿಸಿಕೊಡಬಲ್ಲವರಾಗಲಿ ಇರುವಂತೆ ಕಾಣುವುದಿಲ್ಲ.

ಬೇರೊಬ್ಬರ ಬರೆವಣಿಗೆಯ ಮೇಲೆ ಸಾಯಣರು ಮಾಡಿದ ತಿದ್ದಿಕೆಯೇ ಇರಬೇಕೆಂದು ಅನುಮಾನಿಸಲಾಗುತ್ತದೆ. ಮ್ಯಾಕ್ಸ್ ಮುಲ್ಲರವರಿಗೆ ದೊರೆತ ಮಾತೃಕಾ ಪ್ರತಿಗಳಲ್ಲಿ ಅತ್ಯಂತ ಪುರಾತನವಾದುದು ಸಂವತ್ ಶಕದ ೧೬೨೪-೨೫ನೆಯ (ಅಥವಾ ಕ್ರಿಸ್ತ ಶಕದ ೧೫೬೭-೬೮ನೆಯ) ವರ್ಷಗಳಲ್ಲಿ ಲಿಖಿತವಾದುದು.* ಇದು ಕಾಶಿಯ ಸಂಸ್ಕೃತ ಮಹಾಪಾಠಶಾಲಾಧ್ಯಕ್ಷರಾದ ಡಾಕ್ಟರ್ ಬ್ಯಾಲಂಟೈನ್ ಎಂಬುವರಿಗೆ ಲಬ್ಧವಾದುದು. ಹೀಗೆ ಮಾತೃಕಾ ಪ್ರತಿಗಳನ್ನು ಶೇಖರಿಸಿ, ಹೋಲಿಸಿ ನೋಡಿ, ಪ್ರಕಟಣೆಯ ಪ್ರತಿಯನ್ನು ಸಿದ್ಧಗೊಳಿಸಿ, ಆಮೇಲೆ ಅದನ್ನು ಅಚ್ಚುಮಾಡಿಸಿ ಪ್ರಕಾಶಕ್ಕೆ ತರುವ ಕೆಲಸವು ಮ್ಯಾಕ್ಸ್ ಮುಲ್ಲರವರಿಗೆ ೨೫ ವರ್ಷದ—೧೮೪೯ರಿಂದ ೧೮೭೪ರ ವರೆಗಿನ—ಶ್ರಮವಾಯಿತು. ಈ ಗ್ರಂಥ ಪ್ರಕಟನೆಯ ಪ್ರಥಮಾವೃತ್ತಿಯ ವೆಚ್ಚವನ್ನು ಆಗಿನ "ಕುಂಪಣಿ" (ಈಸ್ಟ್ ಇಂಡಿಯಾ ಕಂಪೆನಿ)ಯ ಸರಕಾರವೇ ವಹಿಸಿತ್ತು. ಆದರೆ ಕೆಲವು ವರ್ಷಗಳೊಳಗಾಗಿ ಆ ಆವೃತ್ತಿಯ ಪ್ರತಿಗಳೆಲ್ಲಾ ಹಂಚಿಕೆಯಾಗಿಹೋಗಿ, ಅದು ಪುನರ್ಮುದ್ರಿತವಾಗಬೇಕಾಗಿ ಬರಲು, ಆ ವೇಳೆಗೆ "ಕಂಪೆನಿ"ಯ ಸ್ಥಾನಕ್ಕೆ ಬಂದಿದ್ದ ಸಾರ್ವಭೌಮ ಸರಕಾರವು ಅದಕ್ಕೆ ತಗಲುವ ವೆಚ್ಚವನ್ನು ಕೊಡಲು ಒಪ್ಪದೆಹೋಯಿತು. ಇದರಿಂದ ಮ್ಯಾಕ್ಸ್ ಮುಲ್ಲರವರು ಹತಾಶರಾಗಿ, ಬೇರೆ ಉಪಾಯ ಕಾಣದೆ ಇರಲು, ಆಗ ವಿಜಯನಗರಂ ಸಂಸ್ಥಾನದ† ಸರ್ ಪಶುಪತಿ ಆನಂದ ಗಜಪತಿರಾಜು ಮಹಾರಾಜರವರ ದೇಶಾಭಿಮಾನ ಧರ್ಮಾಭಿಮಾನಗಳ ಔದಾರ್ಯವು ಅವರಿಗೆ ಬೇಕಾಗಿದ್ದ ಧನ ಸಹಾಯವನ್ನೊದಗಿಸಿತು. ಈ ರೀತಿ ಪ್ರಕಟವಾದುದು ಮ್ಯಾಕ್ಸ್ ಮುಲ್ಲರವರಿಂದ ಪುನಃ ಪರಿಷ್ಕೃತವಾದ ಸಾಯಣ ಭಾಷ್ಯದ ದ್ವಿತೀಯಾವೃತ್ತಿ (೧೮೯೨). ಅಲ್ಲಿಂದೀಚೆಗೆ ಅದು ಇಂಡಿಯಾ ದೇಶದಲ್ಲಿಯೂ ಅನೇಕ ಕಡೆ ಅಚ್ಚಾಗಿದೆ.

---

* ಸಂವತ್ ೧೫೨೬ (ಅಥವಾ ಕ್ರಿಸ್ತ ವರ್ಷ ೧೪೭೦) ರಲ್ಲಿ ಲಿಖಿತವಾದ ಪ್ರತಿಯೊಂದನ್ನು ಡಾಕ್ಟರ್ ಹಾಗ್ (Haug) ಎಂಬವರು ಅಹಮದಾಬಾದಿನಲ್ಲಿ ಕಂಡಿದ್ದರಂತೆ. [Page C, MAX MULLER'S *Preface to Vol. V of Edn. I of R. V.*]

† ಈ ವಿಜಯನಗರವು ಸಾಯಣರದಲ್ಲ,—ಹಂಪೆಯಲ್ಲ; ಇದು ಆಂಧ್ರದೇಶದಲ್ಲಿಯ ವಿಶಾಖಪಟ್ಟಣದ ಸಮೀಪದಲ್ಲಿರುವ ಒಂದು ಜಮೀನ್‌ದಾರಿ.

# ಅನುಬಂಧ

(೮೯–೯೦ನೆಯ ಪುಟಗಳನ್ನು ನೋಡಿರಿ.)

## "ಮಾಯಣ್ಣ", "ಸಾಯಣ್ಣ" ಮೊದಲಾದ ಹೆಸರುಗಳ ವಿಚಾರ

ವಿದ್ಯಾರಣ್ಯ ಕಾಲದ ಚರಿತ್ರೆಗೆ ಆಧಾರಗಳಾಗಿರುವ ಶಿಲಾಶಾಸನ ಮೊದಲಾದ ಪ್ರಾಚೀನ ಲೇಖನಗಳ ಪೈಕಿ ಕೆಲವುಗಳಲ್ಲಿ "ಮಾಯಣ್ಣ", "ಸಾಯಣ್ಣ" ಮೊದಲಾದ ಹೆಸರುಗಳು ಒಂದಾವರ್ತಿಗಿಂತ ಹೆಚ್ಚಾಗಿ ಕಾಣಬರುತ್ತವೆ. ಆ ಹೆಸರುಗಳು ಪ್ರತಿಯೊಂದು ಸಾರಿಯೂ ನಮ್ಮ ಕಥಾನಾಯಕರಿಗೇ ಅನ್ವಯಿಸತಕ್ಕುವೆ, ಅಥವಾ ಅದೇ ಹೆಸರಿನ ಇತರ ವ್ಯಕ್ತಿಗಳಾರಾದರೂ ಆ ಎರಡನೆಯ ಮೂರನೆಯ ಸಂದರ್ಭಗಳಲ್ಲಿ ಉದ್ದಿಷ್ಟರಾದವರೆ? ಹೀಗೆಂಬ ಸಂದೇಹಕ್ಕೆ ಆ ಹೆಸರುಗಳ ಪೂರ್ವಾಪರ ಪ್ರಕರಣಗಳಲ್ಲಿ ಕಾರಣಗಳು ತೋರುತ್ತವೆ. ಈ ಕಾರಣಗಳನ್ನು ಗಮನಕ್ಕೆ ತೆಗೆದುಕೊಂಡು ಪರೀಕ್ಷಿಸದಿದ್ದರೆ ಒಬ್ಬ ವ್ಯಕ್ತಿಯ ಹೆಸರು ಇನ್ನೊಬ್ಬನದೆಂದು ಭ್ರಾಂತಿ ಹುಟ್ಟುವುದು ಸ್ವಾಭಾವಿಕ.

ಕ್ರಿಸ್ತ ಶಕ ೧೩೭೭ನೆಯ ಇಸವಿಗೆ ಸೇರಿದ ಶಿಲಾಶಾಸನವೊಂದು ಮೈಸೂರು ಸರಕಾರದ ಪ್ರಾಚೀನ ಲಿಪಿ ಶೋಧನೆಯ ಇಲಾಖೆಯ ೧೯೧೪–೧೫ನೆಯ ವರುಷದ ಕಾರ್ಯವಿವರಣೆಯಲ್ಲಿ (೪೨ನೆಯ ಪುಟ) ಅಚ್ಚಾಗಿದೆ. ಅದು ಹಾಸನದ ಡಿಸ್ಟ್ರಿಕ್ಟು ಕೃಷ್ಣರಾಜಪೇಟೆ ತಾಲ್ಲೂಕು ಅಗ್ರಹಾರ ಬಾಚಹಳ್ಳಿಯ ಶಾಸನ; ತಾಮ್ರದ ಹಲಗೆಯ ಮೇಲೆ ಕೆತ್ತಿದ್ದು; ಸಂಸ್ಕೃತ ಭಾಷೆಯದು; ನಾಗರಾಕ್ಷರದ್ದು; ಸರಕಾರದ ಖಜಾನೆಯಲ್ಲಿದ್ದದ್ದು. ಅದಾದ ಕಾಲ ವಿಜಯನಗರದ ಮೊದಲನೆಯ ಬುಕ್ಕರಾಯನ ಮಗ ಎರಡನೆಯ ಹರಿಹರರಾಯನ ಆಳಿಕೆಯದು. ಅದು ಕ್ರಿಸ್ತ ವರ್ಷ ೧೩೭೭ರಿಂದ ೧೪೦೪ರವರೆಗೆ.

ಅದೊಂದು ದಾನ ಶಾಸನ. ಶಕ "ಅಷ್ಟೋತ್ತರನವತ್ಯಧಿಕದ್ವಿಶತಾಧಿಕೈಕ ಸಹಸ್ರ" (೧೨೯೮) ವರ್ಷಕ್ಕೆ (ಕ್ರಿಸ್ತ ವರ್ಷ ೧೩೭೭ಕ್ಕೆ) ಸರಿಯಾದ ನಳ ಸಂವತ್ಸರ ಫಾಲ್ಗುಣಮಾಸ ಕೃಷ್ಣಪಕ್ಷ ಪ್ರತಿಪತ್ ಭೌಮವಾರ

ಉತ್ತರಾಫಲ್ಗುಣೀ ನಕ್ಷತ್ರದಲ್ಲಿ ಶಿವ ಸಾಯುಜ್ಯವನ್ನು ಪಡೆದ ಶ್ರೀ ವೀರ ಬುಕ್ಕರಾಜನಿಗೆ ಪಾಪಕ್ಷಯದ್ವಾರಾ ಪರಮೇಶ್ವರ ಪ್ರಸಾದ ಸಿದ್ಧಿಯೂ ನಿರತಿಶಯ ಸುಕೃತ ಸಿದ್ಧಿಯೂ ಉಂಟಾಗಬೇಕೆಂದು ಆತನ ಮಗ ಹರಿಹರ ರಾಜನು ಹೋಸಣ (ಹೊಯ್ಸಳ?) ದೇಶದ "ಕಬಾಹು" ಪ್ರಾಂತದ "ಬೆಳಗುಳಬೆಟ್ಟ", "ನಾಗಮಪಲ್ಲಿ", "ಚೌಕಪಲ್ಲಿ" ಮುಂತಾದ ಹದಿಮೂರು ಹಳ್ಳಿಗಳನ್ನೊಳಗೊಂಡ "ಬಾಚೆಯಹಳ್ಳಿ" ಯೆಂಬ ಗ್ರಾಮವನ್ನೂ ಆದರ ಜೊತೆಗೆ ಇತರ "ಐಂಡೆ ಮತಿಗಟ್ಟ" ವೆಂಬ ಗ್ರಾಮವನ್ನೂ ಸೇರಿಸಿ ಅವಕ್ಕೆ "ಇಮ್ಮಡಿ ಬುಕ್ಕರಾಜಪುರ"ವೆಂದು ಹೆಸರಿಟ್ಟು, ಅವುಗಳನ್ನು ಅರವತ್ತು ವೃತ್ತಿಗಳಾಗಿ ವಿಂಗಡಿಸಿ ನಾನಾ ಗೋತ್ರಗಳ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು:—ಹೀಗೆಂಬುದೇ ಆ ಶಾಸನದ ಮುಖ್ಯ ವಿಷಯ. ಆಗ ದಾನ ತೆಗೆದುಕೊಂಡವರು ಯಾರು ಯಾರೆಂದರೆ:—

"....ತತ್ರಾದೌ ಭಾರದ್ವಾಜಗೋತ್ರೋ ಯಜುಶ್ಶಾಖಾಧ್ಯಾಯೀ (೧) **ಸಾಯಣಾ**ಚಾರ್ಯಃ ತತ್ತನಯಃ (೨) **ಸಿಂಗಣಃ** ತ (?) ಗೋತ್ರೋ ಬಹ್ವೃಚೋ ರಾಯರ ಆಶ್ರಿತ ನರ (?) ರಾಜ ವೃತ್ತಿತ್ರಯೇಣ (೩) **ಮಾಧವಾ**ಚಾರ್ಯತನುಜೋ (೪) **ಮಾಯಣ್ಣ** (೫) **ಸಾಯಣ್ಣಾ**ರ್ಯ ತನುಜೌ (೬-೭) **ಮಾದಣ್ಣ ನಾಗಣ್ಣಾ**ವಿತಿ ತ್ರಯಃ ಹಾರೀತಃ ತಾರ್ಕಿಕ ಭಟ್ಟಃ ಆತ್ರೇಯಃ ಚಿನ್ಮಯಭಟ್ಟಃ ಭಾರದ್ವಾಜಃ ಚಂದ್ರಶೇಖರ ಚಕ್ರವರ್ತಿನಃ ತ (?) ಪುತ್ರ ನರಹರಿಭಟ್ಟಃ ಗೌತಮಃ ಜನಾರ್ದನಭಟ್ಟಃ ಭಾರದ್ವಾಜಃ ಕಂದರ್ಪದೀಕ್ಷಿತಃ ಭಾರದ್ವಾಜ ಅಣ್ಣದೀಕ್ಷಿತಃ ಗಾರ್ಗ್ಯಃ ವರಾಹದೀಕ್ಷಿತಃ ವಿಶ್ವಾಮಿತ್ರಃ ಆಪದೇವದೀಕ್ಷಿತಃ ಕೌಶಿಕಃ ನರಸಿಂಹ ದೀಕ್ಷಿತಃ।"

ಈ ವಾಕ್ಯಗಳು ಶಾಸನದಲ್ಲಿರುವುವು. ಅಂಕಿ ಮಾತ್ರ ನಾವು ಹಾಕಿರುವುದು. ನಾವು ಗುರುತಿಸಿರುವ ಆರೇಳು ಹೆಸರುಗಳಲ್ಲಿ:—

೧ನೆಯದು ನಮ್ಮ ಚರಿತ್ರೆಯ ನಾಯಕರದೆಂದು ತಡೆಯಿಲ್ಲದೆ ಹೇಳಬಹುದು.

ಅವರು ಭಾರದ್ವಾಜ ಗೋತ್ರದವರು ಮತ್ತು ಯಜುಶ್ಶಾಖೆಯವರು

ಎಂಬುದನ್ನು ಅಪರ ಅಣ್ಣಂದಿರಾದ (ವಿದ್ಯಾರಣ್ಯ) ಮಾಧವಾ

ಚಾರ್ಯರು ಪರಾಶರ ಸ್ಮೃತಿ ವ್ಯಾಖ್ಯಾನದ ಪೀಠಿಕಾ ಶ್ಲೋಕದಲ್ಲಿ ಸ್ಪಷ್ಟಪಡಿಸಿದ್ದಾರೆ;* ಅದಕ್ಕೆ ಇತರ ಪ್ರಮಾಣಗಳೂ ಇವೆ.

೨ನೆಯದು ಇದೇ ಸಾಯಣಾಚಾರ್ಯರ ಮಗನದೆಂಬುದಕ್ಕೂ ಸಂಶಯವಿರದು. (ಈ ಪುಸ್ತಕದ ಪುಟ ೯೧, ೧೦೪.) "ತತ್ತನಯಃ" ಎಂಬ ಒಕ್ಕಣೆಯು ಮೇಲಿನ ಎರಡು ಹೆಸರುಗಳ ವ್ಯಕ್ತಿ ನಿರ್ಣಯಕ್ಕೂ ಸಾಧಕವಾಗಿದೆ.

ಇನ್ನು ಉಳಿದ ನಾಲ್ಕೈದು ಹೆಸರುಗಳೂ ಸಂದೇಹಕ್ಕೆ ಆಸ್ಪದವಾಗಿವೆ.

೩ನೆಯ ಹೆಸರಿನ "ಮಾಧವಾಚಾರ್ಯ" ರೆಂಬುವರು ಯಾವ ಗೋತ್ರದವರೋ ಶಾಸನ ಲಿಪಿಯಿಂದ ಗೊತ್ತಾಗುವಂತಿಲ್ಲ. ಮೇಲೆ ಹೇಳಿದ ಇಲಾಖಾ ವರದಿಯ ಅಚ್ಚೊತ್ತಿನಲ್ಲಿ सिगण:तगोत्रो ಎಂದೇ ಕಾಣಬರುತ್ತದೆ. ಇದರಲ್ಲಿ ಲಿಪಿಯನ್ನು ಕೆತ್ತಿದ ಅಕ್ಕಸಾಲಿಗನ ಸ್ಖಾಲಿತ್ಯ ಪ್ರಮಾದವೇನಾದರೂ ಇದ್ದೀತೋ ಏನೋ ತಿಳಿಯುವುದು ಅಸಾಧ್ಯ. ಈ "ಮಾಧವಾಚಾರ್ಯ" ನ ಶಾಖೆ ಇಂಥದೆಂದೂ ಹೇಳಿಲ್ಲ. ಈ ಹೆಸರಿನ ಹಿಂದಿನ ಹೆಸರಿನವನು ("ನರ? ರಾಜ"ನು) "ಬಹ್ವೃಚ" ನೆಂದು ಹೇಳಿದೆ. ಈ ಮಾಧವಾಚಾರ್ಯನೂ "ಬಹ್ವೃಚ"ನೇ ಎಂದು ಹೇಳುವುದಾದರೆ, ಅವನು ಮಾಧವ (ವಿದ್ಯಾರಣ್ಯ) ಸಾಯಣರಿಗಿಂತ ಬೇರೆಯಾದ ಇನ್ನಾರೋ ಒಬ್ಬನು ಎಂದು ಹೇಳಬೇಕಾಗುತ್ತದೆ. ಹಾಗಲ್ಲದೆ "ಬಹ್ವೃಚ" ಪ್ರವರವನ್ನು ಈ ಪದದಿಂದ ಬೇರೆಯಿಟ್ಟು, ಈ ಮಾಧವಾಚಾರ್ಯರು ನಮ್ಮ ಚರಿತ್ರೆಯ ನಾಯಕರೇ ಎಂದು ಭಾವಿಸುವುದಾದರೆ, ಆ ಪಕ್ಷದಲ್ಲಿ ಈ ಹೆಸರು ಸಾಯಣಾಚಾರ್ಯರ ಹೆಸರಿಗಿಂತ ಮೊದಲೇ ಬರಬೇಕಾಗಿತ್ತೆಂದು ವಾದಿಸುವುದು ಯುಕ್ತವಾಗುತ್ತದೆ. ಏಕೆಂದರೆ ಭಾರದ್ವಾಜ ಗೋತ್ರದ ಯಜುಶ್ಶಾಖೆಯ ಮಾಧವಾಚಾರ್ಯರು ಅಣ್ಣಂದಿರು, ಸಾಯಣಾಚಾರ್ಯರು ತಮ್ಮಂದಿರು. ಇಷ್ಟೇ ಅಲ್ಲದೆ "ಮಾಧವಾಚಾರ್ಯ ತನುಜಃ" ಎಂದು ಬೇರೆ ಇದೆ.

---

* ಯಸ್ಯ ಬೋಧಾಯನಂ ಸೂತ್ರಂ ಶಾಖಾ ಯಸ್ಯ ಚ ಯಾಜುಷೀ ।
ಭಾರದ್ವಾಜಂ ಯಸ್ಯ ಗೋತ್ರಂ ಸರ್ವಜ್ಞಸ್ಸ ಹಿ ಮಾಧವಃ ॥

ಇದರ ಮತ್ತು ಇತರ ವಿವರಗಳನ್ನು ಪ್ರಕೃತ ಲೇಖಕನ ವಿದ್ಯಾರಣ್ಯ ವೃತ್ತಾಂತದಲ್ಲಿ ತಕ್ಕಷ್ಟು ವಿಸ್ತಾರವಾಗಿ ಕೊಟ್ಟಿದೆ.

ನಮ್ಮ ಇತಿಹಾಸ ಚಕ್ರವರ್ತಿ ಮಾಧವಾಚಾರ್ಯರು ಸಂಸಾರಿಗಳಾಗಿ ಪುತ್ರವಂತರಾಗಿದ್ದರೆಂಬುದಕ್ಕೆ ಎಲ್ಲಿಯೂ ಖಂಡಿತವಾದ ಆಧಾರವಿಲ್ಲ. ಅವರು ಬ್ರಹ್ಮಚರ್ಯದಿಂದ ಸಂನ್ಯಸ್ತರಾದವರೆಂಬುದು ಐತಿಹ್ಯ. ಪ್ರಸ್ತುತ ಶಾಸನದ ಕಾಲದಲ್ಲಿ ಅವರು ವಿದ್ಯಾರಣ್ಯ ನಾಮಧೇಯದಿಂದ ದೇಹಧಾರಣಮಾಡಿ ಜಗತ್ಪ್ರಖ್ಯಾತರಾಗಿದ್ದರು. ಅವರಿಗೆ "ತನುಜ" ನೊಬ್ಬನಿದ್ದಿದ್ದು, ಅವನನ್ನು ನಿರ್ದೇಶಮಾಡುವುದು ಶಾಸನದ ತಾತ್ಪರ್ಯವಾಗಿದ್ದಿದ್ದರೆ ಆ ಹೆಸರನ್ನು ಎಲ್ಲಕ್ಕಿಂತ ಮೊದಲೇ ಹೇಳಿರಬೇಕಾಗಿತ್ತು; ಅಥವಾ ಸಾಯಣರ ಹೆಸರಿನ ಹಿಂದೆಯಾದರೂ, ಅಥವಾ ಸಿಂಗಣನ ಹೆಸರಿನ ಸಂಗಡಲಾದರೂ, ಹೇಳಿರಬೇಕಾಗಿತ್ತು. ಸಾಯಣ ಕುಲಕ್ಕೂ ಮಾಧವಕುಲಕ್ಕೂ ನಡುವೆ ಯಾವನೋ ಒಬ್ಬ ಬಹ್ವೃಚನನ್ನು ಸೇರಿಸಿಟ್ಟಿರುವುದರಿಂದ ಆ ಕುಲಗಳೆರಡೂ ಒಂದೇ ವಂಶದ ಎರಡು ಶಾಖೆಗಳಿರಬಹುದೆಂಬ ಊಹೆಯು ಅಸಂಗತವಾಗುತ್ತದೆ.

ಹಾಗಾದರೆ ಈ ಮಾಧವಾಚಾರ್ಯನಾರು ? ಇವನ ಒಬ್ಬ ಮಗನನ್ನೂ, ಅವನ ಜೊತೆಗೆ (೪–೫) ಮಾಯಣ್ಣ ಸಾಯಣ್ಣನೆಂಬವನೊಬ್ಬನ (ಅಥವಾ ಇಬ್ಬರ) ಇಬ್ಬರು ಮಕ್ಕಳು (೬–೭) ಮಾದಣ್ಣ ನಾಗಣ್ಣ ಎಂಬವರನ್ನೂ ಶಾಸನವು ಒಟ್ಟಿಗೆ ಸೇರಿಸಿ ವೃತ್ತಿಗಳನ್ನು ಹಂಚಿಕೊಟ್ಟಿದೆ. (ಶಾಸನದ ಈ ವಾಕ್ಯವು ಅನ್ವಯಕ್ಕೆ ಸುಲಭವಾಗಿಲ್ಲ.) ಈ ಹೆಸರುಗಳು ನಮ್ಮ ಕಥಾನಾಯಕರ ವಂಶದ ಹೆಸರುಗಳಂತೆ ಕಂಡರೂ ವಸ್ತುತಃ ಅವು ಭಾರದ್ವಾಜ ಗೋತ್ರದ, ಯಜುಶ್ಶಾಖೆಯ, ಆ ವಂಶಕ್ಕೆ ಸೇರಿದವರದೇ ಎಂದು ಸಿದ್ಧಾಂತಮಾಡುವುದು ಅಸಾಧ್ಯವಾಗಿದೆ. ಅವು ಬಹುಶಃ ನಮ್ಮ ಮಾಧವ–ಸಾಯಣ ಕುಟುಂಬಕ್ಕೆ ಬಂಧುಗಳಾಗಿದ್ದ ಬೇರೆ ಮನೆತನದವರ ಹೆಸರುಗಳೆಂದು ಬೇಕಾದರೆ ಊಹಿಸಿಕೊಳ್ಳಬಹುದು.

ಮಾಧವ ಸಾಯಣರಿಗೆ ಇಬ್ಬರು ಸಹೋದರಿಯರಿದ್ದರು. ಅವರಲ್ಲೊಬ್ಬಳಾದ ಸಿಂಗಲಾಂಬಿಕೆಗೆ ಮಾಧವನೆಂಬ ಮಗನೊಬ್ಬನಿದ್ದನೆಂಬುದಕ್ಕೆ ಆಕೆಯ ಹಿರಿಯಮಗ ಲಕ್ಷ್ಮೀಧರ ಮಂತ್ರಿಯ ಶಾಸನ ವಾಕ್ಯದ ಪ್ರಮಾಣವಿದೆ.* ಹೀಗೆ ನಮ್ಮ ಮಾಧವ–ಸಾಯಣರ ಸೋದರಳಿಯನಾದ

* ೮೪–೫ ಪುಟವನ್ನು ನೋಡಿರಿ: ಅಲ್ಲಿ ೪ನೆಯ ಪದ್ಯ.

ಮಾಧವನೇ ಈ ಮೇಲಣ ಶಾಸನದಲ್ಲಿಯ (೩) ನೆಯ ಅಂಕಿಯ ಮಾಧವ ನಿರಬಹುದು. ಈ ಸೋದರಳಿಯನ ಮಗನೇ ಮೇಲೆ (೪-೫) ನೆಯ ಅಂಕಿಯುಳ್ಳ ಮಾಯಣ್ಣ ಸಾಯಣ್ಣನೆಂಬವನಿರಬಹುದು; ಅಥವಾ ಅವನು ಮತ್ತೊಬ್ಬ ಸೋದರಳಿಯನೋ, ಸೋದರಮಾವನ ಮಗನೋ, ಸೋದರತ್ತೆಯ ಮಗನೋ, ಬೀಗರ ಮಗನೋ ಆಗಿರಬಹುದು. ಅಥವಾ ಬಂಧುವರ್ಗದವನಲ್ಲದೆ ಶಿಷ್ಯವರ್ಗದವನಾಗಿರಬಹುದು.

ಈ ಸಂದರ್ಭದಲ್ಲಿ ಇನ್ನೂ ಒಂದು ಸಂಗತಿಯನ್ನು ನಾವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಸಾಯಣ್ಣ, ಮಾಯಣ್ಣ—ಎಂಬ ಹೆಸರುಗಳು ಈಗ ನಮಗೆ ರೂಢಿಯಲ್ಲಿಲ್ಲದಿದ್ದರೂ, ನಮ್ಮ ಇತಿಹಾಸಕ್ಕೆ ಸಂಬಂಧಪಟ್ಟ ಕಾಲದಲ್ಲಿ ಅಂಥಾ ಹೆಸರುಗಳು (ಈಗ ನಮಗೆ ನಾಣಿ, ಶೀನ, ಕಿಟ್ಟ, ವೆಂಕ, ಎಂಬ ಹೆಸರುಗಳಿರುವಂತೆ) ಸಾಮಾನ್ಯವಾಗಿ ಬಳಕೆಯಲ್ಲಿದ್ದುವು; ಅವೇನೂ ಆಗ ಅಪರೂಪವಾದ ಹೆಸರುಗಳಲ್ಲ. ಒಬ್ಬ ಪ್ರಸಿದ್ಧ ಮಾಯಣ್ಣನೂ, ಒಬ್ಬ ಪ್ರಸಿದ್ಧ ಸಾಯಣ್ಣನೂ, ಒಬ್ಬ ಪ್ರಸಿದ್ಧ ಭೋಗಣ್ಣನೂ ಪ್ರವರ್ಧಮಾನರಾಗಿದ್ದ ಕಾಲದಲ್ಲಿಯೇ ಅವರ ಸುತ್ತುಮುತ್ತಲೇ ಎಷ್ಟೋ ಮಂದಿ ಅಪ್ರಸಿದ್ಧ ಮಾಯಣ್ಣರುಗಳೂ, ಅಪ್ರಸಿದ್ಧ ಸಾಯಣ್ಣರುಗಳೂ, ಅಪ್ರಸಿದ್ಧ ಭೋಗಣ್ಣರುಗಳೂ ಇದ್ದರು. ಇದಕ್ಕೆ ಶೃಂಗೇರಿಯ ೩ನೆಯ ಮತ್ತು ೪ನೆಯ ತಾಮ್ರ ಶಾಸನಗಳು ಸಾಕ್ಷಿಯಾಗಿವೆ.* ಈ ಶಾಸನಗಳೆರಡೂ ಇಮ್ಮಡಿ ಹರಿಹರ ರಾಜನವು, ಕ್ರಿಸ್ತ ವರ್ಷ ಸುಮಾರು ೧೩೮೦-೮೧ ಮತ್ತು ೧೩೮೭ರವು. ಇವುಗಳಲ್ಲಿ "ಯಲ್ಲಪ್ಪಂಗಳು, ಬಾಪಂಣಂಗಳು, ಪಂಡರಿದೇವಂಗಳು, ಗೋಪಂಣಗಳು, ಶಿದ್ದಪ್ಪಂಗಳು, ನಾಗಂಣಗಳು, ಅಲ್ಲಪ್ಪಂಗಳು, ಬಾಬಂಣಂಗಳು, ದ್ಯಾವಂಣಗಳು, ಶಿಂಗಂಣಗಳು, ಗಂಗಂಣಗಳು, ಲಕ್ಕಂಣಗಳು, ಪೆರುಮಾಳುಭಟ್ಟರು, ಬಾಚಂಣಂಗಳು, ಸಂಕಂಣಗಳು, ಚನ್ನಂಣಗಳು, ರೂಪಂಣಗಳು, ವೋಬಂಣಗಳು, ಕಾವಂಣಗಳು—ಮೊದಲಾದ, ಈಗ ಬ್ರಾಹ್ಮಣರಲ್ಲಿ ಅಪರೂಪವಾಗಿರುವ, ಹೆಸರುಗಳು ತಂಡೋಪತಂಡವಾಗಿ ಕಾಣಬರುತ್ತವೆ. ಈ ಶಾಸನಗಳಲ್ಲಿ (ಕ್ರಿಸ್ತ ವರ್ಷ

* Page 9, 10, 11, 15, 16, 17 and 18 of *Selections from the Records of the Sringeri Mutt*, Volume I, printed at the Government Branch Press, Mysore, 1927.

೧೩೮೭ರ) ಎರಡನೆಯದೊಂದರಲ್ಲಿಯೇ **"ಸಾಯಂಣ"** ಎಂಬ ಹೆಸರು ಒಂದು ಸಲಕ್ಕಿಂತ ಹೆಚ್ಚಾಗಿ ಬಂದಿದೆ: "ಶ್ರೀವತ್ಸಗೋತ್ರದ ವೀರಪ್ಪಗಳ ಮಕ್ಕಳು ಸಾಯಂಣಗಳಿಗೆ", "ಗೌತಮ ಗೋತ್ರದ ಸಾಯಂಣಗಳ ಮಕ್ಕಳು ಹಿರಿಯಪ್ಪಂಗಳಿಗೆ", "ಕಾಶ್ಯಪ ಗೋತ್ರದ ಮಂಜಂಣಗಳ ಮಕ್ಕಳು ಸಾಯಂಣಗಳಿಗೆ." **"ಮಾಯಂಣ"** ಎಂಬುದೂ ಹಾಗೆಯೇ:—"ಹರಿತಗೋತ್ರದ ಲಕ್ಕಂಣಗಳ ಮಕ್ಕಳು ಮಾಯಂಣಗಳಿಗೆ", "ಕೌಂಡಿಸ್ಯ ಗೋತ್ರದ ಮಾಯಂಣಗಳ ಮಕ್ಕಳು ಹರಿಯಣ್ಣಗಳಿಗೆ", "ವಿಶ್ವಾಮಿತ್ರ ಗೋತ್ರದ ಮಾಯಂಣಗಳ ಮಕ್ಕಳು ಶಂಕರಭಟ್ಟರಿಗೆ." ಹೀಗೆಯೇ ಶಿಂಗಣ್ಣ, ಭೋಗಣ್ಣ ಎಂಬ ಹೆಸರುಗಳೂ ಅನೇಕವಾಗಿವೆ. ಈಗ ಸ್ಮಾರ್ತ ಬ್ರಾಹ್ಮಣರಲ್ಲಿ ಕಾಣಬರದ ಅನೇಕ ನಾಮ ರೂಪಗಳು ಈ ಶಾಸನಗಳಲ್ಲಿವೆ.

ಇಷ್ಟೇ ಅಲ್ಲ "ಆಚಾರ್ಯ" ಎಂಬ ಪ್ರತ್ಯಯವೂ ಆ ಕಾಲದಲ್ಲಿ ಸ್ಮಾರ್ತ ಬ್ರಾಹ್ಮಣರಲ್ಲಿ ರೂಢಿಯಾಗಿದ್ದಿರಬೇಕು. ಈಗ ಅದು ಮಾಧ್ವರಲ್ಲಿಯೂ ಶ್ರೀವೈಷ್ಣವರಲ್ಲಿಯೂ ಸಾಮಾನ್ಯವಾಗಿದೆ. ದಕ್ಷಿಣದೇಶದ ಸ್ಮಾರ್ತರು ಮಾತ್ರ ಆ ಮಾತಿನ ಪ್ರಾಚೀನಾರ್ಥ ಮರ್ಯಾದೆಯನ್ನು ಗಮನದಲ್ಲಿರಿಸಿ, ಕೇವಲ ಮಹಾ ಮಹನೀಯರಾದವರಿಗಾಗಿಯೇ ಅದನ್ನು ಮೀಸಲು ತೆಗೆದಿಟ್ಟಿರುವರೆಂದು ಯಾರೂ ವಾದಿಸಲಾರರು. ಈಗ ಸ್ಮಾರ್ತರು ಉಪಯೋಗಿಸುವ ಭಟ್ಟ, ಶಾಸ್ತ್ರಿ ಎಂಬ ಪದಗಳೂ ಅರ್ಥದಲ್ಲಿ ಕಡಮೆಯೇನೂ ಅಲ್ಲ. ಆದರೂ ಇವುಗಳನ್ನು ಅನ್ವರ್ಥವಾಗಿಯೇ ಉಪಯೋಗಿಸಬೇಕೆಂದು ಯಾರೂ ನಿಯಮ ಮಾಡಿಕೊಂಡಿಲ್ಲ. ಬಂಗಾಳದಲ್ಲಿ "ಭಟ್ಟಾಚಾರ್ಯ" ಎಂಬ ಸಂಕೇತವು ಈಗಲೂ ಸಾಮಾನ್ಯವಾಗಿ ಉಪಯೋಗದಲ್ಲಿದೆ. ದಕ್ಷಿಣ ದೇಶದಲ್ಲಿ ವಿದ್ಯಾರಣ್ಯರ ಕಾಲದಿಂದೀಚೆಗೆ ಯಾವ ಕಾರಣದಿಂದಲೋ —ಬಹುಶಃ ಮತವನ್ನು ಗುರುತುಹಿಡಿಯುವುದು ಸುಲಭವಾಗಬೇಕೆಂದೋ ಏನೋ—"ಶಾಸ್ತ್ರಿ" ಶಬ್ದವು ಸ್ಮಾರ್ತರಿಗೂ, "ಭಟ್ಟ" ಶಬ್ದವು ಸ್ಮಾರ್ತ ಶ್ರೀವೈಷ್ಣವರುಗಳಿಗೂ, "ಆಚಾರ್ಯ" ಶಬ್ದವು ಮಾಧ್ವ ಶ್ರೀವೈಷ್ಣವರುಗಳಿಗೂ ಹಂಚಿಕೆಯಾಗಿ ಹೋಗಿದೆ.

ಮಾಧವ ಸಾಯಣರ ಕಾಲದಲ್ಲಿ "ಆಚಾರ್ಯ" ಎಂಬ ಅಂಕಿತ

ವನ್ನು ಪಡೆದವರು ಸ್ಮಾರ್ತ ಮಂಡಲಿಯಲ್ಲಿ ಇತರರಿದ್ದಿರಬಹುದೆಂಬುದಕ್ಕೆ ಶೃಂಗೇರಿಯ ೪ನೆಯ ಶಾಸನವೇ ದೃಷ್ಟಾಂತವನ್ನೊದಗಿಸುತ್ತದೆ:—

"ಶ್ರೀವತ್ಸಗೋತ್ರದ ಮಾಚಂಣಾಚಾರ್ಯರ ಮಕ್ಕಳು ಮಾರವ ಮಾಚಂಣಂಗಳಿಗೆ ವೃತ್ತಿ."

ಹೀಗೆ ವಿಚಾರದಿಂದ ನೋಡಿದರೆ, ಕೇವಲ "ಸಾಯಣ", "ಮಾಯಣ", "ಮಾಧವಾಚಾರ್ಯ" ಎಂಬ ನಾಮಧೇಯಗಳಿಂದ ಮಾತ್ರವೇ ವ್ಯಕ್ತಿ ನಿರ್ದೇಶಮಾಡುವುದು ಸಾಧುವೆನಿಸಲಾರದು. ಹೆಸರುಗಳ ಜೊತೆಗೆ ಕುಲ ಗೋತ್ರ ಪ್ರವರಗಳನ್ನೂ ಇತರ ಸಂಬಂಧಗಳನ್ನೂ ಸಹ ತೆಗೆದುಕೊಂಡು ನೋಡಬೇಕು. ಈ ವಿವರಗಳು ದೊರೆಯದೆಡೆಯಲ್ಲಿ ಭ್ರಾಂತಿಯುಂಟಾಗುವುದು ಸಹಜ. ಇಂಥಾ ಸಂದರ್ಭಗಳಲ್ಲಿ, ಇತರ ಆಧಾರಗಳಿಂದ ಯಾವ ಸಂಗತಿಗಳು ಸ್ಪಷ್ಟಪಟ್ಟಿರುತ್ತವೆಯೋ ಅಂಥವುಗಳನ್ನು ಮಾತ್ರ ಅಂಗೀಕರಿಸಿಟ್ಟುಕೊಂಡು, ಬೇರೆ ಆಧಾರವಿಲ್ಲದ ಸಂಗತಿಗಳನ್ನು ಒತ್ತಟ್ಟಿಗಿಡಬೇಕು. ಪ್ರಕೃತ, ಅಗ್ರಹಾರ ಬಾಚಹಳ್ಳಿಯ ಶಾಸನದಲ್ಲಿರುವ ೩ನೆಯ ಮಾಧವಾಚಾರ್ಯ, ೪ನೆಯ ಮಾಯಣ್ಣ, ೫ನೆಯ ಸಾಯಣ್ಣ—ಎಂಬ ಪದಗಳು (ಅವು ಬರೆಹಗಾರನ ತಪ್ಪಲ್ಲದಿದ್ದರೆ) ವಿದ್ಯಾರಣ್ಯ ಮಾಧವರಿಗೂ ತತ್ಸಹೋದರರಿಗೂ ಅನ್ವಯಿಸತಕ್ಕುವಲ್ಲವೆಂದೂ, ಈ ಪ್ರಸಿದ್ಧ ಪುರುಷರ ಹೆಸರನ್ನು ಪಡೆದಿದ್ದ ಇತರ ಅಪ್ರಸಿದ್ಧ ಅಥವಾ ಅಲ್ಪ ಪ್ರಸಿದ್ಧ ಜನರಿಗೆ ಸೇರತಕ್ಕುವೆಂದೂ ನಾವು ಊಹಿಸಬೇಕಾಗಿದೆ.

ನಮ್ಮ ಮಾಧವ-ಸಾಯಣರುಗಳ ಗುರುಗಳಾದ ವಿದ್ಯಾತೀರ್ಥ ಸ್ವಾಮಿಗಳವರ "ಸರ್ವಜ್ಞವಿಷ್ಣು" ಎಂಬ ಪೂರ್ವಾಶ್ರಮ ನಾಮಧೇಯದ ವಿಷಯದಲ್ಲಿ ಭ್ರಾಂತಿಗೆ ಕಾರಣ ತೋರಿದ ಸಂದರ್ಭದಲ್ಲಿಯೂ ಈ ಮೇಲಿನ ತೆರದ ಸಮಾಧಾನವನ್ನೇ ಹೇಳಿದೆ (ಪುಟ ೨೬-೨೭).

ನಮ್ಮ ಕಾಲದಲ್ಲಿ ತಿರುವಾಂಕೂರು ಮೈಸೂರು ರಾಜ್ಯಗಳಲ್ಲಿ ಮಂತ್ರಿಗಳಾಗಿ ಪ್ರಸಿದ್ಧ ಮಾಧವರಾಯರುಗಳಿಬ್ಬರೂ ಅವರ ಕಛೇರಿಗಳಲ್ಲಿಯೇ ಸಣ್ಣ ಸಣ್ಣ ಚಾಕರರಾಗಿಯೂ ಇತರ ಕಡೆಗಳಲ್ಲಿಯೂ ಅಪ್ರಸಿದ್ಧ ಮಾಧವ ರಾಯರುಗಳೆಷ್ಟೋ ಮಂದಿಯೂ ಸಮ ಸಾಮಯಿಕರಾಗಿ ಬಾಳಲಿಲ್ಲವೆ?

# ಭೋಗನಾಥ ಕವಿ

---

ಭೋಗನಾಥನು ಮಾಧವಾಚಾರ್ಯ(ವಿದ್ಯಾರಣ್ಯ)ರಿಗೆ ಸಾಯಣನಂತೆಯೇ ಪರಮ ಪ್ರೀತ್ಯಾಸ್ಪದನಾಗಿದ್ದ ತಮ್ಮನು.

ಶ್ರೀಮತೀ ಜನನೀ ಯಸ್ಯ ಸುಕೀರ್ತಿರ್ಮಾಯಣಃ ಪಿತಾ ।
ಸಾಯಣೋ ಭೋಗನಾಥಶ್ಚ ಮನೋಬುದ್ಧೀ ಸಹೋದರೌ ॥ *

—ಎಂದು ಅವರೇ ಹೇಳಿರುವುದು ವಾಚಕರಿಗೆ ಜ್ಞಾಪಕದಲ್ಲಿರಬಹುದು.

ಭೋಗನಾಥನು ವಯಸ್ಸಿನಲ್ಲಿ ಸಾಯಣನಿಗಿಂತ ಬಹಳ ಕಿರಿಯವನೆಂದು ತೋರುತ್ತದೆ. ಸಾಯಣನು ನೆಲ್ಲೂರು ಪ್ರಾಂತದಲ್ಲಿ ರಾಜಪ್ರತಿನಿಧಿಯಾಗಿದ್ದುಕೊಂಡು ಸಂಗಮ ಯುವರಾಜನಿಗೆ ಶಿಕ್ಷಕನಾಗಿದ್ದ ಕಾಲದಲ್ಲಿ (ಸುಮಾರು ಕ್ರಿ. ಶ. ೧೩೫೪) ಭೋಗನಾಥನು ಆ ಯುವರಾಜನ ಒಡನಾಡಿಯಾಗಿದ್ದಿರಬೇಕು. ಆತನು—

ಇತಿ ಭೋಗನಾಥ ಸುಧಿಯಾ "ಸಂಗಮ ಭೂಪಾಲ ನರ್ಮಸಚಿವೇನ" ।

—ಎಂದು ಹೇಳಿಕೊಂಡಿರುವುದನ್ನು ಹಿಂದೆ (ಪುಟ ೮೪) ನೋಡಿದ್ದೇವೆ.

---

* ಇದು ಪರಾಶರ ಮಾಧವೀಯದ ಪೀಠಿಕಾ ಶ್ಲೋಕಗಳಲ್ಲೊಂದು.

ಕೆಲವು ಪ್ರಾಚೀನ ಲೇಖನಗಳಲ್ಲಿ "ಭೋಗನಾಥ" ಎಂಬ ಪದದ ಸ್ಥಳದಲ್ಲಿ "ಸೋಮನಾಥ" ಎಂದೂ "ಭೋಮನಾಥ" ಎಂದೂ ಇರುವಂತೆ ತಿಳಿಯಬಂದಿದೆ. ಪೂನಾ ಪಟ್ಟಣದ ಆನಂದಾಶ್ರಮದಿಂದ ಪ್ರಕಟಿತವಾದ "ರುದ್ರಾಧ್ಯಾಯ"ದ ಪೀಠಿಕೆಯಲ್ಲಿ ಆ ಗ್ರಂಥದ ಸಂಶೋಧಕರಾದ ವಾಮನ ಶಾಸ್ತ್ರಿಗಳವರು—ಮೇಲಿನ ಶ್ಲೋಕದ ಉತ್ತರಾರ್ಧವನ್ನು—

ಸಾಯಣಃ ಸೋಮನಾಥಶ್ಚ ಮನೋಬುದ್ಧೀ ಸಹೋದರೌ ॥

—ಎಂದು ಪಾಠಾಂತರವಿರುವಂತೆ ಉದಾಹರಿಸಿದ್ದಾರೆ. ಈ "ಸೋಮ", "ಭೋಮ" ಎಂಬ ಪಾಠಗಳು ಕೇವಲ ಲೇಖಕನ (ಗ್ರಂಥದ ನಕಲು ಬರೆದವನ) ಪ್ರಮಾದವೇ ಹೊರತು ಪ್ರಸ್ತುತ ವ್ಯಕ್ತಿಯ ನಿಜವಾದ ಹೆಸರಲ್ಲವೆಂದು ಧಾರಾಳವಾಗಿ ಹೇಳಬಹುದು. "ಭೋಗನಾಥ" ಎಂಬ ಪಾಠವೇ ಸಾಮಾನ್ಯವಾಗಿ ಎಲ್ಲ ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಕಂಡುಬಂದಿರುವುದು. ಅದಲ್ಲದೆ "ಅಲಂಕಾರ ಸುಧಾನಿಧಿ"ಯ ಕೆಲವು ಪದ್ಯಗಳಲ್ಲಿ ಶಬ್ದಾಲಂಕಾರವು ಪ್ರಧಾನವಾಗಿರುವುದರಿಂದ, ಅಲ್ಲಿ "ಭೋಗನಾಥ"ಎಂದಿದ್ದರೆ ಹೊಂದಿಕೊಂಡು ಅರ್ಥವಾಗುವಂತೆ "ಭೋಮ", "ಸೋಮ" ಎಂದಿದ್ದರೆ ಆಗಲಾರದು.

## ಯುವರಾಜ ಮಿತ್ರ

ಭೋಗನಾಥನು ಸಂಗಮನಿಗೆ ಪರಮಾಪ್ತಮಿತ್ರನಾಗಿದ್ದನೆಂಬ ಸಂಗತಿ ಆತನ 'ಶೃಂಗಾರಮಂಜರಿ'ಯಲ್ಲಿರುವ ಈ ಕೆಳಗಿನ ಶ್ಲೋಕದಲ್ಲಿಯೂ ಸೂಚಿತವಾಗಿದೆ:—

ಅನ್ಯೋನ್ಯ ಪ್ರಣಯಾಪರಾಧ ನಿಭೃತ ವ್ಯಾಪಾರ ದೀನಾತ್ಮನೋಃ ॥
ದೇವೀ ಸಂಗಮಯೋಃ ಪರಾಙ್ಮುಖತಯಾಪ್ಯೇಕಾಸನೇ
ತಸ್ಥುಷೋಃ ॥
ಮಧ್ಯೇ ಸಾಯಣಮಂತ್ರಿಣಾ ನ ಭಣಿತಂ ಕಿಂ ಭೋಗನಾಥೇನ ವಾ
ನೋಕ್ತಂ ಸರ್ವಸಖೀಜನೇನ ಚ ತದಪ್ಯನ್ಯೋನ್ಯಮುದ್ವೀಕ್ಷಿತಂ ॥

—ಅಲಂಕಾರ ಸುಧಾನಿಧಿ.

[ಸಂಗಮ ರಾಜನಿಗೂ ಆತನ ರಾಣಿಗೂ ಒಂದಾನೊಂದು ದಿನ ಯಾವುದೋ ಪ್ರೇಮ ಕಲಹದ ನಿಮಿತ್ತದಿಂದ ಮಾತುಕತೆಗಳು ನಿಂತುಹೋಗಿದ್ದುವು; ಇಬ್ಬರೂ ಮನಸ್ಸು ಕುಗ್ಗಿದವರಾಗಿದ್ದರು; ಒಂದೇ ಪೀಠದ ಮೇಲೆ ಕುಳಿತಿದ್ದರೂ ಅವರ ಮುಖಗಳು ಮಾತ್ರ ಬೇರೆ ಬೇರೆ ಕಡೆಗೆ ತಿರುಗಿದ್ದುವು. ಆದರೂ ಆಗ ಸಾಯಣಾಚಾರ್ಯರು ಮಧ್ಯಸ್ಥಿಕೆಯ ಮಾತನ್ನೊಂದನ್ನೂ ಆಡಲಿಲ್ಲ; ಭೋಗನಾಥನೂ ಆಡಲಿಲ್ಲ; ಸಖೀಜನರೂ ಏನನ್ನೂ ಹೇಳಲಿಲ್ಲ. (ಸ್ವಲ್ಪ ಹೊತ್ತಿನ ಮೇಲೆ) ಅವರಿಬ್ಬರೂ ತಾವಾಗಿಯೇ ಮುಖ ತಿರುಗಿಸಿ ಪರಸ್ಪರ ನೋಡಿಕೊಂಡರು.]

ಚೆನ್ನಾಗಿದೆಯಲ್ಲವೆ ಈ ಚಿತ್ರ? ಭೋಗನಾಥನು ದೂರದಲ್ಲಿ ನಿಂತಿರುವ ಸ್ತುತಿಪಾಠಕನು ಮಾತ್ರವೇ ಆಗಿದ್ದಿದ್ದರೆ ಈ ಸರಸ ಪ್ರಸಂಗದಲ್ಲಿ ಆತನ ಹೆಸರಿಗೆ ಅವಕಾಶವಿದ್ದಿರದು. ಸಂಗಮನೂ ತಾನೂ ಜೊತೆಗಾರರೆಂಬುದರ ಸೂಚನೆಯನ್ನು ಭೋಗನಾಥನು ಇನ್ನೂ ಕೆಲವೆಡೆ ಕೊಟ್ಟಿದ್ದಾನೆ:—

ಭೂಭೃತಃ ಸಂಗಮೇಂದ್ರಸ್ಯ ಭೋಗನಾಥಸ್ಯ ವಾ ಕವೇಃ ।
ವಾರಣಂ ವಾರಣೋವಾಥ ದ್ವಾರಿ ಪ್ರವಿಶತಾಂ ಹಿ ಯೇ ॥

[ರಾಜನಾದ ಸಂಗಮನ ಬಾಗಲಿಗೇ ಆಗಲಿ, ಕವಿಯಾದ ಭೋಗನಾಥನ ಬಾಗಲಿಗೇ ಆಗಲಿ ಯಾರು ಬರುತ್ತಾರೆಯೋ ಅವರಿಗೆ (ವಾರಣಂ=ಥಕಲ್‌ಪಟ್ಟಿ) ತಡೆಬೀಳುವುದು, ಇಲ್ಲವೆ (ವಾರಣಃ) ಆನೆ ದೊರೆಯುವುದು.]

ಭೋಗನಾಥನೂ ತನ್ನ ಅಣ್ಣಂದಿರಂತೆಯೇ ಶ್ರೀಕಂಠನಾಥರೆಂಬ ಗುರುಗಳ ಶಿಷ್ಯನಾಗಿದ್ದಿರಬಹುದೆಂಬುದನ್ನು ಹಿಂದೆ (ಪುಟ ೮೧, ೮೩–೮೪) ತೋರಿಸಿದೆ.

ಭೋಗನಾಥ ಜೀವಿತ ಕಾಲದ ಅಂತ್ಯಾವಧಿಯನ್ನು ನಿಷ್ಕರ್ಷೆಗೊಳಿಸಲು ಯಾವ ಆಧಾರವೂ ದೊರೆತಿಲ್ಲ. ಆತನ ಹೆಸರು ಆತನ ಅಣ್ಣಂದಿರ ಹೆಸರುಗಳಷ್ಟು ಹೆಚ್ಚಾಗಿ ಪ್ರಸಿದ್ಧವಾಗದಿರುವುದನ್ನು ನೋಡಿದರೆ, ಒಂದು ವೇಳೆ ಆತನು ಅಲ್ಪ ವಯಸ್ಸಿನಲ್ಲಿಯೇ—ಯಾವ ಒಂದು ಮಹಾಕಾರ್ಯವನ್ನಾದರೂ ಸಾಧಿಸಲು ಬೇಕಾಗುವಷ್ಟು ಕಾಲದೊಳಗಾಗಿಯೇ—ದೈವಾಧೀನನಾದನೇನೋ ಎಂಬ ಅನುಮಾನವು ಹುಟ್ಟುತ್ತದೆ.

ಮಾಧವ ಸೋದರ ತ್ರಿತಯದ ಸೋದರಿ ಸಿಂಗಲಾಂಬೆಯ ಮಗ ಲಕ್ಷ್ಮೀಧರಾಮಾತ್ಯನು, ವಿಜಯನಗರದ ದೇವರಾಯ ಮಹಾರಾಜನ (ಕ್ರಿ. ಶ. ೧೪೦೬ರಿಂದ) ಮಂತ್ರಿಯಾಗಿದ್ದ ಕಾಲದಲ್ಲಿ, ಹಂಪೆಯ ಕೃಷ್ಣಸ್ವಾಮಿಯ ಗುಡಿಯ ಬಳಿ ಬರೆಯಿಸಿದ ಶಿಲಾ ಶಾಸನದಲ್ಲಿ* ತನ್ನ ಮಾವರು ಸೋದರಮಾವಂದಿರಲ್ಲಿ ಮೊದಲನೆಯವರಿಬ್ಬರನ್ನು—"ಮಾದರಸ ಸಾಯಣರೆಂಬ ಮಹಾಪ್ರಧಾನರಾ"—ಮಾತ್ರವೇ ಸ್ಮರಿಸಿದ್ದಾನೆ. ಮೂರನೆಯವನಾದ ಭೋಗನಾಥನ ಹೆಸರು ಬಹುಶಃ ಅಂದಿಗೇ ಲೋಕಕ್ಕೆ ಮರೆತು ಹೋಗಿತ್ತೋ ಏನೋ! ಆತನ ಅಲ್ಪಾಯುಷ್ಕತೆಯೇ ಈ ಮರೆವಿಗೆ ಮುಖ್ಯ ಕಾರಣವೋ ಏನೋ!

## ಭಾರತೀತೀರ್ಥರಲ್ಲ

ಭೋಗನಾಥನ ಇತರ ಜೀವಿತ ವಿವರಗಳಾವುವೂ ತಿಳಿದುಬಂದಿಲ್ಲ. ಹೀಗೆ ಈತನ ಉತ್ತರ ವಯಸ್ಸಿನ ಸ್ಥಿತಿಗತಿಗಳೂ ಭಾರತೀಕೃಷ್ಣತೀರ್ಥ ಸ್ವಾಮಿಗಳವರ (ಪುಟ ೫೩) ಪೂರ್ವಾಶ್ರಮದ ಸ್ಥಿತಿಗತಿಗಳೂ ಅವಿಜ್ಞಾತಗಳಾಗಿರುವುದರಿಂದಲೂ, ಆದರೂ ಅವರಿಬ್ಬರೂ ಮಾಧವ–ವಿದ್ಯಾರಣ್ಯರಿಗೆ ಅತಿನಿಕಟ ಸಂಬಂಧಿಗಳೆಂಬುದು ಮಾತ್ರ ನಿರ್ವಿವಾದಾಂಶ

* S. I. Inscription, No. 267 (A. R. No. 38 of 1889) Edited by Rao Bahadur H. Krishna Sastri. ಈ ಪುಸ್ತಕದ "೭೪–೭೬" ಪುಟವನ್ನು ನೋಡಿರಿ.

ವಾಗಿರುವುದರಿಂದಲೂ, ಅವರಿಬ್ಬರೂ ಒಂದೇ ವ್ಯಕ್ತಿಯಾಗಿರಬೇಕೆಂದು ಕೆಲವರು ಅನುಮಾನಿಸಯತ್ನಿಸಿದ್ದಾರೆ. ಭೋಗನಾಥನು ತನ್ನ ಅಣ್ಣಂದಿರಿಗಿಂತ ಮುಂಚೆಯೇ ಸಂನ್ಯಾಸಗ್ರಹಣಮಾಡಿ ಭಾರತೀತೀರ್ಥಾಭಿಧಾನದಿಂದ ಶೃಂಗೇರಿಯಲ್ಲಿ ನೆಲಸಿರಬೇಕೆಂದು ಅವರ ಊಹೆ. ಆದರೆ ಈ ಅನುಮಾನವನ್ನು ಖಂಡಿಸಬಲ್ಲ ಪ್ರಮಾಣವೊಂದು ಸ್ಪಷ್ಟವಾಗಿ ಸಿದ್ಧವಾಗಿದೆ. ಶೃಂಗೇರಿಯ ೧ನೆಯ ಶಾಸನದಿಂದ* ಶಕ ವರ್ಷ ೧೨೬೮ಕ್ಕೆ ಸರಿಯಾದ ಫಾಲ್ಗುಣ ಬಹುಳ ೧ ಗುರುವಾರದಂದು, ಎಂದರೆ ಕ್ರಿಸ್ತ ವರ್ಷ ೧೩೪೬ರಲ್ಲಿ, ವಿಜಯನಗರದ ಆದಿ ಹರಿಹರ ಮಹಾರಾಜನು ಆ ಕ್ಷೇತ್ರಕ್ಕೆ ಯಾತ್ರೆ ಬೆಳಸಿ, ಭಾರತೀತೀರ್ಥ ಶ್ರೀಪಾದಂಗಳವರನ್ನು ಸಂದರ್ಶಿಸಿ, ತಚ್ಛಿಷ್ಯರ ಪ್ರಯೋಜನಕ್ಕಾಗಿ ಭೂದಾನಗಳನ್ನು ಮಾಡಿದನೆಂದು ಗೊತ್ತಾಗಿದೆ. ಎಂದರೆ, ಕ್ರಿ. ವ. ೧೩೪೬ರ ವೇಳೆಗೇ ಭಾರತೀತೀರ್ಥರೆಂಬ ಯತಿಗಳು ಶೃಂಗೇರಿಯಲ್ಲಿ ಗುರುಪೀಠವನ್ನಲಂಕರಿಸಿದ್ದರು.

ಅಲ್ಲಿಂದ ೧೦ ವರ್ಷಗಳಾದ ಬಳಿಕ—ಎಂದರೆ ಕ್ರಿ. ವ. ೧೩೫೬ರಲ್ಲಿ—ಭೋಗನಾಥನು ಇನ್ನೂ ಗೃಹಸ್ಥನಾಗಿಯೇ, ಸಂಗಮರಾಜನ ನರ್ಮಸಚಿವನಾಗಿಯೇ, ಇದ್ದನೆಂಬುದು ಬಿಟ್ಟರಗುಂಟೆಯ ಶಾಸನದಿಂದ (ಹಿಂದೆ ಪುಟ ೮೩–೮೪) ಪ್ರತ್ಯಕ್ಷವಾಗಿದೆ. ಆತನೇ ಭಾರತೀತೀರ್ಥನೆನಿಸಿಕೊಂಡು ಕೆಲವು ಕಾಲ ಸಂನ್ಯಾಸಿಯಾಗಿದ್ದು, ಆ ಬಳಿಕ ಗಾರ್ಹಸ್ಥ್ಯಕ್ಕೆ ಹಿಂದಿರುಗಿದನೆಂದು ಹೇಳುವುದಾದರೆ ಅದು ಅತಿಸಾಹಸವಾದೀತು. ಹೀಗೆ ಈ ಎರಡು ಶಾಸನಗಳನ್ನೂ ಸಮಾಲೋಚನೆಗೆ ತೆಗೆದುಕೊಂಡು ನೋಡಿದರೆ, ಭಾರತೀತೀರ್ಥರು ಬೇರೆ ವ್ಯಕ್ತಿ, ಭೋಗನಾಥನು ಬೇರೊಂದು ವ್ಯಕ್ತಿಯೆಂಬುದು ನಿಸ್ಸಂಶಯವಾಗುತ್ತದೆ.

## ರಸಿಕಶೇಖರ

ಭೋಗನಾಥನು ತನ್ನ ಅಣ್ಣಂದಿರಂತೆ ಆಚಾರ್ಯ ಪದವಿಯನ್ನು ಹತ್ತಿದವನಾಗಲಿಲ್ಲ; ಆತನು ವೇದ ವೇದಾಂತ ವ್ಯಾಖ್ಯಾತೃವೂ ಶಾಸ್ತ್ರಾರ್ಥ ಪ್ರತಿಪಾದಕನೂ ಆಗದೆ ಹೋದನು ; ರಾಜಕಾರ್ಯಪ್ರವಿಷ್ಟನೂ ಆದಂತಿಲ್ಲ. ಲೋಕದ ಬೋಧನೆ ಪಾಲನೆಗಳಿಗೆ ಸೇರಿದ ಕಾರ್ಯಪ್ರಪಂಚದಿಂದ ದೂರ

---

* *Selections from the Records of the Sringeri Mutt*, Vol. I, page 1.

ವಾಗಿರುವ ಭಾವನಾ ಪ್ರಪಂಚದ ಬೆಡಗಿಗೂ ಅಲ್ಲಿಯ ಶಬ್ದಜೀವನದ ವಿಲಾಸಕ್ಕೂ ಆತನು ಮನಸೋತಿದ್ದಂತೆ ಕಾಣುತ್ತದೆ. ಅಥವಾ ಒಂದು ಮಹಾಕಾರ್ಯ ಸಂಸಿದ್ಧಿಗೆ ಬೇಕಾದಷ್ಟು ಜೀವಿತಾವಕಾಶವೇ ಆತನಿಗೆ ದೊರೆಯದೆ ಹೋಯಿತೋ? ಆತನ ಗುರುತಾಗಿ ನಮಗೆ ದೊರೆತುಬಂದಿರುವ ಕಾವ್ಯಾಂಶಗಳನ್ನು ನೋಡಿದರೆ ಆತನು ರಸಿಕಶೇಖರನಾಗಿದ್ದನೆಂಬ ಸೂಚನೆ ಮಾತ್ರ ವಿಶದವಾಗಿ ತೋರಿಬರುತ್ತದೆ. ಇರಲಿ; ಅಣ್ಣನು ತ್ಯಾಗಚಕ್ರವರ್ತಿಯಾಗಿರುವಾಗ ತಮ್ಮನು ಭೋಗಚಕ್ರವರ್ತಿಯಾಗುವುದರಲ್ಲಿ ಒಂದು ಸ್ಥೂಲವಾದ ನ್ಯಾಯವುಂಟೆಂದು ಐಹಿಕ ಜೀವಿಗಳು ಭಾವಿಸಬಹುದಲ್ಲವೆ?

## ಉದಾರಿ

ಭೋಗನಾಥನು ಸ್ವತಃ ಕವಿಯಾಗಿದ್ದುದಲ್ಲದೆ ಇತರ ಕವಿ ಪಂಡಿತರುಗಳ ಯೋಗ್ಯತೆಯನ್ನು ಪರೀಕ್ಷಿಸುವಷ್ಟು ದಕ್ಷನಾಗಿಯೂ, ಅವರಿಗಾಶ್ರಯ ಕೊಡುವಷ್ಟು ಉಪಪನ್ನನಾಗಿಯೂ ಉದಾರಿಯಾಗಿಯೂ ಇದ್ದನೆಂಬುದು ಮೇಲೆ ಕೊಟ್ಟಿರುವ ಆತನ (ವಾರಣಂ ವಾರಣೋ ವಾ) ವಾಕ್ಯದಿಂದ ಬೋಧ್ಯವಾಗಿದೆ.

ಆತನ ಔದಾರ್ಯದ ಸೂಚನೆಗಳು "ಅಲಂಕಾರಸುಧಾನಿಧಿ" ಯಲ್ಲಿ ಇನ್ನೂ ಕೆಲವೆಡೆ ಉಂಟು :—

ಯಥಾ ಪುರಾ ಕೌಶಿಕ ವೃತ್ರಯೋರ್ವಿಮರ್ಥೋ ।
ನಭಃಸ್ಥಲೇ ಕೌಶಿಕ* ಕಾಕ ಸಂಕುಲೇ ॥
ತಥಾ ನಿಯುದ್ಧಂ ಭುವಿ ಭೋಗನಾಥ ಭೋ ।
ಭವತ್ಕಟಾಕ್ಷಾಸ್ಮದಕಿಂಚನತ್ವಯೋಃ ॥

[ಗೂಗೆ ಕಾಗೆಗಳ* ಗುಂಪಿನಿಂದ ತುಂಬಿರುವ ಆಕಾಶದೊಳಗೆ ಪೂರ್ವದಲ್ಲಿ ಇಂದ್ರನಿಗೂ ವೃತ್ರಾಸುರನಿಗೂ ಹೇಗೆ ಯುದ್ಧ ನಡೆಯಿತೋ, ಹಾಗೆ ಈಗ ಭೂಮಿಯ ಮೇಲೆ,—ಎಲೈ ಭೋಗನಾಥ ಪ್ರಭುವೆ,—ನಿನ್ನ ಕೃಪಾದೃಷ್ಟಿಗೂ ನಮ್ಮ ದುರ್ದಶೆಗೂ ಕಾಳಗ ನಡೆಯುತ್ತಿದೆ.]

* ಇಲ್ಲಿ ಗೂಗೆ ಕಾಗೆಗಳ ಪ್ರಸ್ತಾವ ಬಂದಿರುವುದು ಎರಡರ್ಥವುಳ್ಳ "ಕೌಶಿಕ" (ಇಂದ್ರ, ಗೂಬೆ)ಎಂಬ ಪದದ ವಿಚಿತ್ರ ಶಕ್ತಿಯನ್ನು ತೋರಿಸಿಕೊಡುವುದಕ್ಕೋಸ್ಕರ. ಇದನ್ನು ಕುರಿತು ಗ್ರಂಥಕಾರರು ಹೀಗೆ ಟೀಕಿಸಿದ್ದಾರೆ.—"ಏಷಾಂ ಸಾಂಕರ್ಯಂ ಪರಿಹಾರ್ಯಂ। ಪ್ರಾಧಾನ್ಯೇನ ವ್ಯಪದೇಶಃ."—ಈ ಪದ್ಯದಲ್ಲಿ ಇನ್ನಾವ ಸ್ವಾರಸ್ಯವೂ ಕಾಣುವುದಿಲ್ಲ.

ಎಂದರೆ, ಭೋಗನಾಥನ ದಾನ ನಿರತತೆಯಿಂದ ವಿದ್ವಜ್ಜನರ ದಾರಿದ್ರ್ಯವು ತೊಲಗುತ್ತಿತ್ತೆಂದು ತಾತ್ಪರ್ಯ.

ಭೋಗನಾಥನ ಕೃತಿಗಳಲ್ಲಾವುದೂ ಮುದ್ರಿತವಾಗಿರುವಂತೆ ಕಾಣು ವುದಿಲ್ಲ. "ಅಲಂಕಾರಸುಧಾನಿಧಿ"ಯು ಆತನ ಕೃತಿಯಾಗಿದ್ದರೂ ಇರ ಬಹುದೆಂಬುದನ್ನು ಹಿಂದೆ ತರ್ಕಿಸಿದೆ (ಪುಟ ೧೧೫). ಅದು ಆತನದೇ ಆಗಿದ್ದ ಪಕ್ಷದಲ್ಲಿ, ಅದೊಂದು ಆತನಿಂದಾದ ಶಾಸ್ತ್ರ ಜಾತಿಯ ಗ್ರಂಥ ವೆನ್ನಬಹುದು. ಕಾವ್ಯಾಲಂಕಾರಗಳ ಸ್ವರೂಪ ನಿರೂಪಣೆಯು ಶಾಸ್ತ್ರ ಕಾರ್ಯವೇ ಅಲ್ಲವೆ?

ಇನ್ನು ಭೋಗನಾಥನ ಹೆಸರಿಗೆ ಗುರುತಾಗಿ ದೊರೆತಿರುವುವು ಆರು ಕಾವ್ಯಗಳೆಂದು ತಿಳಿದುಬಂದಿದೆ:—

(೧) ರಾಮೋಲ್ಲಾಸಃ.
(೨) ತ್ರಿಪುರ ವಿಜಯಂ.
(೩) ಉದಾಹರಣಮಾಲಾ.
(೪) ಮಹಾಗಣಪತಿ ಸ್ತವಃ.
(೫) ಶೃಂಗಾರಮಂಜರೀ.
(೬) ಗೌರೀನಾಥಾಷ್ಟಕಂ.

ಇವೆಲ್ಲವೂ "ಅಲಂಕಾರ ಸುಧಾನಿಧಿ"ಯಲ್ಲಿ ಪ್ರಸ್ತಾವಿತವಾಗಿವೆ.

"ತೇಷಾಮುದಾಹರಣಾನಿ ಭೋಗನಾಥ ಕಾವ್ಯೇಷು ದ್ರಷ್ಟವ್ಯಾನಿ॥"

......"ಶ್ರೀ ಭೋಗನಾಥೇನ ಮಹಾಕವಿನಾ ಸಂಘಟಿತಾ ॥"

—ಎಂಬೀ ತೆರದ ವಾಕ್ಯಗಳು "ಸುಧಾನಿಧಿ"ಕರ್ತರಿಗೆ ಭೋಗನಾಥ ಕವಿ ತ್ವದ ವಿಷಯದಲ್ಲಿದ್ದ ಮೆಚ್ಚುಗೆಯನ್ನೂ ಪ್ರಮಾಣಬುದ್ಧಿಯನ್ನೂ ತೋರಿಸು ತ್ತವೆ. ಇಲ್ಲಿ ನಾವು ಆತನ ಕೃತಿಗಳಿಂದ ಮಾದರಿಗಾಗಿ ಒಂದೆರಡು ಪದ್ಯ ಗಳನ್ನು ಮಾತ್ರ ಕೊಡಲು ಸಾಧ್ಯವಿದೆ. ಇವೆಲ್ಲವೂ "ಅಲಂಕಾರ ಸುಧಾನಿಧಿ"ಯಲ್ಲಿ ಉದಾಹೃತಗಳಾಗಿರತಕ್ಕವು. ಅವುಗಳ ಮೂಲ ಗ್ರಂಥಗಳು ದೊರೆತಿಲ್ಲ.

## ರಾಮೋಲ್ಲಾಸದಿಂದ

ಶಿಶಿರೇಷು ಶಿಲಾತಲೇಷು ರಾಮಃ ।
ತರುಮೂಲೇಷು ತಲೋದರೀಂ ದರೀಷು ॥
ಸರಸೀಷು ಚ ವಿಶ್ರಮಯ್ಯ ಮುಗ್ಧಾಂ ।
ಪಥಿ ಪಾಷಾಣಿಸಿ ತಾಂ ಶನೈರನೈಷೀತ್ ॥

[ರಾಮನು ಆ ಮೃದುಗಾತ್ರಿಯೂ ಸರಳಸ್ವಭಾವದವಳೂ ಆದ ಸೀತೆಯನ್ನು ತಣ್ಣನೆಯ ಬಂಡೆಗಳ ಮೇಲೆಯೂ ಮರಗಳ ನೆರಳಿನಲ್ಲಿಯೂ ಕಣಿವೆಗಳೊಳಗೂ ಸರೋವರಗಳ ದಡದಲ್ಲಿಯೂ ವಿಶ್ರಮಗೊಳಿಸುತ್ತಾ, ಕಲ್ಲು ಮುಳ್ಳಿನ ದಾರಿಯಲ್ಲಿ ಮೆಲ್ಲಮೆಲ್ಲನೆ ನಡೆಯಿಸುತ್ತಾ ಕರೆದುಕೊಂಡು ಹೋದನು.]

ಕಾವ್ಯಜ್ಞರು ಉಪದೇಶಿಸಿರುವ ಪ್ರಕಾರವಾಗಿ ಕಾವ್ಯ ರಚನೆಯಲ್ಲಿ ಪದಸಂಯೋಜನ ಕ್ರಮವನ್ನು ಅಭ್ಯಾಸಮಾಡಬೇಕೆಂಬುದಕ್ಕೆ ಈ ಮೇಲಣ ಪದ್ಯವನ್ನು ಉದಾಹರಣೆಯಾಗಿ ಕೊಟ್ಟಿದೆ.

## ತ್ರಿಪುರವಿಜಯದಿಂದ

ಉಪರ್ಯಧೋ ರಚಿತಮಯಸ್ಯ ರಾಜತಂ ।
ತಯೋರ್ದ್ವಯೋಃ ಕನಕಮಯಂ ಚ ಮಧ್ಯತಃ ॥
ಪುರತ್ರಯಂ ದಹನ ವಿಧೇಃ ಪುರೋಪ್ಯಗಾತ್ ।
ಸಧೂಮತಾಂ ಸದಹನತಾಂ ಸಭಸ್ಮತಾಂ ॥

[ (ಮಯನು ರಾಕ್ಷಸರಿಗಾಗಿ ನಿರ್ಮಿಸಿದ ತ್ರಿಪುರವೆಂಬ) ಮೂರು ಪಟ್ಟಣಗಳಲ್ಲಿ ಮೇಲಿನದು ಕಬ್ಬಿಣದಿಂದಲೂ ನಡುವಣದು ಚಿನ್ನದಿಂದಲೂ ಕೆಳಗಿನದು ಬೆಳ್ಳಿಯಿಂದಲೂ ಕಟ್ಟಿತ್ತಾದಕಾರಣ, ಅವುಗಳು (ಈಶ್ವರನಿಂದ) ಸುಟ್ಟುಹೋಗುವುದಕ್ಕಿಂತ ಮುಂಚೆಯೇ (ಒಂದರ ಕೆಳಗೊಂದು) ಕ್ರಮವಾಗಿ ಹೊಗೆ, ಉರಿ, ಬೂದಿಗಳೋಪಾದಿಯಲ್ಲಿ ಇದ್ದುವು.]

ಈ ಪದ್ಯವನ್ನು ಉದಾಹರಿಸಿರುವುದರ ಉದ್ದೇಶವೂ ಮೇಲಿನದರಂತೆಯೇ.

ಪೌಲೋಮ್ಯಾಃ ಕರಯುಗ ಯಂತ್ರ ವಾರಿಧಾರಾ ।
ದೀರ್ಘಾ ಯಾ ದಶಶತಲೋಚನೇ ಪಪಾತ ॥
ಸಾ ಪಕ್ಷ್ಮವ್ಯತಿಕರ ಚಂಚರೀಕ ಚಂಚ ।
ನ್ನೇತ್ರಾಬ್ಜಸ್ತಬಕ ಭೃದೇಕನಾಳಮಾಸೀತ್ ॥

[ಶಚೀದೇವಿಯು (ಜಲಕ್ರೀಡೆಯಲ್ಲಿ) ಎರಡು ಕೈಗಳಿಂದಲೂ ಹಿಡಿದುಕೊಂಡು ಆಡಿಸುತ್ತಿದ್ದ ಜೀರ್ಕೊಳವಿಯಿಂದ ಹೊರಟ ನೀರಿನ ಉದ್ದವಾದ ಧಾರೆಯು ಇಂದ್ರನ ಸಾವಿರ ಕಣ್ಣುಗಳಲ್ಲಿಯೂ ಬಿದ್ದಿತು. ಆಗ ಹಾಗೆ ಚಂಚಲಿತವಾದ ಆ ಕಣ್ಣು ರೆಪ್ಪೆಗಳು ದುಂಬಿಗಳಂತೆ ಆಡುತ್ತಿರಲು ಆ ನೀರಿನ ಧಾರೆಯೇ ಅನೇಕ ಹೂ ಗೊಂಚಲುಗಳನ್ನು ತಳೆದು ನಿಂತ ಒಂದು ಕಮಲದ ಕಾಂಡದಂತೆ ಆಯಿತು.]

ಬ್ರಹ್ಮಸೃಷ್ಟಿಗೂ ಕವಿಸೃಷ್ಟಿಗೂ ಇರುವ ವೈಲಕ್ಷಣ್ಯವನ್ನು ತೋರಿಸುವುದಕ್ಕಾಗಿ ಕೊಟ್ಟಿರುವ ಉದಾಹರಣೆ ಈ ಮೇಲಿನದು.

## ಉದಾಹರಣಮಾಲೆಯಿಂದ

"ಆಕರ್ಣ್ಯ.." ಎಂಬ ಪದ್ಯವನ್ನು ಹಿಂದೆ ಕೊಟ್ಟಿದೆ (ಪುಟ ೯೮). ಇಲ್ಲಿ ಮತ್ತೊಂದು :—

ಸೌಭಾಗ್ಯಂ ತವ ಕಿಂಸ್ವಿದಂ ಸುಕೃತಿನಃ ಕಿಂ ಮಂತ್ರಶಕ್ತಿಃ ಪರಾ।
ಯತ್ ತ್ವಾಂ ಸಾಯಣ ಮಂತ್ರಿವರ್ಯ ಸುಭಗಂ
ಪ್ರಾಪ್ತಾಃ ಸ್ವಯಂ ವಲ್ಲಭಂ॥
ಲಕ್ಷ್ಮೀರ್ವಾಗಧಿದೇವತಾ ವಸುಮತೀ ಕೀರ್ತಿಃ ಕ್ರಮಾನ್ನೀತಯೋ।
ಮಾತ್ಸರ್ಯಂ ನ ವಿಭಾವಯಂತಿ ರಚಯಂತ್ಯನ್ಯೋನ್ಯ
ಸಾಹಾಯ್ಯಕಂ॥

[ಎಲೈ ಸಾಯಣ ಮಂತ್ರಿಯೆ, ಲಕ್ಷ್ಮಿಯೂ, ಸರಸ್ವತಿಯೂ, ಭೂದೇವಿಯೂ, ಕೀರ್ತಿಯೂ, ನೀತಿದೇವತೆಯೂ ತಾವಾಗಿ ಬಂದು ನಿನ್ನನ್ನು ಪತಿಯಾಗಿ ವರಿಸಿ ಸೇರಿ, ಪರಸ್ಪರ ಅಸೂಯೆಯಿಲ್ಲದವರಾಗಿಯೂ, ಒಬ್ಬರಿಗೊಬ್ಬರು ಅನುಕೂಲರೇ ಆಗಿಯೂ, ಇರುವರು. ಇದೇನು ನಿನ್ನ ಪುಣ್ಯದಿಂದಾಗಿರುವ ಭಾಗ್ಯೋದಯವೊ? ಅಥವಾ ನಿನ್ನ ಶ್ರೇಷ್ಠವಾದ ಮಂತ್ರ (ಉಪಾಯ ಸಂಧಾನ) ಶಕ್ತಿಯ ಫಲವೊ?]

## ಮಹಾಗಣಪತಿ ಸ್ತವದಿಂದ

"ಮಂದಾರಶ್ಚ ತರುಃ" ಎಂಬ ಪದ್ಯವನ್ನು ಹಿಂದೆ ಶ್ರೀಕಂಠ ಗುರು ಕಥೆಯಲ್ಲಿ (ಪುಟ ೮೧) ಉದಾಹರಿಸಿದೆ. ಗಣಪತಿಯ ವಾಹನನಾದ ಇಲಿರಾಯನು ತನ್ನ ಪ್ರಭುವಿನ ಮನೆಗೆ ತಾನೇ ಅಧಿಕಾರಿಯೆಂಬ ಗರ್ವಾಭಿಮಾನಗಳಿಂದ ಕೂಡಿದವನಾಗಿ, ದೇವ ನೈವೇದ್ಯಕ್ಕಾಗಿ ಬಂದ ಸಪ್ತಸಮುದ್ರಗಳನ್ನೂ ಹೇಗೆ ವಿನಿಯೋಗಮಾಡಿದನೆಂಬುದನ್ನು ಬಣ್ಣಿಸುವ ಶ್ಲೋಕವನ್ನು ಈ ಕೆಳಗೆ ಕೊಟ್ಟಿದೆ:—

ಕ್ಷಾರಾತ್ಮಾ ದ್ವಾರಿ ರೋಧಂ ಕ್ಷಣಮಿಹ ಕಲಯ
ತ್ವೈಕ್ಷವೋ ರಕ್ಷಣೀಯೋ ।
ಮದ್ಯೋ ಮಾದ್ಯಸ್ತು ವೇದ್ಯಾಶ್ರಯತು ಘೃತವಪುಃ
ಪೌಷ್ಕರಂ ಸನ್ನಿಧಾನಂ ॥

ದಧ್ಯಾಕಾರೋ ದಯಾರ್ಹಃ ಪ್ರವಿಶತು ಕಿಮಯಂ
ದುಗ್ಧರೂಪೋ ರಸಾಖ್ಯಃ ।
ಸ್ವೀಕಾರ್ಯಃ ಸ್ವೈರಮಿತ್ಥಂ ತವ ಸಲಿಲನಿಧೀನಾ
ಮುರಾಖ್ಯಾತ್ಯುಪೇತಾನ್ ॥

[" ಅವನಾರು ಉಪ್ಪಿನವನೋ ? ಅವನನ್ನು ಒಂದು ಘಳಿಗೆ ಬಾಗಿಲ ಬಳಿ ತಡೆಯಿರಿ. ಇವನು ಕಬ್ಬಿನವನೋ ? ಇವನನ್ನು ಭದ್ರವಾಗಿ ನೋಡಿಕೊಳ್ಳತಕ್ಕದ್ದು. ಇನ್ನಿದು ಮದ್ಯವೋ ? ಅದು ಮತ್ತನ್ನುಂಟುಮಾಡತಕ್ಕುದೆಂದು ತಿಳಿದೇ ಇದೆ. ತುಪ್ಪವೋ ? ಅದು ಬಿಸಿಲಿನಲ್ಲಿರಿಸಲ್ಪಡಲಿ. ಮೊಸರೋ ? ಅದು ನಮ್ಮ ಕೃಪೆಗೆ ಯೋಗ್ಯವಾದದ್ದು, ಇತ್ತ ಬರಲಿ. ಇದೇನು ಹಾಲೆಂಬುದೋ ? ಇದನ್ನು ಇಷ್ಟ ಪ್ರಕಾರ ಸ್ವೀಕರಿಸತಕ್ಕದ್ದೇ ಸರಿ."—ಹೀಗೆಂಬುದಾಗಿ ಮೂಷಿಕವು ಸಮೀಪಕ್ಕೆ ಬಂದ ಸಪ್ತಸಮುದ್ರಗಳನ್ನು ಕುರಿತು ಹೇಳುತ್ತದೆ.]

## ಶೃಂಗಾರಮಂಜರಿಯಿಂದ

ಮೇಲೊಂದು ಪದ್ಯವನ್ನು ಕೊಟ್ಟಿದೆ—" ಅನ್ಯೋನ್ಯ ಪ್ರಣಯಾಪರಾಧ " ಇತ್ಯಾದಿ. ಇಲ್ಲಿ ಇನ್ನೊಂದೆರಡು :—

ಸಂಭಾವ್ಯಂತೇ ಭರಿತ ಭುವನಾಸ್ಸಾಗರೋಪಾಂತ ವಾಸಾಃ ।
ವಿದ್ಯುದ್ವಲ್ಲೀ ವಲಯಿತವಪುರ್ವಿಭ್ರಮಾಃ ಕಾಲಮೇಘಾಃ ॥
ಅನ್ಯೋನ್ಯಾಂಗ ವ್ಯತಿಕರಮಮೂಷಾಮಂತರಾ ಗೋಪಿಕಾನಾಂ ।
ರಾಸಕ್ರೀಡಾ ರಸಿಕಮನಸಾ ರಾಗಿಣಾ ದೈವತೇನ ॥

[ ತಮ್ಮ ಅಂಗ ವಿಲಾಸಗಳಿಂದ ಒಬ್ಬರನ್ನೊಬ್ಬರು ಮೀರಿಸುತ್ತಿರುವಂಥಾ ಗೋಪಿಕಾ ಸ್ತ್ರೀಯರುಗಳ ನಡುವೆ ರಾಸಕ್ರೀಡೆಯಲ್ಲಿ ಆಸಕ್ತನಾಗಿ ಮೆರೆಯುತ್ತಿದ್ದ ಆ ದೇವರನ್ನು (ಕೃಷ್ಣನನ್ನು) ನೋಡಿದರೆ,—ಲೋಕವನ್ನೆಲ್ಲಾ ಸಮುದ್ರದವರೆಗೂ ಆವರಿಸಿಕೊಂಡು, ಮಿಂಚಿನ ಬಳ್ಳಿಯ ಅಂಚುಗಳನ್ನು ತಳೆದಿರುವ ಕಾರ್ಮುಗಿಲುಗಳ ವಿಲಾಸದಂತೆ ಆ ದೃಶ್ಯವು ಕಾಣಬರುತ್ತಿತ್ತು.]

ಸಾರತ್ವೇನ ಸಮುದ್ಭವಃ ಕಿಮಮೃತಾತ್ ಕಿಂ ವಾ ಸುಧಾ
ದೀಧಿತೇಃ ।
ಬಿಂಬಾತ್ ಕಿಂ ನು ಕೃಶೋದರೀ ಪರಿಣತಂ ಮಾಯಾಮಯಂ
ತನ್ಮಹಃ ॥
ದೃಷ್ಟೇರ್ನಿರ್ವೃತಿಕಾರಿವಸ್ತ್ವಿದಮಿತಃ ಪೂರ್ವಂ ನ ದೃಷ್ಟಂ ಮಯಾ ।
ಪ್ರಾಯಃ ಸಾಯಣಮಂತ್ರಿ ಮಂತ್ರ ವಿತತಿಃ ಪ್ರೀತ್ಯೈವಮೇವಂ
ಸ್ಥಿತಾ ॥

[ಎಲೆ ಗೆಳತಿ, ಮೋಹವನ್ನುಂಟುಮಾಡತಕ್ಕ ಈ ತೇಜಸ್ಸೇನು ಅಮೃತದಿಂದ ಹುಟ್ಟಿಬಂದಿರುವ ಅದರ ಸಾರವೋ? ಅಥವಾ ಚಂದ್ರಬಿಂಬದಿಂದ ಬಂದಿರುವುದೋ? ನೋಟಕ್ಕೆ ಈ ಪರಿಯಾಗಿ ತೃಪ್ತಿಕೊಡಬಲ್ಲ ವಸ್ತುವನ್ನು ನಾನು ಇದುವರೆಗೂ ಕಂಡುದಿಲ್ಲ. ಬಹುಶಃ ಇದು ಸಾಯಣ ಮಂತ್ರಿಯು ಮಂತ್ರಶಕ್ತಿಯು ಪ್ರಭಾವದಿಂದ ನನ್ನ ಪ್ರೀತಿಯ ದೃಷ್ಟಿಗೆ ಈ ರೀತಿಯಾಗಿ ಕಾಣುತ್ತಿರಬಹುದು.]

ಪ್ರಾಯಶಃ ಇದೂ "ಶೃಂಗಾರ ಮಂಜರಿ"ಯದೇ ಇರಬಹುದು :—

ಆಸೀನ್ನಾದಃ ಪ್ರಥಮಮುದಿತಂ ಸೂತ್ರಜಾತಂ ಶ್ರುತೀನಾಂ ।
ತಸ್ಮಾಜ್ಜಜ್ಞೇ ಸರಿಗಮಪಧನ್ಯಕ್ಷರಾಣಾಂ ವಿಕಾಸಃ ॥
ತಸ್ಮಾದ್ರಾಗಃ ಸ್ಫುಟಮುದಮಿಷತ್ತಸ್ಮುಖಾದೇವ ಶೌರೇಃ ।
ವೇಣೋರಾಸನ್ವಿವಿಧರಚನಾಸ್ಸಾನುಬಂಧಾಃ ಪ್ರಬಂಧಾಃ ॥

[ಮೊದಲು ನಾದ ಹುಟ್ಟಿತು; ಅದರಿಂದ ಶ್ರುತಿ (ಸಂಗೀತದ ಶ್ರುತಿ ಅಥವಾ ವೇದ) ಗಳ ಮೂಲ ಸೂತ್ರಗಳ ಗುಂಪು ಹೊರಟಿತು; ಅದರಿಂದ ಸರಿಗಮಪಧನಿ ಎಂಬ ಸ್ವರ ಕ್ರಮವು ಉಂಟಾಯಿತು; ಇದರಿಂದ ರಾಗವು ಸ್ಪಷ್ಟವಾಗಿ ಸಿದ್ಧಿಸಿತು—ಹೀಗೆ ಕೃಷ್ಣನ ಕೊಳಲಿನಿಂದ ಬಗೆಬಗೆಯ ಪ್ರಬಂಧ ನಿರ್ಮಾಣಗಳು ಹೊರಹೊರಟವು.]

ಈ ಕಾವ್ಯದ ಪದ್ಯಗಳು ಇನ್ನೂ ಕೆಲವು ದೊರೆಯುತ್ತವೆ:—

ಪುಷ್ಯತ್ಸೌರಭ ಪುಷ್ಪಭಾರ ನಿಪತದ್ಭೃಂಗಾವಲೀ ಝುಂಕ್ರಿಯಾ ।
ಹುಂಕಾರೈರವಧೀರ್ಯ ಗಂತುಮನಸಾ ಸಂತರ್ಜಯಂತೀವ ಸಾ ॥
ಕ್ರೀಡಾಲಂಪಟ ಸಾಯಣ ಪ್ರಣಯವತ್ಯೇಷಾ ತವಾರಾಮ ಭೂ ।
ರುದ್ಯತ್ಪಲ್ಲವ ವಲ್ಲಿ ವೇಲ್ಲಿತ ತರುಚ್ಛನ್ನಾ ಸಮಾಲಕ್ಷ್ಯತೇ ॥

* * * * *

ಈಷನ್ಮೃಷ್ಟ ಕುರಂಗನಾಭಿ ತಿಲಕೈರಿದ್ಧಾಂಬು ಘರ್ಮೋದಯೈಃ ।
ವ್ಯಕ್ತೀಭೂತ ರದಕ್ಷತ ವ್ಯತಿಕರೈರ್ವ್ಯಾಕೀರ್ಣ ಚೂರ್ಣಾಲಕೈಃ ॥
ಶಾಪ್ಯತ್ಕುಂಡಲ ತಾಂಡವೈಶ್ಶಿಮುಖೀ ವಕ್ತ್ರೈಸ್ತ್ವದಾವಿಷ್ಕೃತೈಃ ।
ರಂಹೋ ವಿಭ್ರಮುದರ್ಪಣೈರ್ನಿಜಗದೇ ಸಂಭೋಗ ಲೀಲಾಶ್ರಮಃ ॥

*        *        *        *        *

ಸ್ವೇದಾಂಭಃ ಕೃತಮಜ್ಜನಾ ತನುಲತಾ ಪ್ರೋನ್ಮೃಷ್ಟಪತ್ರಾವಳೀ ।
ಪುಷ್ಯತ್ಸೌರಭ ಲೋಭ ಪೂರ್ಣ ಪತಿತೈಃ ಪುಷ್ಪಂಧಯೈರ್ವೀಜಿತಾ ॥
ವಿಸ್ರಸ್ತಾಕಬರೀ ಕಪೋಲಫಲಕ ವ್ಯಾಕೀರ್ಣ ಚೂರ್ಣಾಲಕಾ ।
ಸೇಯಂ ಸಾಯಣ ಮಂತ್ರಿಣಾ ಪ್ರಿಯಸಖೀ ಭುಕ್ತೇವ ಸಂಲಕ್ಷ್ಯತೇ॥

ಈ ಪದ್ಯಗಳ ರಸಪರಿಪೂರ್ಣತೆಯು ಭೋಗನಾಥನ ಹೆಸರನ್ನು ಸಾರ್ಥಕವೆನಿಸುವಹಾಗಿದೆ.

## ಗೌರೀನಾಥಾಷ್ಟಕದಿಂದ

ಕಷ್ಟಾಯ ಪ್ರಸವಾಯ ಶಾಸ್ತ್ರಪದವೀ ಭ್ರಷ್ಟಾಯ ಕಾಂಕ್ಷಾನಲ ।
ಪ್ಲುಷ್ಟಾಯ ಪ್ರಥಮಾನ ಮತ್ಸರ ಗುಣಾಪಿಷ್ಟಾಯ ದುಷ್ಟಾತ್ಮನೇ ॥
ರುಷ್ಟಾಯ ಪ್ರತಿಷಿದ್ಧ ಕಾರ್ಯಘಟನಾ ತುಷ್ಟಾಯ ದೃಷ್ಟಾಗಸೇ ।
ಗೌರೀನಾಥ ಗಣಾಧಿನಾಥಜನಕ ಪ್ರೀಣಾತು ಮಹ್ಯಂ ಭವಾನ್ ॥

[ಕೆಟ್ಟ ಜನ್ಮವನ್ನೆತ್ತಿ, ಶಾಸ್ತ್ರಮಾರ್ಗದಿಂದ ತಪ್ಪಿದವನಾಗಿ, ಆಶೆಯೆಂಬ ಬೆಂಕಿಯಿಂದ ಬೆಂದು, ಅಸೂಯಾಪರವಶನಾಗಿ, ದುಷ್ಟ ಸ್ವಭಾವದಿಂದ ಕೂಡಿ, ರೋಷಾವೇಶವನ್ನು ತಾಳಿ, ಅಕಾರ್ಯಮಾಡುವುದರಲ್ಲಿಯೇ ಸಂತೋಷವುಳ್ಳವನಾಗಿ, ನಾನಾಬಗೆಯ ಪಾಪಗಳನ್ನು ನೋಡಿರುವ ನನ್ನಲ್ಲಿ,—ಎಲೈ ಗಣೇಶಜನಕನಾದ ಗೌರೀಪತಿಯೆ—ಕರುಣೆ ತೋರುವವನಾಗು.]

ಮೂಢಾಯ ಪ್ರತಿಕೂಲ ಕಾಲ ಫಣಭೃಲ್ಲೀಢಾಯ ರೂಢಿಚ್ಯುತಿ ।
ಪ್ರೌಢಾಯ ಪ್ರಬಲಾನಪೋಢ ಕಲಹ ವ್ಯೂಢಾಯ ಗಾಢಾಂಹಸೇ ॥
ಗೂಢಾಯ ಪ್ರಥಮಾನ ದುರ್ಮದಕುಲಾರೂಢಾಯ ಸೋಢಾಖಿಲಂ।
ಗೌರೀನಾಥ ಗಣಾಧಿನಾಥಜನಕ ಪ್ರೀಣಾತು ಮಹ್ಯಂ ಭವಾನ್ ॥

[ಮೂಢನಾಗಿ, ಕೆಟ್ಟಕಾಲವೆಂಬ ಹಾವಿನಿಂದ ಕಚ್ಚಲ್ಪಟ್ಟವನಾಗಿ, ಸಂಪ್ರದಾಯದಿಂದ ತಪ್ಪುವುದರಲ್ಲಿ ಗಟ್ಟಿಗನೆನ್ನಿಸಿಕೊಂಡು, ಮೊಂಡನಾದ ಜಗಳಗಂಟಿಗನಾಗಿ, ದಟ್ಟವಾದ ಪಾಪ

ರಾಶಿಯಲ್ಲಿ ಅಡಗಿಕೊಂಡು, ಗರ್ವ ಮದಗಳ ಆವೇಶಕ್ಕೆ ಸಿಕ್ಕಿ, ಎಲ್ಲ ಅವಸ್ಥೆಗಳನ್ನೂ ತಾಳಿರುವಂಥಾ ನನ್ನಲ್ಲಿ—ಎಲೈ ಗಣೇಶಜನಕನಾದ ಗೌರೀಪತಿಯೆ,—ಕರುಣೆ ತೋರುವವನಾಗು.]

## ಉಪಸಂಹಾರ

ಈ ಉದಾಹರಣೆಗಳಿಂದ ಭೋಗನಾಥನಿಗೆ ಕವಿತೋಪಕರಣಗಳಾದ ವ್ಯಾಕರಣ ನಿಘಂಟುಗಳ ಬಲವೂ, ಪದಬಂಧ ಚಮತ್ಕಾರವೂ, ಶ್ರುತಿಹಿತ ವಿವೇಚನೆಯೂ, ಮೇಲಾಗಿ ರಸೋತ್ಪಾದಕಶಕ್ತಿಯೂ ತಕ್ಕಷ್ಟಿದ್ದುವೆಂದು ತೋರಿಬರುತ್ತದೆ. ಅಲಂಕಾರ ಗ್ರಂಥದಲ್ಲಿ ಕವಿತ್ವದ ಔತ್ತಮ್ಯದ ನಿದರ್ಶನಗಳು ಮಾತ್ರವೇ ಅಲ್ಲದೆ ಸಾಮಾನ್ಯತೆ ನ್ಯೂನತೆಗಳ ನಿದರ್ಶನಗಳೂ ಇರಬೇಕಾಗುತ್ತವೆಯಾದಕಾರಣ, ಅದರಲ್ಲಿ ಉದಾಹರಿಸಿರುವ ಪದ್ಯಗಳಿಂದಲೇ ತತ್ಕರ್ತೃಗಳ ಕವನ ಯೋಗ್ಯತೆಯನ್ನು ನಿಷ್ಕರ್ಷೆಮಾಡಲಾಗುವುದಿಲ್ಲ. ಒಂದು ಕಾವ್ಯಕ್ಕೆ ನ್ಯಾಯವಾಗಿ ಬೆಲೆಕಟ್ಟಬೇಕಾದರೆ ಅದನ್ನು ಸಮಗ್ರವಾಗಿ ತೆಗೆದುಕೊಂಡು ನೋಡಿ, ಅದರ ಒಟ್ಟಿನ ಗುಣವನ್ನು ಕಂಡುಹಿಡಿದುಕೊಳ್ಳಬೇಕು. ಈಗ ಭೋಗನಾಥ ಕಾವ್ಯಗಳಲ್ಲೊಂದೂ ಸಮಗ್ರವಾಗಿ ಸಿಕ್ಕಿಲ್ಲ. ಆತನ ವಸ್ತು ಸಮುದಾತ್ತತೆಯೆಷ್ಟರದು, ಸಂದರ್ಭ ಪರಿಪಾಕ ಕ್ರಮವೆಂತಹುದು, ರೀತಿ ವಿಶೇಷವೆಂತಹುದು, ಉಪಜ್ಞೆ ಪ್ರತಿಭೆಗಳೆಷ್ಟರವು—ಎಂಬುದನ್ನು ತಿಳಿಸುವ ಸಾಮಗ್ರಿ ನಮ್ಮೆದುರಿಗಿಲ್ಲ. ಆತನಿಗೆ ಸಾಂಪ್ರದಾಯಿಕವಾದ ಕವಿಸಮಯ ವಿಜ್ಞಾನ ಮತ್ತು ಕಾವ್ಯಾಭ್ಯಾಸ, ಮನೋರಂಜಕವಾದ ಪದಸರಣಿ, ಯಥೋಚಿತವಾದ ಭಾವಪುಷ್ಟಿ ಮತ್ತು ಕಲ್ಪನಾಶಕ್ತಿ—ಇಷ್ಟು ಇದ್ದುವೆಂಬುದಕ್ಕೇನೂ ಸಂದೇಹವಿಲ್ಲ. ಮುಖ್ಯವಾಗಿ ಆತನ ಕಾಲವು ಕವಿತೆಯ ಕಾಲವಲ್ಲ; ಅದು ಪಾಂಡಿತ್ಯದ ಕಾಲ, ವ್ಯಾಖ್ಯಾತೃಗಳ ಕಾಲ, ಶಾಸ್ತ್ರ ಪ್ರಾಚುರ್ಯದ ಕಾಲ—ಎಂದು ಹಿಂದೆಯೇ ಹೇಳಿದೆ. ಮಾಧವ ಸಾಯಣರ ವಿದ್ವನ್ಮಂಡಲಿಯಲ್ಲಿ ಏಕ ಪ್ರಕಾರವಾಗಿ ನಡೆಯುತ್ತಿದ್ದ ವ್ಯಾಖ್ಯಾನಾಯಾಸದ ನಡುವೆ ಆಗಾಗ ಒಂದಿಷ್ಟು ರಸಿಕ ವಿನೋದವನ್ನೊದಗಿಸಿ, ಅವರ ಮನಸ್ಸಿಗೆ ನವ್ಯತೆಯನ್ನುಂಟುಮಾಡಿಕೊಡಲು ಭೋಗನಾಥನ ಕವಿತಾ ಚಮತ್ಕೃತಿಯು ಸರ್ವಪ್ರಿಯವಾದ ಸಾಧನವಾಗಿದ್ದಿರಬೇಕು. ಇದೊಂದು ಆತನ ಹೆಮ್ಮೆಗೆ ಕಾರಣವಾದ ವಿಷಯವೇ ಅಲ್ಲವೆ?